ಶ್ರೀರಸ್ತು.

ರಾಜಹಂಸ ಗ್ರಂಥಮಾಲಾ! ಪ್ರಥಮ ಕುಸುಮ!!

# ಶ್ರೀ ಸುಜ್ಞಾನ ಚಂದ್ರೋದಯ

( ಪ್ರಥಮ ಭಾಗ )

ಎಂಬೀ ಗ್ರಂಥವು

ಕಾ. ಶಿವರಾಮದಾಸರಿಂದ ವಿರಚಿಸಲ್ಪಟ್ಟು

ರಾಜಹಂಸ ಗ್ರಂಥಮಂಡಲಿಯವರಿಂದ

ಪ್ರಕಟಿಸಲ್ಪಟ್ಟಿತು.

ಪ್ರಥಮ ಮುದ್ರಣ.



ವಿಳಾಸ—ಮ್ಯಾನೇಜರ್, ರಾಜಹಂಸ ಗ್ರಂಥಮಂಡಲಿ
ಬೆಂಗಳೂರು ಸಿಟಿ.
1919.

ಬೆಲೆ ರೂ. ೧-೦-೦ ಪೋಸ್ಟೇಜು. ೦—೨—೦






ವಾತನು ಸ್ವಯಂಭುವೂ, ಸ್ವಪ್ರಕಾಶನೂ, ಸ್ತ್ರೀ, ಪುರುಷ, ನಪುಂಸಕಾದಿ ಭೇದವಿಲ್ಲದವನೂ, ಸಜಾತೀಯ, ವಿಜಾತೀಯ, ಸ್ವಗತ, ಪರಗತಾದಿ ಭೇದವಾದಕ್ಕವಕಾಶವಿಲ್ಲವನೂ ಆದ ಸರ್ವಲೋಕೇಶ್ವರನಾಗಿರುವನೋ, ಯಾವಾತನು, ಜನನ ಮರಣಗಳು, ರೂಪನಾಮಗಳು, ಕ್ರಿಯಾದೋಷಗಳು, ಗುಣರಂಜನಗಳು, ಮುಂತಾದ ದುಃಖ ಬಂಧನಗಳಿಲ್ಲದ ಅವಾಙ್ಮನಸ ಗೋಚರನಾಗಿರುವನೋ, ಸತ್ಯ, ಶಾಂತ, ದಯಾ, ಧರ್ಮಾದಿ ಕಲ್ಯಾಣ ಗುಣಗಳಿರುವುದರಿಂದ ಸಗುಣನೆಂತಲೂ, ಛಲ, ಕಪಟ, ಪಕ್ಷಪಾತ, ದ್ವೇಷಾಸೂಯಾದಿ ದುರ್ಗುಣಗಳಿಲ್ಲದಿರುವುದರಿಂದ ನಿರ್ಗುಣನೆಂತಲೂ ಜ್ಞಾನಿಗಳು ಯಾವಾತನನ್ನು ಹೊಗಳುವರೋ, ಸರ್ವಸಂಗ ಪರಿತ್ಯಾಗ ಮಾಡಿ ಅರಣ್ಯವಾಸಿಗಳಾಗಿ, ಘೋರತಪವನ್ನಾಚರಿಸುತ್ತ, ಮೋಕ್ಷೈಕ ಪರಾಯಣರಾಗಿರುವ ಯೋಗಿ ಪುಂಗವರು, ಯಾವ ಪರಬ್ರಹ್ಮನ ದಿವ್ಯ ಸಂದರ್ಶನವನ್ನಪೇಕ್ಷಿಸಿ "ಆನಂದಮಯ! ಪ್ರಜ್ಞಾನಮಯ! ಸುಜ್ಞಾನಮಯ! ತೇಜೋಮಯ! ಧರ್ಮಮಯ! ದಯಾಮಯ! ಸತ್ಯಮಯ ಶಾಂತಮಯ! ಕಲ್ಯಾಣಮಯ! ಕಾರುಣ್ಯಮಯ! ಲಾವಣ್ಯಮಯ! ಓಂಕಾರಮಯ! ಸಾಮ್ರಾಜ್ಯಮಯ! ವೇದಾಂತಮಯ! ಶುಭಮಯ! ಸುಖಮಯ! ವಿನೋದಮಯ! ವಿಜ್ಞಾನಮಯ! ಯಜ್ಞಮಯ! ಯಶೋಮಯ! ಶಾಸ್ತ್ರಮಯ! ಸರ್ವಮಯ! ಸಾಕ್ಷಿಮಯ! ಸರ್ವಮಂಗಳಮಯ! ಶ್ರೀಮಯ! ಧೀಮಯ! ಸದಾನಂದಮಯ! ಸಚ್ಚಿದಾನಂದಮಯ! ಜಯಜಯಸರ್ವಾತ್ಮಕ! ಪಾಹಿ!! ಪಾಹಿ!!! ಎಂದು ಯಾವಾತನನ್ನು ಭಜಿಸುವರೋ, ಆತನಿಗೆ, ಆ ಸರ್ವವ್ಯಾಪಿಗೆ, ಸರ್ವಚೈತನ್ಯನಿಗೆ, ಸರ್ವತಂತ್ರ ಸ್ವತಂತ್ರನಿಗೆ "ಸರ್ವಾಂತರ್ಯಾಮಿ" ಎಂದು ಹೆಸರು.

## ಒಬ್ಬನೇ ದೇವರು.

(ಏಕೇಶ್ವರಸಿದ್ಧಾಂತ)

ಇಂತು "ಸರ್ವಾಂತರ್ಯಾಮಿ" ಎಂಬಹೆಸರಿನಿಂದ ವ್ಯವಹರಿಸಲ್ಪಡುವ ಜಗತ್ಕಾರಣ ವಸ್ತುವಾದ ಪರಮಾತ್ಮನೊಬ್ಬನೇ ದೇವರು. ಆತನಿಗೆ ಸಮಾನರಾಗಲೀ, ಆತನಿಗಿಂತಲೂ ಅಧಿಕರಾಗಲೀ ಬೇರೊಬ್ಬರಾರೂ ಇಲ್ಲವು. ಈ ಯರ್ಥವನ್ನೇ ವೇದ, ಶಾಸ್ತ್ರ, ಪುರಾಣ, ಇತಿಹಾಸಗಳೆಲ್ಲವೂ

ಘಂಟಾಘೋಷವಾಗಿ ಸಾರುತ್ತಿರುವವು. ಆ ವಿವರವಿಲ್ಲಿ ಸೂಚಿಸಲ್ಪಡುತ್ತದೆ.

"ಏಕಂಸದ್ವಿಪ್ರಾಬಹುಧಾವದಂತಿ" (ಋಗ್ವೇದ - ಮಂಡಲ ೧. ಸೂಕ್ತ ೧೬೪) ಒಬ್ಬನಾದ ಪರಮೇಶ್ವರನನ್ನು ವಿದ್ವಾಂಸರು ಅನೇಕ ವಿಧವಾಗಿ ಹೇಳುತ್ತಿರುವರು.

"ಏಕಮೇವಾದ್ವಿತೀಯಂ" (ಛಾಂದೋಗ್ಯ-ಪ್ರ ೬. ಖಂ ೨. ವ ೧) ಪರಮೇಶ್ವರನು ಒಬ್ಬನೇ. ಆತನು ಅದ್ವಿತೀಯನು.

"ತದೇಕಂ." (ಋಗ್ವೇದ-೧೧, ೧೨೯. ೨) ಆ ಪರಮಾತ್ಮನು ಒಬ್ಬನು.

"ಜನಯನ್ದೇವಏಕಃ" (ಶ್ವೇತಾಶ್ವತರ-ಅ ೩. ಮಾ. ೩) ಸೃಷ್ಟಿಕರ್ತನಾದ ದೇವರು ಒಬ್ಬನು.

"ಏಕೋವಶೀಸರ್ವಭೂತಾಂತರಾತ್ಮಾ" (ಕಠೋಪನಿಷತ್ತು-ಽ.೧೨) ಸರ್ವಭೂತಗಳಲ್ಲಿಯೂ ಅಂತರ್ಯಾಮಿಯಾಗಿರುವ ದೇವರು ಒಬ್ಬನು.

"ಏಕೋಬಹೂನಾಂಯೋವಿದಧಾತಿಕಾಮಾನ್" (ಕಠ-ಽ. ೧೩) ಒಬ್ಬನಾದ ಪರಮೇಶ್ವರನು ಅನೇಕದಲ್ಲಿದ್ದು ಬೇಕಾದುದನ್ನು ಕೊಡುತ್ತಿರುವನು.

"ಶಾಂತಂಶಿವಮದ್ವೈತಂ" (ಮಾಂಡೂಕ್ಯ-೨. ೧೪) ಶಾಂತಸ್ವರೂಪಿಯಾಗಿ ಮಂಗಳಪ್ರದನಾದ ಭಗವಂತನು ಅದ್ವಿತೀಯನು. (ಅಂದರೇ ಒಬ್ಬನು)

"ವಿಶ್ವಸ್ಯೈಕಂ ಪರಿವೇಷ್ಟಿತಾರಮೀಶಂ" (ಶ್ವೇತಾಶ್ವತರ-೩. ೭) ಪ್ರಪಂಚವನ್ನು ಆವರಿಸಿಕೊಂಡಿರುವ ಪರಮಾತ್ಮನು ಒಬ್ಬನು.

"ಏಕಮೇವಾದ್ವಯಂಬ್ರಹ್ಮ" (ಅಧ್ಯಾತ್ಮೋಪನಿಷತ್ತು) ಅದ್ವಯವಾದ ಬ್ರಹ್ಮವು ಒಂದೇ.

"ವೃಕ್ಷಇವಸ್ತಬ್ಧೋ ದಿವಿ ತಿಷ್ಠತ್ಯೇಕಃ" (ಮುಂಡಕೋಪನಿಷತ್ತು-೧. ೧. ೭) ಒಬ್ಬನಾದ ಭಗವಂತನು ವೃಕ್ಷದಹಾಗೆ ಸ್ತಬ್ಧನಾಗಿ ಸ್ವಪ್ರಕಾಶಮಾನನಾದ ತನ್ನ ಮಹಿಮೆಯಲ್ಲಿರುತ್ತಾನೆ.

"ಏಕೋದೇವೋ ಬಹುಧಾನಿವಿಷ್ಟಃ" (ಮುದ್ಗಲೋಪನಿಷತ್ತು) ಒಬ್ಬನಾದ ದೇವರು ಅನೇಕವಾಗಿರುತ್ತಾನೆ.

"ಏಕೋದೇವಃ ಸರ್ವಭೂತೇಷುಗೂಢಃ" (ಶ್ವೇತಾಶ್ವತರ-೬. ೧೧) ಒಬ್ಬನಾದ ಪರಮೇಶ್ವರನು ಸಮಸ್ತ ಭೂತಗಳಲ್ಲಿಯೂ ಗೂಢರೂಪಿಯಾಗಿರುವನು.

ಏಕಏವಹಿ ಭೂತಾತ್ಮಾ ಭೂತೇ ಭೂತೇ ವ್ಯವಸ್ಥಿತಃ" (ತ್ರಿಪುರತಾಪಿನ್ಯುಪನಿಷತ್ತು) ಒಬ್ಬನಾದ ಪರಮೇಶ್ವರನು ಪ್ರತಿಯೊಂದು ಭೂತದಲ್ಲಿಯೂ ವಾಸಮಾಡುತ್ತಾನೆ. "ಯಏಕೋವರ್ಣೋ ಬಹುಧಾಶಕ್ತಿಯೋಗಾತ್" (ಶ್ವೇತಾಶ್ವತರ-೪. ೧) ಸರ್ವ ಶಕ್ತಿಯುಳ್ಳವನಾಗಿ, ನಿರಾಕಾರನಾಗಿರುವ ಪರಮೇಶ್ವರನು ಒಬ್ಬನು.

"ಏಕಮೇವತತ್ಪರಂಬ್ರಹ್ಮವಿಭೂತಿನಿರ್ವಾಣಂ" (ಬ್ರಹ್ಮೋಪನಿಷತ್ತು) ಸಮಸ್ತ ವಿಭೂತಿಗಳಿಗೆ (ಐಶ್ವರ್ಯಗಳಿಗೆ) ಮೂಲವಾಗಿಯೂ ಮೋಕ್ಷಕಾರಣವಾಗಿಯೂ ಇರುವ ಬ್ರಹ್ಮವು ಒಂದೇ.

"ವಿಶ್ವಸ್ಯೈಕಂ ಪರಿವೇಷ್ಟಿತಾರಂ । ಜ್ಞಾತ್ವಾಶಿವಂ ಶಾಂತಿಮತ್ಯಂತಮೇತಿ" (ಶ್ವೇತಾಶ್ವತರ-೪. ೧೬) ಪ್ರಪಂಚವನ್ನು ಪರಿವೇಷ್ಟಿಸಿ ಮಂಗಳ ಸ್ವರೂಪಿಯಾಗಿರುವ ಪರಮೇಶ್ವರನೊಬ್ಬನನ್ನೇ ಜೀವನು ಪರಮಶಾಂತಿಯಿಂದ ಸೇರುವನು.

"ಏಕೋನಾರಾಯಣಃ ನದ್ವಿತೀಯೋಸ್ತಿ" (ನಾರಾಯಣೋಪನಿಷತ್ತು) ನಾರಾಯಣನೊಬ್ಬನೆ; ಬೇರೊಬ್ಬರಿಲ್ಲ.

"ದೇವ ಏಕೋನಾರಾಯಣಃ" (ಸುಬಾಲೋಪ ನಿಷತ್ತು) ನಾರಾಯಣಾಭಿಧಾನನಾದ ದೇವರು ಒಬ್ಬನೇ.

"ಏಕೋಏವ ಶಿವೋನಿತ್ಯಃ" (ಶರಭೋಪನಿಷತ್ತು) "ಶಿವ" ಅಂದರೆ ಮಂಗಳಸ್ವರೂಪಿಯಾದ ಪರಮೇಶ್ವರನೊಬ್ಬನೇ.

"ಏಕಏವಾ ದ್ವಯಂತಥಾ" (ಆತ್ಮೋಪನಿಷತ್ತು) ಪರಮಾತ್ಮಸ್ವರೂಪಿಯು ಒಬ್ಬನೇ ; ಬೇರೆಇಲ್ಲ.

"ಆತ್ಮಾವಾ ಇದಮೇಕಏವಾಗ್ರ ಆಸೀತ್" (ಐತರೇಯ-೧. ೧) ಸೃಷ್ಟಿಗೆ ಪೂರ್ವದಿಂದಲೂ ಪರಮಾತ್ಮನು ಒಬ್ಬನೇ ಆಗಿರುವನು.

"ಏಕೋಹಿರುದ್ರಃ" (ಶ್ವೇತಾಶ್ವತರೋಪನಿಷತ್ತು) "ಯೋರುದನ್ತ್ಯನ್ಯಾಯಕಾರಿಣೋ ಜನಾನ್ ಸರುದ್ರಃ"- ಪಾಪಕರ್ಮಿಗಳಿಗೆ ರೋದನವನ್ನುಂಟುಮಾಡುವ ರುದ್ರಶಬ್ದವಾಚ್ಯನಾದ ಭಗವಂತನೊಬ್ಬನೇ.

"ಸರ್ವಭೂತೇಷುಯೇನೈಕಃ" (ಭಗವದ್ಗೀತೆ-೧೮. ೨೦) ಪಿಪೀಲಿಕಾದಿ ಬ್ರಹ್ಮಪರ್ಯಂತರ ಎಲ್ಲಾ ಭೂತಗಳಲ್ಲಿಯೂ ಇರುವವನೊಬ್ಬನು.

"ಜ್ಯೋತಿರ್ಜ್ಞಾನಂ ಪರಂಬ್ರಹ್ಮ ಏಕಾಮೇವಾ ದ್ವಿತೀಯಕಂ" (ಅಗ್ನಿಪುರಾಣ) ಜ್ಞಾನಸ್ವರೂಪಿಯಾಗಿ ಪ್ರಕಾಶಿಸುತ್ತಿರುವ ಪರಬ್ರಹ್ಮವು ಒಂದೇ.

"ಏಕೋನಾನ್ಯೋಽಸ್ತಿ ಜಗತಃಪತೇ" (ವಿಷ್ಣುಪುರಾಣ-೪. ೪೮) ಈ ಜಗತ್ತಿಗೆ ಪರಮೇಶ್ವರನೊಬ್ಬನೇ ಒಡೆಯನು. ಅನ್ಯಥಾಯಿಲ್ಲ.

"ಏಕಏವ ಪರೋಹ್ಯಾತ್ಮಾಭಗವಾನ್ ಈಶ್ವರೋಽವ್ಯಯಃ" (ಶ್ರೀಮದ್ಭಾಗವತ) ಅವ್ಯಯನಾಗಿಯೂ, ಪರಮಾತ್ಮ ಸ್ವರೂಪಿಯಾಗಿಯೂ ಇರುವ ಭಗವಂತನು ಒಬ್ಬನೇ.

"ಶುದ್ಧಂಪರಂ ನಿರ್ಮಲಮೇಕರೂಪಂ" (ವಿಷ್ಣುಪುರಾಣ-೬.೫. ೮೩) ಪರಿಶುದ್ಧನಾಗಿಯೂ ನಿರ್ಮಲಸ್ವರೂಪಿಯಾಗಿಯೂ ಇರುವ ಪರಮೇಶ್ವರನು ಒಬ್ಬನೇ.

"ಸರ್ವಜ್ಞಸ್ಸರ್ವಕರ್ತಾಚ ಸರ್ವೇಶೋನಿರ್ಮಲೋಽದ್ವಯಃ" (ಗರುಡಪುರಾಣ) ಸರ್ವಜ್ಞನೂ, ಸರ್ವಕರ್ತನೂ, ಸರ್ವೇಶ್ವರನೂ, ನಿರ್ಮಲನೂ ಆದ ಭಗವಂತನೊಬ್ಬನೇ.

"ಏಕಸ್ತದ್ವೇದಭಗವಾನ್." (ಶ್ರೀಮಹಾಭಾರತ) ಜ್ಞಾನಸ್ವರೂಪಿಯಾದಭಗವಂತನು ಒಬ್ಬನೇ ಒಬ್ಬನು.

"ಯದೇಕಂ ನಿಷ್ಕಲಂಬ್ರಹ್ಮ" (ಉತ್ತರಗೀತೆ ಅ-೧. ೧) ನಿಷ್ಕಳಂಕವಾದ ಬ್ರಹ್ಮವು ಒಂದೇ. "ಏಕೋದೇವಃಕೇಶವೋವಾಶಿವೋವಾ" (ಭರ್ತೃಹರಿ) ಕೇಶವನೋ ಶಿವನೋ ಒಬ್ಬನೇ ದೇವರು.

"ಏಕಃ ಪರಾತ್ಮಾ ಬಹುದೇಹವರ್ತೀ" (ಸಮದರ್ಶನ) ಒಬ್ಬನಾದ ಪರಮಾತ್ಮನು ಅನೇಕ ದೇಹಗಳಲ್ಲಿ ವರ್ತಿಸುತ್ತಿರುವನು. "ಸಜಾತೀಯ ವಿಜಾತೀಯ ಸ್ವಪರಭೇದ ರಹಿತಂಬ್ರಹ್ಮಂ,, (ತತ್ವಾರ್ಣವ) ತಾನು, ತನ್ನದು, ಮುಂತಾದ ಭೇದವಾದಕ್ಕೆ ಅವಕಾಶವಿಲ್ಲದಿರುವ ವಸ್ತುವೇ ಬ್ರಹ್ಮವು. "ಓಂ ಇತ್ಯೇಕಾಕ್ಷರಂ ಬ್ರಹ್ಮ,, (ಪ್ರಣವ ರಹಸ್ಯ) "ಓಂ" ಎಂಬ ಒಂದಕ್ಷರವು ಬ್ರಹ್ಮಸ್ವರೂಪವಾಗಿದೆ. ಇಂತು ಸಮಸ್ತ ವೇದ ಶಾಸ್ತ್ರಗಳೂ ದೇವರು ಒಬ್ಬನೇ ಒಬ್ಬನೆಂದು ಸಾರುತ್ತಿವೆ.

ಪ್ರಶ್ನೆ:—ವೇದದಲ್ಲಿ "ಅಗ್ನಿರ್ದೇವತಾವಾತೋ ದೇವತಾಸೂರ್ಯೋ ದೇವತಾಚಂದ್ರಮಾ ದೇವತಾವಸವೋದೇವತಾ ರುದ್ರಾದೇವತಾ ಽದಿತ್ಯಾದೇವತಾಮರುತೋ ದೇವತಾವಿಶ್ವೇ ದೇವಾ ದೇವತಾಬೃಹಸ್ಪತಿ ರ್ದೇವತೇಂದ್ರೋದೇವತಾ ವರುಣೋ ದೇವತಾ ॥ (ಯಜುರ್ವೇದ-ಅ೧೪. ಮಂ ೨೦)

ಎಂಬ ಇತ್ಯಾದಿ ಮಂತ್ರಗಳಲ್ಲಿ, ಅನೇಕ ದೇವತೆಗಳು ಪ್ರತಿಪಾದಿಸಲ್ಪಟ್ಟಿರುವರು. ಮತ್ತೆ ಕೆಲವೆಡೆಗಳಲ್ಲಿ "ತ್ರಯಸ್ತ್ರಿಂಶತ್ಕೋಟದೇವತಾಃ,, ಅಂದರೇ ಮುವ್ವತ್ತು ಮೂರು ಕೋಟ ದೇವತೆಗಳು ಪ್ರತಿಪಾದಿಸಲ್ಪಟ್ಟಿರುವರು. ಹೀಗಿರುವಲ್ಲಿ ಒಬ್ಬನೇ ದೇವರೆಂಬ ಸಿದ್ಧಾಂತಕ್ಕೆ ಆಧಾರವೇನು ?

ಉತ್ತರ:—ಅಹುದು. ನಿಜ! ದೇವತೆಗಳನೇಕರಿರಬಹುದಾದರೂ, ದೇವಾದಿದೇವನೂ, ದೇವತಾಸಾರ್ವಭೌಮನೂ ಆದ "ದೇವರೊಬ್ಬನೇ" ಆಗಿರುತ್ತಾನೆ.

ಪ್ರಶ್ನೆ:—ಹಾಗಾದರೇ ವೇದಶಾಸ್ತ್ರ ಪುರಾಣೇತಿಹಾಸಗಳಲ್ಲಿ "ದೇವತಾವಾಚಕವು,, ಅನೇಕ ಸಂದರ್ಭಗಳಲ್ಲಿ ಪದೇಪದೇ ಹೇಳಲ್ಪಟ್ಟಿರುವುದಕ್ಕೇನ ಕಾರಣ ?

ಉತ್ತರ:—ಕಾರಣವಿಧೆ. " ವಿದ್ವಾಗ್‌ಂಸೋಹಿದೇವಾಃ ,, (ಶತಪಥ ಬ್ರಾಹ್ಮಣ) ಎಂಬ ಶ್ರುತಿವಚನಾನುಸಾರವಾಗಿ, ಸತ್ಯವಂತರು, ಸನ್ಮಾರ್ಗ ಪ್ರವರ್ತಕರು, ಸತ್ವಗುಣಪ್ರವಿಷ್ಟರು, ಸದಾಚಾರ ಸಂಪನ್ನರು, ಸದ್ವಿದ್ಯಾಭಿರತರು, ಸತ್ಕಾರ್ಯಧುರಂಧರರು, ಆದ ಮಹಾತ್ಮರಿಗೆಲ್ಲರಿಗೂ ದೇವಶಬ್ದವು ಅನ್ವಯಿಸುತ್ತದೆ.

ಪ್ರಶ್ನೆ:—ಅದು ಹೇಗೆ ?

ಉತ್ತರ:—"ದಿವುಕ್ರೀಡಾವಿಜಿಗೀಷಾವ್ಯವಹಾರ ದ್ಯುತಿಸ್ತುತಿಮೋದಮದ

ಸ್ವಪ್ನಕಾಂತಿಗತಿಷುದೇವಃ,, ಎಂಬ ಶಬ್ದಾರ್ಥವನ್ನನುಸರಿಸಿ, ಸತ್ಯ - ಶಾಂತ - ದಯಾ - ದಾಕ್ಷಿಣ್ಯ - ಪರೋಪಕಾರಾದಿ ಸದ್ಗುಣಗಳಿಂದ ಕೂಡಿರುವ ತೇಜೋವಂತರೆಲ್ಲರೂ ದೇವರೆಂಬ ಹೆಸರಿನಿಂದಕರೆಯಲ್ಪಡುತ್ತಾರೆ. ಇಷ್ಟೇಕೆ ? ಮನುಷ್ಯರಲ್ಲಿ ಯಾರಾದರೂ ಸ್ವಲ್ಪ ಧನವಂತರಾಗಿಯೂ, ಅಧಿಕಾರ ಸಂಪನ್ನರಾಗಿಯೂ, ಭೋಗಭಾಗ್ಯಗಳಿಂದೊಡಗೂಡಿದ ಶ್ರೀಮಂತರಾಗಿಯೂ ಇರುವರಾದರೇ ಅಂಥವರನ್ನು, ದೇವರೂ-ಬುದ್ಧೀ! ಮಹಾಸ್ವಾಮೀ! ಎಂತಲೂ, ಅವರ ಮನೆಯ ಹೆಂಗಸರನ್ನು ಮಹಾತಾಯಿಯವರೂ! ದೇವಿಯವರೂ!, ಎಂತಲೂ ಮರ್ಯಾದೆಯಿಂದ ಕರೆಯುವುದಿಲ್ಲವೆ ? ಸ್ತ್ರೀಯರನ್ನು ದೇವೀ ಎಂಬ ಪೂಜ್ಯವಾಚಕದಿಂದ ಸರ್ವ ಸಾಧಾರಣವಾಗಿ ಸಂಬೋಧಿಸುವುದಿಲ್ಲವೆ? ಹೀಗಿರುವಲ್ಲಿ ಸೂರ್ಯ, ಚಂದ್ರ, ವರುಣ, ಪವನ, ಮಹೇಂದ್ರಾದಿ ದಿವ್ಯತೇಜೋವಂತರಿಗೆ ದೇವಶಬ್ದವು ಸಲ್ಲುವುದರಲ್ಲಿ ಸಂಶಯವೇನಿರುತ್ತದೆ. ?

ಪ್ರಶ್ನೆ:—ಒಬ್ಬನೇ ದೇವರೆಂಬುದಕ್ಕೆ ಸಾಕಾದಷ್ಟು ನಿದರ್ಶನಗಳು ತಿಳಿಯಲಾಯಿತು. ಇಬ್ಬರು ದೇವರುಗಳಿಲ್ಲವೆಂಬುದಕ್ಕೆ ಶ್ರುತಿಪ್ರಮಾಣಗಳೇನಾದರೂ ಇರುವುವೊ ?

ಉತ್ತರ:—ಆಹಾ ! ಸಾಕಾದಷ್ಟಿರುವುವು.

''ನದ್ವಿತೀಯೋನತೃತೀಯಶ್ಚತುರ್ಥೋನಾಪ್ಯುಚ್ಯತೇ। ನಪಂಚಮೋನಷಷ್ಠಃ ಸಪ್ತಮೋನಾಪ್ಯುಚ್ಯತೇ । ನಾಷ್ಟಮೋನನವಮೋ ದಶಮೋನಾಪ್ಯುಚ್ಯತೇ । ತಮಿದಂನಿಗತಂಸಹಃಸಏಷಏಕಏಕವೃದೇಕಏವ। ಸರ್ವೇಅಸ್ಮಿನ್ ದೇವಾಏಕವೃತೋಭವಂತಿ ॥ (ಅಥರ್ವವೇದ-ಕಾಂಡ. ೧೩. ಅನು. ೪. ಮಂತ್ರ ೧೬—೨೧)

ಈ ಶ್ರುತಿವಚನದಲ್ಲಿ, ಇಬ್ಬರು - ಮೂವರು, ನಾಲ್ವರು, ಪರಮಾತ್ಮರಿಲ್ಲ. ಐದು ಮಂದಿಯಾಗಲಿ, ಆರು ಮಂದಿಯಾಗಲಿ, ಏಳುಮಂದಿಯಾಗಲಿ ಈಶ್ವರರಿಲ್ಲ. ಎಂಟು ಮಂದಿ, ಒಂಭತ್ತು ಮಂದಿ, ಹತ್ತು ಮಂದಿ, ದೇವರುಗಳಲ್ಲ. ಮತ್ತೇನೆಂದರೆ ಅದ್ವಿತೀಯನಾದ ಭಗವಂತನು ಒಬ್ಬನೇ ಒಬ್ಬನಿರುವನು, ಎಂದು ಪರಿಷ್ಕಾರವಾಗಿ ಹೇಳಲ್ಪಟ್ಟಿಧೆ. ಮತ್ತೂ ಈ ಯರ್ಥವನ್ನೇ,

"ಒಬ್ಬನಲ್ಲದೆ ಜಗಕೆ ಇಬ್ಬರುಂಟೆ ? ಮತ್ತೆ ಒಬ್ಬ ಸರ್ವಜ್ಞ । ಕರ್ತ ! ಜಗಕೆಲ್ಲ ಒಬ್ಬನೇದೈವ ಸರ್ವಜ್ಞ ॥ ಎಂದು ಮಹಾತ್ಮರಾದ ಜ್ಞಾನಿಗಳೆಲ್ಲರೂ ಘಂಟಾಘೋಷವಾಗಿ ಸಾರಿರುತ್ತಾರೆ. ಆದುದರಿಂದ ಭಗವತ್ಕಟಾಕ್ಷಕ್ಕೆ ಪಾತ್ರರಾಗತಕ್ಕ ಸಜ್ಜನರೆಲ್ಲರೂ, ಜಗತ್ಕರ್ತನಾದ ಪರಮಾತ್ಮನು "ಒಬ್ಬನೇ ಒಬ್ಬ"ನೆಂಬ ನಿಷ್ಕಳಂಕವಾದ ನಂಬಿಕೆ ಯುಂಟಾಗಿರಬೇಕು.

## ಬ್ರಹ್ಮ ವಿಚಾರ.

ಶ್ರುತಿ॥ ಯತೋವಾ ಇಮಾನಿಭೂತಾನಿ ಜಾಯಂತೇ। ಏನಜಾತಾನಿ ಜೀವಂತಿ
ಯತ್ಪ್ರಯಂತ್ಯಭಿಸಂವಿಶಂತಿ ತದ್ವಿಜಿಜ್ಞಾಸಸ್ವ ತದ್ಬ್ರಹ್ಮ ॥
(ತೈತ್ತಿರೀಯೋಪನಿಷತ್ತು)

ಯಾವುದರಿಂದ ಈ ಭೂತಜಾಲವೆಲ್ಲವೂ ಹುಟ್ಟುತ್ತವೆಯೋ, ಹುಟ್ಟಿದವುಗಳು ಯಾವುದರಿಂದ ಜೀವಿಸುತ್ತಿವೆಯೋ, ಅಂತ್ಯದಲ್ಲಿ ಯಾವುದನ್ನು ಕುರಿತು ತೆರಳುತ್ತವೆಯೋ, ಯಾವುದರಲ್ಲಿ ಸೇರುತ್ತವೆಯೋ, ಅದನ್ನು ಚನ್ನಾಗಿ ತಿಳಿದು ಕೊಳ್ಳಿರಿ. ಅದೇ ಬ್ರಹ್ಮವು !

ಶ್ರುತಿ ॥ ಓಮ್ ಸತ್ಯಂ ಜ್ಞಾನಮನಂತಂ ಬ್ರಹ್ಮ ॥

ಆ ಕಾಲದಲ್ಲಿದ್ದನು, ಈ ಕಾಲದಲ್ಲಿಲ್ಲವು, ಎಂಬೀ ಮುಂತಾದ ಕಾಲ ದೇಶವರ್ತಮಾನಗಳಾವುವೂ ಇಲ್ಲದೇ, ಎಂದೆಂದಿಗೂ ಸ್ಥಿರವಾಗಿರತಕ್ಕವನಾದುದರಿಂದ ಆ ಪರಬ್ರಹ್ಮನಿಗೆ "ಸತ್ಯ" ನೆಂಬ ಹೆಸರು ಸಲ್ಲುತ್ತದೆ. ಸಮಸ್ತ ಪ್ರಾಣಿಗಳ ಹೃದಯಾಂತರಾಳಗಳಲ್ಲಡಗಿರುವ ರಹಸ್ಯಗಳನ್ನೆಲ್ಲಾ ಅರಿತವನಾದುದರಿಂದಲೂ, ಹಿಂದೆ ನಡೆದ, ಈಗ ನಡೆಯುತ್ತಿರುವ, ಮುಂದೆ ನಡೆಯುತಕ್ಕ ಸಮಸ್ತ ವ್ಯವಹಾರಗಳನ್ನೂ ಬಲ್ಲವನಾದುದರಿಂದಲೂ ಆ

ಪರಬ್ರಹ್ಮನಿಗೆ"ಜ್ಞಾನ"ವೆಂಬ ಹೆಸರು ಸಲ್ಲುತ್ತದೆ. ಈ ದೇಶದಲ್ಲಿರುವನು, ಆ ದೇಶದಲ್ಲಿಲ್ಲ, ಇಲ್ಲಿರುವನು, ಅಲ್ಲಿಲ್ಲ, ಎಂಬೀ ಮುಂತಾದ ಸ್ಥಳನಿರ್ದೇಶವಿಲ್ಲದೆ, ಎಲ್ಲೆಲ್ಲಿಯೂ, ಯಾವಾಗಲೂ, ಸ್ವಯಂಪ್ರಕಾಶ ಪರಿಪೂರ್ಣನಾಗಿರುವನಾದುದರಿಂದ ಆ ಪರಬ್ರಹ್ಮನಿಗೆ "ಅನಂತ,, ನೆಂಬ ಹೆಸರು ಸಲ್ಲುತ್ತದೆ. "ತತ್ಸತ್ಯಮಿತ್ಯಾಚಕ್ಷತೇ,, ಬ್ರಹ್ಮವು ಸತ್ಯವಾದುದು "ಯತ್ಸತ್ಯಂ ತದ್ಬ್ರಹ್ಮಂ,, ಅಾದರೆ ಯಾವುದು, ಸತ್ಯವೋ ಅದೇ ಬ್ರಹ್ಮವೆಂದರ್ಥವು. "ಅಣೋರಣೀಯಾನ್ ಮಹತೋಮಹೀಯಾನ್,, ಬ್ರಹ್ಮವು ಅಣುವಿಗೆ ಅಣುವಾಗಿ ಮಹತ್ತುಗೆ ಮಹತ್ತಾಗಿರುತ್ತದೆ.

ಶ್ರುತಿ ॥ ತ್ವಂಯಜ್ಞ-ಸ್ತ್ವಂವಷಟ್ಕಾರ-ಸ್ತ್ವಮಿಂದ್ರ-ಸ್ತ್ವಂರುದ್ರ-ಸ್ತ್ವಂ
ವಿಷ್ಣು-ಸ್ತ್ವಂಬ್ರಹ್ಮ-ತ್ವಂಪ್ರಜಾಪತಿಃ ॥

(ತೈತ್ತಿರೀಯೋಪನಿಷತ್ತು)

ಇಂದ್ರ, ರುದ್ರ, ವಿಷ್ಣು, ಬ್ರಹ್ಮ, ಯಜ್ಞಾದಿ ಸಮಸ್ತವೂ ಆ ಪರಬ್ರಹ್ಮ ಸ್ವರೂಪವೇ ಆಗಿರುತ್ತದೆ.

ಓಮ್ ॥ ಪೂರ್ಣಮದಃಪೂರ್ಣಮಿದಂ ಪೂರ್ಣಾತ್ಪೂರ್ಣಮುದಂಚ್ಯತೇ ।
ಪೂರ್ಣಸ್ಯಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥

ಈ ಉಪನಿಷದ್ವಾಕ್ಯದಲ್ಲಿ ಸಮಸ್ತ ರಹಸ್ಯವೂ ಅಡಗಿರುತ್ತದೆ. ಪರಬ್ರಹ್ಮವು ಸರ್ವತ್ರವ್ಯಾಪಿಸಿರುವ ಸ್ವಯಂಪ್ರಕಾಶ ಪರಿಪೂರ್ಣವಾದುದು. ಅದೂ, ಇದೂ, ಎಲ್ಲವೂ ಪರಿಪೂರ್ಣ ಸ್ವರೂಪವಾಗಿಯೇ ಇರುತ್ತದೆ. ಪೂರ್ಣದಿಂದ ಪೂರ್ಣವನ್ನು ಕಳೆದರೇ ಪೂರ್ಣವೇ ಶೇಷವಾಗುತ್ತದೆ. ಪೂರ್ಣಕ್ಕೆ ಪೂರ್ಣವನ್ನು ಸೇರಿಸಿದರೇ ಪೂರ್ಣವೇ ಹುಟ್ಟುತ್ತದೆ. ಈ ಅರ್ಥವನ್ನೇ ಶ್ರೀಕೃಷ್ಣ ಪರಮಾತ್ಮನು ಗೀತೆಯಲ್ಲಿ ಕ್ಷೇತ್ರಕ್ಷೇತ್ರಜ್ಞ ವಿಭಾಗ ಯೋಗದಲ್ಲಿ ಸೂಚಿಸಿರುತ್ತಾನೆ. ಸಾಂಖ್ಯಯೋಗದ ಪರಮರಹಸ್ಯವೂ ಇದೇ ಆಗಿರುತ್ತದೆ. ಈ ಪರಮರಹಸ್ಯವು ಪ್ರಪಂಚಕ್ಕೆಲ್ಲಾ ಅನ್ವಯಿಸತಕ್ಕ ವಿಶ್ವಸೂತ್ರವೆಂದು ಧಾರಾಳವಾಗಿ ಹೇಳಬಹುದು. ಸ್ಥೂಲದೃಷ್ಟಿಯಿಂದ ನೋಡಿದರೇ ಯಾವುದೂ ಗೋಚರವಾಗುವುದಿಲ್ಲ. ಸೂಕ್ಷ್ಮದೃಷ್ಟಿಯಿಂದ ನೋಡಿದರೆ ಪ್ರತಿಯೊಂದು ವಿಷಯದಲ್ಲಿಯೂ ಈ ಸೂತ್ರಾರ್ಥವು ಗೋಚರವಾಗುತ್ತದೆ. ಯಾರ ಹೃತ್ಪದ್ಮದಲ್ಲಿ ಈತೆರನಾದ ಸಂಪೂರ್ಣಭಾವವು

ಅಖಂಡವಾಗಿಯೂ, ಅನಂತವಾಗಿಯೂ, ಅಪರಿಚ್ಛಿನ್ನವಾಗಿಯೂ ಇರುವುದೋ, ವಿಸ್ತಾರವಾಗುವುದೋ, ಅಂಥವರಿಗೆ ಬ್ರಹ್ಮಸ್ವರೂಪವು ಅಷ್ಟಕ್ಕಷ್ಟು ಪರಿಷ್ಕಾರವಾಗಿ ಕಾಣಬರುತ್ತದೆ. ಇದೀಗ ಆತ್ಮಸಂದರ್ಶನದ ಪ್ರಥಮ ಸೋಪಾನವು. ಇದೇ ಪರಬ್ರಹ್ಮ ಸ್ಪರ್ಶಾರಂಭವು. ಈ ಸ್ಪರ್ಶವಾಗುತ್ತಲೇ ಹೃದಯ ಕಮಲವು ವಿಕಸಿಸಲಾರಂಭಿಸುತ್ತದೆ. ತರುವಾಯ ಆತ್ಮೋಪಲಬ್ಧಿಯು ಸ್ವಲ್ಪ ನಿಧಾನವಾಗಿಯೋ ಅಥವಾ ಬಹು ತ್ವರಿತವಾಗಿಯೋ ಒಂದೇ ಜನ್ಮದಲ್ಲಿಯೋ, ಅಥವಾ ಅನೇಕ ಜನ್ಮಗಳಲ್ಲಿಯೋ ಸಿದ್ಧಿಸುತ್ತದೆ.

"ಯೋದೇವೋಗ್ನೌ ಯೋಪ್ಸುಯೋವಿಶ್ವಂ ಭುವನಮಾವಿವೇಶ ।
ಯ ಓಷಧಿಷು ವನಸ್ಪತಿಷುತಸ್ಮೈ ದೇವಾಯ ನಮೋನಮಃ ॥"

ಅಗ್ನಿಯಲ್ಲಿಯೂ, ಜಲದಲ್ಲಿಯೂ, ಓಷಧಿಗಳಲ್ಲಿಯೂ, ವನಸ್ಪತಿಗಳಲ್ಲಿಯೂ ನಿಖಿಲ ಭೂತಗಳಲ್ಲಿಯೂ ಹೊಕ್ಕಿರುವ ಭಗವಂತನಿಗೆ ನಾನು ನಮಸ್ಕಾರ ಮಾಡುತ್ತಿರುವೆನು. ಎಂಬೀ ಉಪನಿಷದ್ವಾಕ್ಯವು, ಪರಮಾತ್ಮನುಸರ್ವವ್ಯಾಪಿ ಯೆಂಬುದನ್ನು ಸೂಚಿಸುತ್ತದೆ. ಬ್ರಹ್ಮವು ಸರ್ವತ್ರ ಇರುವುದೆಂದು ಭಾವಿಸುವುದು ಮಾತ್ರವೇ ಅಲ್ಲ. ಸರ್ವತ್ರ ಬ್ರಹ್ಮವನ್ನು ಸಂದರ್ಶಿಸಿ, ಪೂಜಿಸಿ ಆನಂದಿಸಬೇಕೆಂಬುದನ್ನು ಈ ವಾಕ್ಯವು ಬೋಧಿಸುತ್ತದೆ. ಸಕಲ ಚರಾಚರ ಪ್ರಪಂಚವನ್ನೆಲ್ಲಾ ವ್ಯಾಪಿಸಿಕೊಂಡು, ಸಮಸ್ತ ಸೃಷ್ಟಿಸ್ಥಿತಿಲಯಗಳಿಗೂ ಕಾರಣ ಭೂತನಾಗಿ, ಚರ್ಮನೇತ್ರಗಳಿಗೆ ತೋರದವನಾಗಿ, ಜ್ಞಾನಚಕ್ಷುಗಳಿಗೆ ಗೋಚರಿಸತಕ್ಕವನಾಗಿ, ಅಖಂಡಬ್ರಹ್ಮಾಂಡಗಳಲ್ಲಿ ನಡೆಯುವ ವ್ಯಾಪಾರಗಳಿಗೆ ಮೂಲಕಾರಣನಾದ ಸರ್ವಶಕ್ತನೂ, ಸರ್ವಜ್ಞನೂ ಆದ ಪರಮಾತ್ಮನು ಸರ್ವಭೂತ ನಿವಾಸಿಯಾದ "ವಾಸುದೇವ" ನಾಗಿರುವನು.

" ಅಹಂಪಶ್ಯಾಮಿಸರ್ವತ್ರ, ಸರ್ವಂಚಮಯಿಪಶ್ಯತಿ ", ನಾನು (ಭಗವಂತನು) ಸರ್ವತ್ರಕಾಣುತ್ತಿರುವೆನು. ಸರ್ವವೂ ನನ್ನಲ್ಲಿ ಕಾಣುತ್ತಿದೆ ಎಂಬೀ ಗೀತಾವಾಕ್ಯದಂತೆ. ಈಶ್ವರನು ಸರ್ವಭೂತಗಳಲ್ಲಿಯೂ ಕಾಣುತ್ತಿರುವನು. ಇಂತು ಎಲ್ಲೆಲ್ಲಿಯೂ ಕಾಣುತ್ತಿರುವ ಪರಮಾತ್ಮನನ್ನೇ ಜ್ಞಾನಿಗಳು "ಭಗವಂತ" ನೆಂದು ಕರೆಯುತ್ತಾರೆ.

## ಭಗವಂತನು ಕಲ್ಪವೃಕ್ಷದಂಥವನು.

,,ಭಗವಂತ,, ನೆಂಬ ಶಬ್ದಕ್ಕೆ ಅರ್ಥವೇನೆಂದು ವಿಚಾರಿಸಿ ನೋಡೋಣ;—

ಶ್ಲೋ॥ ಮಾಹಾತ್ಮ್ಯಸ್ಯಸಮಗ್ರಸ್ಯ ಧರ್ಮಸ್ಯಯಶಸಃ ಶ್ರಿಯಃ ।
ಜ್ಞಾನವೈರಾಗ್ಯಯೋಶ್ಚೈವ ಷಣ್ಣಾಂಭಗಇತೀರಿತಃ ॥
ಇತ್ಯುಕ್ತಭಗೋಸ್ಯಾಸ್ತೀತಿಭಗವಾನ್ ॥

ಸಂಪೂರ್ಣವಾದ ಮಾಹಾತ್ಮ್ಯ, ಧರ್ಮ, ಕೀರ್ತಿ, ಸಂಪತ್ತು, ಜ್ಞಾನ, ವೈರಾಗ್ಯಗಳೆಂಬ, ಆರು ಬಗೆಯಾದ ವೈಭವಗಳೂ ಯಾರಲ್ಲಿ ಕೂಡಿರುವುದೋ ಆತನಿಗೆ "ಭಗವಂತ" ನೆಂದು ಹೆಸರು. ಅಂದರೇ ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿಗಳೆಂಬ ಸಮಸ್ತ ಸಾಧನಗಳೂ ಭಗವಂತನಿಗಧೀನಗಳಾಗಿರುತ್ತವೆ. ಅಂತಹ ಸರ್ವೈಶ್ವರ್ಯ ಸಂಪನ್ನನಾದ ಭಗವಂತನು ,,ಕಲ್ಪವೃಕ್ಷ,, ದಂಥವನು. ಅಂದರೇತನ್ನನ್ನು ಆಶ್ರಯಿಸುವಜನರಿಗೆ ಸಮಸ್ತ ಸಂಪತ್ತುಗಳನ್ನೂ, ಎಲ್ಲಕ್ಕಿಂತಲೂ ಉತ್ತಮವಾದ ಮೋಕ್ಷವನ್ನೂ ಕೊಡತಕ್ಕವನು.

,,ಕಲ್ಪವೃಕ್ಷವು,, ಯಾರ್ಯಾರಿಗೆ ಏನೇನು ಬೇಕೋ, ಯಾರ್ಯಾರು ಏನೇನನ್ನು ಬೇಡುವರೋ, ಅವುಗಳನ್ನೆಲ್ಲಾ ಕೊಡುತ್ತಿರುವಂತೆ ಭಗವಂತನು ಎಲ್ಲರ ಅಭೀಷ್ಟಗಳನ್ನೂ ಸಿದ್ಧಿಗೊಳಿಸುವನು. ಅಂತಹ ಭಗವಂತನನ್ನಾಶ್ರಯಿಸಿ ,,ಮೋಕ್ಷ,, ವನ್ನು ಕೊಡೆಂದು ಪ್ರಾರ್ಥಿಸದೆ. ,,ಧನಂದೇಹಿ! ಯಶೋದೇಹಿ!,, ಎಂಬಂತೆ ಧನಧಾನ್ಯಾದಿ ಅಲ್ಪಲಾಭಗಳನ್ನು ಬೇಡುವುದಾದರೇ, ಅಂಥವನು ,,ಕಲ್ಪವೃಕ್ಷವನ್ನಾಶ್ರಯಿಸಿ ಕಂಬಳಿಯನ್ನು,, ಬೇಡಿದಂತೆ ವ್ಯರ್ಥರಾಗುತ್ತಾರೆ. ಈ ವಿಚಾರದಲ್ಲಿ ,,ಶ್ರೀ ರಾಮಕೃಷ್ಣ ಪರಮ ಹಂಸರು,,ಹೀಗೆಂದು ಬಣ್ಣಿಸಿರುತ್ತಾರೆ.

ಒಬ್ಬಾನೊಬ್ಬ ಮನುಷ್ಯನು ಕಲ್ಪವೃಕ್ಷದ ಕೆಳಗೆ ಕುಳಿತು ತಾನೊಬ್ಬ ಮಹಾರಾಜನಾಗಬೇಕೆಂದು ಕೋರಿದನು. ಕೋರಿದ ತಕ್ಷಣವೇ ಸಮಸ್ತ ಪರಿವಾರವೂ ಸಿದ್ಧವಾಗಿ ಆತನೊಬ್ಬ ಮಹಾರಾಜನಾದನು. ಹಂಸತೂಲಿಕಾ ತಲ್ಪದಮೇಲೆ ಸರ್ವಾಂಗ ಸುಂದರಿಯಾದ, ಮಹಾರಾಣಿಯೊಂದಿಗೆ ಪವಡಿಸಿದರೆ ಸುಖವಾಗಿರಬಹುದೆಂದು ಕೋರಿದನು. ಅದ

ರಂತೆಯೇ ಹಂಸತೂಲಿಕಾತಲ್ಪವೂ, ಲಾವಣ್ಯವತಿಯಾದ ಮಹಾರಾಣಿಯೂ ಸಿದ್ಧವಾಯಿತು. ರಾಣಿಯೊಂದಿಗೆ ತಲ್ಪದಮೇಲೆ ಮಲಗಿದನು. ವಿನೋದವಾಗಿರುವಲ್ಲಿ ಆತನಿಗೊಂದು ವಿಚಿತ್ರವಾದ ಸಂಕಲ್ಪವು ಹೊಳೆಯಿತು. ,,ಈ ಸಂತೋಷ ಸಮಯದಲ್ಲಿ ನನ್ನನ್ನೊಂದು ವ್ಯಾಘ್ರವು (ಹೆಬ್ಬುಲಿ) ಕೊಂದು ತಿಂದರೆ ಮಾಡತಕ್ಕದ್ದೇನೆಂದು ಚಿಂತಿಸಿದನು. ತಕ್ಷಣವೇ ಒಂದು ಘೋರ ವ್ಯಾಘ್ರವು ಬಂದು ಆತನನ್ನು ಕೊಂದು ತಿಂದಿತು. ಇದರಂತೆಯೇ ಭಗವಂತನನ್ನು ಯಾರು ಏನು ಬೇಡಿದರೂ ಅವರಿಗದು ಸಿದ್ಧಿಸುತ್ತದೆ. ಆದ್ದರಿಂದ, ಎಲೈ ಭಗವಂತನೇ ! ನಿನ್ನ ಅನುಗ್ರಹದಿಂದ ನಮಗೆ ಸಮಸ್ತ ಸಂಪತ್ತುಗಳೂ ಉಂಟಾಗಿರುತ್ತವೆ ಎಂದು ಸಂಕಲ್ಪಿಸುವವರಿಗೆ ಎಲ್ಲಾ ಸಂಪತ್ತುಗಳೂ ಸಿದ್ಧಿಸುತ್ತವೆ. ಅಂಥವರು ,,ನಿತ್ಯಸುಖಿ,, ಗಳಾಗಿರುತ್ತಾರೆ. ಭಗವಂತನೇ ! ನೀನು ನಮಗೆ ಏನನ್ನೂ ಕೊಡಲಿಲ್ಲ ! ಎಂದು ಚಿಂತಿಸುವವರಿಗೆ ನಿಜವಾಗಿಯೂ ಏನೇನೂ ಕೈಗೂಡುವುದಿಲ್ಲ. ಅಂಥವರು ,,ನಿತ್ಯದುಃಖಿ,, ಗಳಾಗಿರುತ್ತಾರೆ, ಎಂದು ಸೂಚಿಸಿರುವರು. ಆದುದರಿಂದ, ,,ಸದಾಸಂತೋಷಚಿತ್ತಾನಾಂ ಸಂಪದಸ್ತು ಪದೇಪದೇ। ಸದಾದುಃಖೋಪಚಿತ್ತಾನಾಂ ಸಂಪ್ರಪ್ನೇಪಿದುರ್ಲಭಂ ॥ ಎಂಬ ಲೋಕೋಕ್ತಿಯಂತೆ ಸದಾ ಸಂತೋಷಿಯಾದವನೇ ಸಮಸ್ತೈಶ್ವರ್ಯ ಸಂಪನ್ನನೆಂತಲೂ, ಸದಾದುಃಖಿಯಾದವನೇ ಘೋರ ದರಿದ್ರನೆಂತಲೂ ಆರ್ಯರು ನಿಶ್ಚಯಿಸಿರುತ್ತಾರೆ.

## ತ್ರಿಮೂರ್ತಿಗಳು—ತ್ರಿಶಕ್ತಿಗಳು.

ಸರ್ವಾಂತರ್ಯಾಮಿಯಾದ ಜಗದೀಶ್ವರನಲ್ಲಿ ಪ್ರತಿಫಲಿಸಿದ, ಬ್ರಹ್ಮ-ವಿಷ್ಣು, ಮಹೇಶ್ವರರನ್ನೂ, ಅವರ ಪತ್ನಿಯರಾದ, ಸರಸ್ವತೀ - ಲಕ್ಷ್ಮೀ-ಪಾರ್ವತಿಯರನ್ನೂ, ತ್ರಿಮೂರ್ತಿಗಳು ಮತ್ತು ತ್ರಿಶಕ್ತಿಗಳೆಂದು ಜ್ಞಾನ ಸಂಪನ್ನರಾದ ಋಷಿ ಮುನಿಗಳು ವ್ಯವಹರಿಸಿರುತ್ತಾರೆ.

,,ಯೋಽಖಿಲಂಜಗನ್ನಿರ್ಮಾಣೇನ ಬೃಂಹತಿವರ್ಧಯತಿಸಬ್ರಹ್ಮ,, ಸಂಪೂರ್ಣವಾದ ಜಗತ್ತನ್ನು ಸೃಜಿಸಿ ವೃದ್ಧಿಪಡಿಸುವನಾದುದರಿಂದ, ಪರಮಾತ್ಮನಿಗೆ ಬ್ರಹ್ಮನೆಂಬನಾಮವು ಸಲ್ಲುತ್ತಿರುವುದೆಂತಲೂ,

,,ವಿಶ್ವಂವೇಷ್ಟಿವ್ಯಾಪ್ನೋತಿ, ಪಾಲಯತೀತಿವಿಷ್ಣುಃ,, ಪ್ರಪಂಚ ದಲ್ಲೆಲ್ಲಾ ವ್ಯಾಪಿಸಿ, ಎಲ್ಲವನ್ನೂ ಪರಿಪಾಲಿಸುವನಾದುದರಿಂದ ಪರಮಾತ್ಮನಿಗೆ ವಿಷ್ಣುವೆಂಬ ನಾಮವು ಸಲ್ಲುತ್ತಿರುವುದೆಂತಲೂ,

,,ಯೋರುದಯುಂತ್ಯನ್ಯಾಯಕಾರಿಣೋಜನಾನ್‌ಸರುದ್ರಃ,, ದುಷ್ಕರ್ಮಪ್ರವರ್ತಕರಾದ ಜನರನ್ನು ಶಿಕ್ಷಿಸಿ ದುಃಖಪಡಿಸುವನಾದುದರಿಂದ, ಪರಮಾತ್ಮನಿಗೆ ರುದ್ರನೆಂಬನಾಮವು ಸಲ್ಲುತ್ತಿರುವುದೆಂತಲೂ,

,,ತಮೀಶ್ವರಾಣಾಂಪರಮಂ ಮಹೇಶ್ವರಂತಂದೇವತಾನಾಂಪರಮಂ ಚದೈವತಂ,, ॥ (ಶ್ವೇತಾಶ್ವತರೋಪನಿಷತ್ತು)

,,ಯಈಷ್ಟೇ ಸರ್ವೈಶ್ವರ್ಯವಾನ್ ವರ್ತತೇಸ ಈಶ್ವರಃ,, ಎಂಬ ಇತ್ಯಾದಿ ಉಪದಿಷದ್ವಾಕ್ಯಗಳಿಂದ, ದೇವತೆಗಳಿಗೆಲ್ಲಾ ದೊಡ್ಡವನೂ, ಒಡೆಯನೂ, ಸರ್ವೈಶ್ವರ್ಯ ಸಂಪನ್ನನೂ ಆದುದರಿಂದ ಪರಮಾತ್ಮನಿಗೆ "ಮಹೇಶ್ವರ"ನಾಮವು ಸಲ್ಲುತ್ತಿರುವುದೆಂತಲೂ, ಜ್ಞಾನಿಗಳು ಬಕ್ಕಣಿಸಿರುವರು.

,,ಬ್ರಹ್ಮ-ವಿಷ್ಣು-ಮಹೇಶ್ವರರಿಗೆ ಸರಸ್ವತೀ- ಲಕ್ಷ್ಮೀ-ಪಾರ್ವತಿಯರೆಂಬ ಪತ್ನಿಯರಿರುವರೆಂದು ಮೇಲೆ ಸೂಚಿಸಿರುವುದಲ್ಲವೆ ? ಈದಾಂಪತ್ಯದರಹಸ್ಯವನ್ನು ನಿರ್ಮಲದೃಷ್ಟಿಯಿಂದ ಪರಿಶೀಲಿಸಿದರೆ, "ಪ್ರಕೃತಿ ಪುರುಷ ಸಂಯೋಗದ"ತತ್ವ ರಹಸ್ಯವು ಚನ್ನಾಗಿಗೋಚರವಾಗುತ್ತದೆ.

ಚಿದಚಿದೀಶ್ವರರೆಂಬ ತತ್ವತ್ರಯವು ಅನಾದಿಸಿದ್ಧವೆಂಬ ನ್ಯಾಯಾನುಸಾರವಾಗಿ ಪುರುಷನಿಗೆಲ್ಲಿ ನೆಲೆಇರುವುದೋ ಅಲ್ಲಿ ಪ್ರಕೃತಿಗೂ ನೆಲೆಇರುವುದು. ಪ್ರಕೃತಿಯಿದ್ದೆಡೆ ಪುರುಷನು. ಪುರುಷನಿದ್ದೆಡೆ ಪ್ರಕೃತಿ, ಇಂತು ಪ್ರಕೃತಿ ಪುರುಷ ಸಂಯೋಗವೇ ಪರಮಾನುರಾಗ ಪರಿಪೂರ್ಣತೆಯು. ಪ್ರಕೃತಿಗೆ ಪುರುಷನಾಶ್ರಯನು. ಪುರುಷಾರ್ಥಸಿದ್ಧಿಗೆ ಪ್ರಕೃತಿಯು ಸಾಧನವು. ಸಂಸಾರವು ಪ್ರಕೃತಿಸಂಬಂಧವು. ಅದರ ವಿಶ್ರಾಂತಿಗೆ ಪರಮಾವಧಿಯು ಪುರುಷನು. ಪ್ರಕೃತಿ ಸಂಬಂಧ ಕಾರ್ಯಗಳನ್ನು ತದಾಶ್ರಯನಾದ ಪುರುಷನಿಗರ್ಪಿಸುವುದೇ ಆತ್ಮಾರ್ಪಣವು. ಇದೀಗ ಜನ್ಮಸಾರ್ಥಕ ಸೂತ್ರವು, ಪ್ರಕೃತಿಯು ಪುರುಷನನ್ನಾರಾಧಿಸಲು, ಪುರುಷನವನ್ನು ತನ್ನಲ್ಲಿ ಸೇರಿಸಿಕೊಳ್ಳುವುದೇ ನಿರತಿಶಯಾನಂದ ಪ್ರಾಪ್ತಿಯು. ಪ್ರಕೃತಿ ಭೂತಗಳಾದ ಜೀವಿಗಳು ತದಾಶ್ರಯನಾದ ಪುರುಷನ

ಳ್ಳೈಕ್ಯವಾಗುವುದೇತಾದಾತ್ಮ್ಯಯೋಗಸಾಧನವು. ಅದೀಗ ಜೀವಬ್ರ ಹ್ಮರಹಸ್ಯಯೋಗವು. ಈಶ್ವರ ಪೂಜಾಫಲವು. ಆತ್ಮವು, ಭೇದಪರಿಗಣ ನೆಗೆ ಅತೀತವಾದುದರಿಂದ, ಲೋಕ ವ್ಯವಹಾರದಲ್ಲಿಯೂ, ಗಂಡಸರೇ ಪ್ರತ್ಯೇಕಿಸಿ ಸಾಧಿಸತಕ್ಕ ವಿಷಯವಾವುದೂಯಿಲ್ಲವು. ‚‚ದೇವತಿರ್ಯಙ್ಮನು ಷ್ಯೇಷು ಪುನ್ನಾಮಾ ಭಗವಾನ್ ಹರಿಃ ಸ್ತ್ರೀನಾಮ್ನಿಲಕ್ಷ್ಮೀರ್ಮೈತ್ರೇಯ ನಾನಯೋರ್ವಿದ್ಯತೇಪರಂ,, (ವಿಷ್ಣುಪುರಾಣ) ಅಂದರೇ ಪರಮಾತ್ಮ ನಾದ ಪುರುಷೋತ್ತಮನೊಬ್ಬನೇ ಪುರುಷನೆಂತಲೂ, ಮಿಕ್ಕ ಜೀವಕೋ ಟಿಗಳೆಲ್ಲವೂ ಸ್ತ್ರೀಪ್ರಾಯವಾದುದೆಂತಲೂ ಮೈತ್ರೇಯಾದಿ ಮಹರ್ಷಿಗಳು ವಿವರಿಸಿರುತ್ತಾರೆ.

‚‚ನತೇರೂಪಂನಚಾಕಾರೋ, ನಾಯುಧಾನಿನಚಾಸ್ಪದಂ । ತಥಾ ಪಿಪುರುಷಾಕಾರೋ, ಭಕ್ತಾನಾಂತ್ವಂಪ್ರಕಾಶಸೇ,, ಪರಂಜ್ಯೋತಿ ಸ್ವರೂಪನೂ, ನಿರಂಜನನೂ ಆದ ಪರಮಾತ್ಮನಿಗೆ ರೂಪನಾಮ ಕ್ರಿಯಾ ದಿಗಳಿಲ್ಲದಿದ್ದರೂ ಪರಮೇಶ್ವರನ ‚‚ಜ್ಞಾನತೇಜೋಮಯವಾದ ಅಖಂ ಡಾಕಾರವನ್ನು ವರ್ಣಿಸುವುದು ಸಾಮಾನ್ಯಜನರಿಗೆ ಅಸಾಧ್ಯವಾದುದರಿಂದ, ಜ್ಞಾನಿಗಳು ತಮ್ಮ ಯೋಗಾಂತರಂಗದಲ್ಲಿ ಸಂದರ್ಶಿಸಿದ ಪರತತ್ವಸ್ವರೂಪ ವನ್ನು ಸಾಧ್ಯವಾದಷ್ಟು ಪರಿಷ್ಕಾರವಾಗಿ ಬಣ್ಣಿಸಿ, "ಸಾಕಾರವೈಭವ" ವನ್ನು ನಿರೂಪಿಸಿರುತ್ತಾರೆ.

ಭಗವಂತನು ಅಗಾಧವಾದ ದೊಡ್ಡ ಸಮುದ್ರದಂಥವನು. ನದೀ ಸ್ವರೂಪಿಗಳಾದ ಸಮಸ್ತದೇವತೆಗಳೂ ಆತನ ಅನನ್ಯಸಂಬಂಧಿಗಳಾಗಿರು ತ್ತಾರೆ. ಆದುದರಿಂದ ವಾಗ್ದೇವಿ—ಕಮಲಾದೇವಿ—ಪಾರ್ವತೀದೇವಿಯ ರೆಂಬ ತ್ರಿಶಕ್ತಿಗಳಿಂದೊಡಗೂಡಿದ ತ್ರಿಮೂರ್ತಿಗಳು ಸರ್ವಲೋಕ ಸಂಸ್ತವ ನೀಯರಾಗಿರುತ್ತಾರೆ. ಶಕ್ತಿ ಯೆಂಬ ಶಬ್ದವು ಸ್ತ್ರೀಲಿಂಗ ವಾಚಕವಾಗಿ ದ್ದರೂ, ಅದು ಭಗವಂತನಶಕ್ತಿಯೇ ಹೊರತು ಅನ್ಯವಲ್ಲವೆಂಬ ರಹಸ್ಯಾ ರ್ಥವು ವಿವೇಕಿಗಳಿಗೆ ತಿಳಿದ ವಿಷಯವೇ ಆಗಿರುತ್ತದೆ! ಈ ರಹಸ್ಯವನ್ನು ಪರಿಷ್ಕಾರವಾಗಿ ತಿಳಿಸತಕ್ಕ ಇತಿಹಾಸ ವೊಂದಿದೆ. ಅದನ್ನಿಲ್ಲಿ ಸೂಚಿಸು ತ್ತೇನೆ.

## ಅತ್ರಿಮುನಿಗೆ. ತ್ರಿಮೂರ್ತಿಗಳ. ಸಂದರ್ಶನ.



ಅತ್ರಿಮಹರ್ಷಿ. ತ್ರಿಮೂರ್ತಿಗಳು.

ಉ॥ ಅನಘತಪೋಭಿರಾಮನೆನಿಪತ್ರಿವಿಲೋಕಿಸಿದಂಸುತಪ್ತಕಾ ।
ಜನಘನಚಂದ್ರಿಕಾರುಚಿರಚಾರು ಶರೀರರಹಂಸನಾಗಸೂ ।
ದನವೃಷಭೇಂದ್ರವಾಹನರ ಸಾರಕಮಂಡಲಚಕ್ರಶೂಲಸಾ ।
ಧನರವಿರಿಂಚಿವಿಷ್ಣುಮೃಡರಂ ನೆರೆವಾಕ್ಕಮಲಾಂಬಿಕೇಶರಂ ॥

ಪರಮಪುಣ್ಯಾತ್ಮನಾದ ಸ್ವಾಯಂಭುವ ಮನುವು ತನ್ನ ಮೊಮ್ಮಗಳಾದ ಅನುಸೂಯಾದೇವಿ ಎಂಬ ನಾರೀರತ್ನವನ್ನು ಪರಮತಪೋಧನನಾದ ಅತ್ರಿಮಹಾಮುನಿ ಎಂಬ ಋಷಿಶ್ರೇಷ್ಠನಿಗೆ ಕೊಟ್ಟು ವಿವಾಹ ಮಾಡಿದನು. ಅನಸೂಯಾದೇವಿಯು ಪತಿವ್ರತಾಶಿರೋಮಣಿಯರಲ್ಲಿ ಅಗ್ರಗಣ್ಯಳೆನಿಸಿರುತ್ತಾಳಷ್ಟೆ! ಅಂತಹ ಪುಣ್ಯದಂಪತಿಗಳಾದ ಅನುಸೂಯಾ—ಅತ್ರಿಮುನಿಗಳು, ಸಂತಾನಾಪೇಕ್ಷೆಯಿಂದ ಘೋರತಪವನ್ನಾಚರಿಸಲೆಳಸಿ ಋಕ್ಷಪರ್ವತ ವೆಂಬ ಹೆಸರುಳ್ಳ ಒಂದು ದೊಡ್ಡ ಬೆಟ್ಟದ ಬಳಿಗೆ ಹೋಗಿ ಮನೋಹರವಾದ ಆ ಕಾನನ ಪ್ರದೇಶದಲ್ಲಿ ಅತ್ರಿಯು ಯೋಗಾಸನಾರೂಢನಾಗಿ ಪ್ರಾಣವಾಯುಗಳನ್ನು ಬಿಗಿಹಿಡಿದು, ಮನಸ್ಸನ್ನು ಜಿತಗೊಳಿಸಿ, ಶೀತೋಷ್ಣಾದಿ ಈತಿ ಬಾಧೆಗಳನ್ನು ಲಕ್ಷಿಸದೇ ಬಹುಕಾಲದವರೆಗೂ ಬಿಡದೇ ಕಾಲಿನಿಂದನಿಂತವನಾಗಿ, ಹೊರಗಿನ ಪ್ರಪಂಚವನ್ನುಮರೆತು,

ಶ್ಲೋ॥ ಶರಣಾಂತಂಪ್ರಪದ್ಯೇಽಹಂಯಏವಜಗದೀಶ್ವರಃ ।
ಪ್ರಜಾಮಾತ್ಮಸಮಾಂಮಹ್ಯಂಪ್ರಯಚ್ಛತ್ವಿತಿಚಿಂತಯನ್॥

ಯಾವಾತನು ಜಗತ್ಕಾರಣ ವಸ್ತುವಾದ ಪರಮಾತ್ಮನೋ, ಆತನು ನನಗೆ ಪ್ರಸನ್ನನಾಗಲಿ ! ತನಗೆ ಸಮಾನವಾದ ಸಂತಾನವನ್ನು ನನಗನುಗ್ರಹಿಸಲಿ ! ಎಂದು ಧ್ಯಾನಿಸುತ್ತಾ ತೀವ್ರ ತಪವನ್ನಾಚರಿಸಿದನು.

ಅತ್ರಿಮುನಿಯ ತಪಸ್ಸಿಗೆ ಮೆಚ್ಚಿದವರಾಗಿ, ಜಗತ್ಸೃಷ್ಟಿ ಸ್ಥಿತಿಲಯ ಕಾರಣರಾದ ತ್ರಿಮೂರ್ತಿಗಳು, ದೇವಗಂಧರ್ವ ಕಿನ್ನರಕಿಂಪುರುಷರನ್ನೊಡಗೂಡಿ ಅತ್ರಿಮಹರ್ಷಿಯ ಆಶ್ರಮಕ್ಕೆ ಬಂದರು. ಆಗ ಅತ್ರಿಮುನಿಯು ತನಗೆ ಪ್ರತ್ಯಕ್ಷರಾದ ತ್ರಿಮೂರ್ತಿಗಳನ್ನು ನೋಡಿ ಸಂತುಷ್ಟಾಂತರಂಗನಾಗಿ ಅವರಿಗೆ ಸಾಷ್ಟಾಂಗದಂಡಪ್ರಣಾಮಗಳನ್ನಾಚರಿಸಿ, ನದೀ ಜಲದಿಂದವರ ಪಾದಪದ್ಮಗಳನ್ನು ತೊಳೆದು, ಆ ನೀರನ್ನು ತನ್ನ ತಲೆಯಮೇಲೆ ಚೆಲ್ಲಿಕೊಂಡು ಯಥಾವಿಧಿಯಾಗಿ ಪೂಜಿಸಿ, ಅಂಜಲೀಬದ್ಧನಾಗಿ ಸಕಲ ಜಗನ್ನಿಯಾಮಕರಾದ ಆ ತ್ರಿಮೂರ್ತಿಗಳನ್ನು ಇಂತೆಂದು ಪ್ರಾರ್ಥಿಸಿದನು.

ಶ್ಲೋಕ॥ ವಿಶ್ವೋದ್ಭವಸ್ಥಿತಿಲಯೇಷುವಿಭಜ್ಯಮಾಯಾಗುಣೈರನುಯುಗಂವಿಗೃಹೀತದೇಹಾಃ । ತೇಬ್ರಹ್ಮವಿಷ್ಣುಗಿರಿಶಾಃಪ್ರಣತೋಸ್ಮ್ಯಹಂವಸ್ತೇಭ್ಯಃಕಏವಭಗವಾನ್ಮಯಿಹೋಪಹೂತಃ । ಏಕೋಮಯೇಹಭಗವಾನ್ವಿಬುಧಪ್ರಧಾನೈಃ ಚಿತ್ತೀಕೃತಃ ಪ್ರಜನನಾಯಕಥಂನುಯೂಯಂ । ಅತ್ರಾ ಗತಾಸ್ತನುಭೃತಾಂಮನಸೋಪಿದೂರಾ ಬ್ರೂತಪ್ರಸೀದತಮಹಾನಿಹವಿಸ್ಮಯೋಮೇ ॥ (ಭಾಗವತ)

ಪ್ರಪಂಚದ ಸೃಷ್ಟಿಸ್ಥಿತಿಲಯಗಳನ್ನು ನಡೆಯಿಸುವುದಕ್ಕಾಗಿ ಸತ್ವರಜಸ್ತಮಸ್ಸುಗಳೆಂಬ ಪ್ರಕೃತಿಗುಣಗಳಿಂದ, ಯುಗಯುಗಗಳಲ್ಲಿಯೂ ಬ್ರಹ್ಮ-ವಿಷ್ಣು-ಶಿವರೂಪಗಳನ್ನು ಪರಿಗ್ರಹಿಸುವ ನಿಮಗೆ ನಮಸ್ಕಾರವು. ಪುತ್ರಸಂತತಿಯನ್ನು ಬಯಸಿ ಜಗತ್ಕಾರಣನಾದ ಒಬ್ಬ ಪರಮಾತ್ಮನನ್ನು ನಾನು ಧ್ಯಾನಿಸಿದೆನಲ್ಲದೆ ಅನೇಕ ಮಂದಿಯನ್ನು ಧ್ಯಾನಿಸಲಿಲ್ಲ. ಹೀಗಿರುವಲ್ಲಿ ನಾನು ಒಬ್ಬನನ್ನು ಧ್ಯಾನಿಸಿದರೇ ನೀವು ಮೂರು ಮಂದಿ ಪ್ರತ್ಯಕ್ಷವಾಗುವುದಕ್ಕೇನು ಕಾರಣ ? ನಿಮ್ಮ ಮೂರು ಮಂದಿಯಲ್ಲಿ ನನ್ನಿಂದ

ಕರೆಯಲ್ಪಟ್ಟವರಾರು ? ನನ್ನ ಮನಸ್ಸಿಗೆ ವಿಷಯವಲ್ಲದ ನೀವು ಮೂರು ಮಂದಿ ಬರುವುದಕ್ಕೇನುಕಾರಣ ? ನನಗೆ ಅತ್ಯಾಶ್ಚರ್ಯಕರವಾಗಿಧೆ. ತಾವು ಅನುಗ್ರಹವಿಟ್ಟು ಈ ರಹಸ್ಯವನ್ನು ನನಗೆ ತಿಳುಹಿಸಿರಿ ! ಎಂದು ಬೇಡಿಕೊಂಡನು.

ಆಗ ದೇವತಾ ಸಾರ್ವಭೌಮರಾದ ತ್ರಿಮೂರ್ತಿಗಳು ಅತ್ರಿಮುನಿಯ ಮಾತನ್ನು ಕೇಳಿ ಸಂತೋಷಾತರಂಗರಾಗಿ, ಸಾದರಶೀತಲೇಕ್ಷಣಗಳಿಂದ ಆತನಿಗಿಂತೆಂದು ಪೇಳಿದರು.

ಶ್ಲೋ॥ ಯಥಾಕೃತಸ್ತೇಸಂಕಲ್ಪೋಭಾವ್ಯಂತೇನೈವನಾನ್ಯಥಾ ।
ಸತ್ಸಂಕಲ್ಪಸ್ಯತೇಬ್ರಹ್ಮನ್ ಯದ್ವೈಧ್ಯಾಯತಿತೇವಯಂ ॥

ಅಯ್ಯಾ ಅತ್ರಿಮುನಿಯೇ ! ನಿನ್ನಸಂಕಲ್ಪಕ್ಕೆ ವಿರೋಧವಾಗಿ ಯಾವುದೂ ಜರುಗುವುದಿಲ್ಲವು. ಸತ್ಯಸಂಕಲ್ಪನಾದ ನೀನು, ಜಗದೀಶ್ವರನಾದ ಯಾವ ಒಂದೇ ತತ್ವವನ್ನು ಧ್ಯಾನಿಸಿದೆಯೋ ಆ ಜಗತ್ಕಾರಣ ತತ್ವವೇ ನಾವು ಮೂರು ಮಂದಿಯಾಗಿರುತ್ತೇವೆ. ನಮ್ಮಲ್ಲಿ ಭೇದವನ್ನೆಣಿಸಬೇಡ ! ಎಂದು ತ್ರಿಮೂರ್ತಿಗಳು ಅತ್ರಿಮುನಿಗೆ ಸಮಾಧಾನವಂ ಪೇಳಿ ಪುತ್ರ ವರವನ್ನನುಗ್ರಹಿಸಿ, ಪರಮ ಪತಿವ್ರತೆಯಾದ ಅನುಸೂಯಾದೇವಿಯನ್ನು ಆಶೀರ್ವದಿಸಿ ಅವನು ನೋಡುತ್ತಿರುವಂತೆಯೇ ಮಾಯವಾದರು. ಅಂದಿನಿಂದ ಅತ್ರಿಮಹರ್ಷಿಯು, ಬ್ರಹ್ಮ ವಿಷ್ಣು ಮಹೇಶ್ವರರಾದ ತ್ರಿಮೂರ್ತಿಗಳಲ್ಲಿ ತನಗಿದ್ದ ಭೇದಭಾವವನ್ನು ತೊರೆದು ಸರ್ವಾಂತರ್ಯಾಮಿಯಾದ ಜಗದೀಶ್ವರನು ಎಲ್ಲೆಲ್ಲಿಯೂ ತುಂಬಿರುವುದನ್ನರಿತು ಸರ್ವತ್ರ ಸಮದರ್ಶನ ಮಾಡುತ್ತಿದ್ದನು. ಈ ಅಭಿಪ್ರಾಯವನ್ನೇ ಪರಮಭಕ್ತನಾದ ಪ್ರಹ್ಲಾದನೂ ಬಕ್ಕಣಿಸಿರುವನು.

ಶ್ಲೋ॥ ಬ್ರಹ್ಮತ್ವೇಸೃಜತೇಸರ್ವಂ, ಸ್ಥಿತಾಪಾಲಯತೇಪುನಃ ।
ರುದ್ರರೂಪಾಯಕಲ್ಪಾಂತೇ, ನಮಸ್ತುಭ್ಯಂತ್ರಿಮೂರ್ತಯೇ ॥
(ವಿಷ್ಣು ಪುರಾಣ)

ಬ್ರಹ್ಮರೂಪದಿಂದ ಸಮಸ್ತವನ್ನೂ ಸೃಷ್ಟಿಮಾಡಿ, ಪುನಃ (ವಿಷ್ಣು ರೂಪದಿಂದ) ಸ್ಥಿತಿಯಲ್ಲಿ ಪಾಲಿಸಿ, ಕಲ್ಪಾಂತದಲ್ಲಿ ರುದ್ರರೂಪಿಯಾಗಿರುವ ತ್ರಿಮೂರ್ತಿ ಸ್ವರೂಪನಾದ ಭಗವಂತನೇ ನಿನಗೆ ನಮಸ್ಕರಿಸುವೆನು ! ಎಂದು ಬಣ್ಣಿಸಿರುವನು.

" ಅಹಂಪಶ್ಯಾಮಿಸರ್ವತ್ರ, ಸರ್ವಂಚಮಯಿಪಶ್ಯತಿ "

ಎಂದು ಗೀತಾವಾಕ್ಯವು ಸಾರುತ್ತಿದೆ. ಆದುದರಿಂದ ಮೋಕ್ಷಾಪೇಕ್ಷೆಯುಳ್ಳ ಭಗವದ್ಭಕ್ತರು, ಕುಯುಕ್ತಿ ಎಂಬ ವ್ಯಾಧಿಯಿಂದ ಬಿಡುಗಡೆ ಹೊಂದಿ, ಭೇದಭಾವಗಳನ್ನು ತೊರೆದು, ಸರ್ವಾಂತರ್ಯಾಮಿಯೂ, ಸರ್ವಜ್ಞನೂ, ಸರ್ವಶಕ್ತನೂ, ಸರ್ವಾಧಿಕಾರಿಯೂ, ಸರ್ವತಂತ್ರ ಸ್ವತಂತ್ರನೂ ಆದ ಜಗದೀಶ್ವರನನ್ನು ಸಮಸ್ತ ಭೂತಗಳಲ್ಲಿಯೂ ನಿಷ್ಕಳಂಕವಾಗಿ ನೋಡುತ್ತ ಸರ್ವತ್ರ ಸಮದರ್ಶಿಗಳಾಗಿರುವುದು ಶ್ರೇಯಸ್ಕರವು ! ಅಂಥವರಿಗೆ "ಮೋಕ್ಷವು" ಕರತಲಾಮಲಕವಾಗಿರುತ್ತದೆ !! ಸಾರ್ಥಕಜನ್ಮರಾಗುತ್ತಾರೆ !!!

## ಪರಮಾರ್ಥ ವಿಚಾರ.

ಶ್ಲೋ॥ ಪರಿವರ್ತಿನಿ ಸಂಸಾರೇ ಮೃತಃಕೋವಾನಜಾಯತೇ ।
ಸಜಾತೋ ಏನಜಾತೇನ ಯಾತಿವಂಶಸ್ಸಮುನ್ನತಿಂ ॥
(ಭರ್ತೃಹರಿ)

ಈ ಪ್ರಪಂಚದಲ್ಲಿ ಯಾವಕಾರಣದಿಂದ ಜನಿಸಿದೆವು ? ನಮ್ಮನ್ನು ಸೃಜಿಸಿದವರಾರು ? ನಾವು ಮಾಡತಕ್ಕ ಕಾರ್ಯವೇನು ? ನಮಗೆ ಗಮ್ಯಸ್ಥಾನವಾವುದು ? ಎಂಬೀ ಸದಸದ್ವಿಚಾರವು ಮನುಷ್ಯ ಜನ್ಮವೆತ್ತಿದ ಪ್ರತಿಯೊಬ್ಬನಿಗೂ ಅವಶ್ಯಕವಾಗಿದೆ. ಈ ವಿಧವಾದ ಆತ್ಮಾನಾತ್ಮ ವಿಚಾರವಿಲ್ಲದೆ, ಅಜ್ಞಾನಾಂಧಕಾರ ಮಗ್ನರಾಗಿ ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ರಾಗದ್ವೇಷಾದಿ ಅರಿಷಡ್ವರ್ಗ ಸಮನ್ವಿತವಾದ ಭವಸಾಗರದಲ್ಲಿ ಬಿದ್ದು, ಪರಿತಪಿಸುತ್ತಿರುವದು ಅವಿವೇಕದಲಕ್ಷಣವು. ಎಲ್ಲಾ ಜೀವಕೋಟಿಗಳಿಗಿಂತಲೂ ಶ್ರೇಷ್ಠವಾದ ಮನುಷ್ಯ ಜನ್ಮವು ಲಭಿಸುವುದೇ ಅತ್ಯಂತ ದುರ್ಲಭವು. ಆಹಾರನಿದ್ರಾ ಭಯಸಂಗಮಾದಿಗಳು ಪಶ್ವಾದಿಗಳೂ, ಮಾನವರಿಗೂ ಸಮಾನವಾಗಿದ್ದರೂ, ಮೋಕ್ಷಸಾಧನಕ್ಕನುಕೂಲವಾದ ಜ್ಞಾನಬಲವು ಮನುಷ್ಯನಿಗೆ ಮಾತ್ರವೇ ಅನುಗ್ರಹಿಸಲ್ಪಟ್ಟಿದೆ. ಮತಮತಾಂತರ ವ್ಯಾಖ್ಯಾನಗಳು ನಾನಾ ವಿಧವಾಗಿದ್ದರೂ, ಅಭೇದವಾದಿಗಳೂ, ಸರ್ವತ್ರ ಸಮದರ್ಶಿಗಳೂ, ಆದ ವಿವೇಕವಂತರಿಗೆ ಏಕಾಕಾರವಾದ ತತ್ವವೇ

ಕಾಣುತ್ತದೆ. ಭಗವಂತನಲ್ಲಿ ಮಾನವರಿಗುಂಟಾಗುವ ದೃಢವಾದ ವಿಶ್ವಾಸವೇ ಭಕ್ತಿಯು. ಭಗವದ್ವಿಭೂತಿಯಾದ ಜೀವಕೋಟಿಗಳನ್ನು ಸಾದರದಿಂದ ಸತ್ಕರಿಸುವದೇ ಕರ್ಮವು. ವ್ಯಷ್ಟಿಯಲ್ಲಿ ಆತ್ಮನೆಂತಲೂ, ಸಮಷ್ಟಿಯಲ್ಲಿ ಪರಮಾತ್ಮನೆಂತಲೂ ಅಭಿಧಾನವುಂಟಾಗಿ, ಸರ್ವಾಂತರ್ಯಾಮಿಯಾಗಿರುವ ಭಗವಂತನನ್ನು ಸರ್ವಭೂತಗಳಲ್ಲಿಯೂ ಸಂದರ್ಶಿಸುವದೇ ಜ್ಞಾನವು. ಈ ವಿಧವಾದ ಕರ್ಮ, ಭಕ್ತಿ, ಜ್ಞಾನಗಳ ಸಮ್ಮೇಳನಕ್ಕೇ ಬ್ರಹ್ಮಜ್ಞಾನವೆಂದು ಹೆಸರು. ಭಕ್ತನೆಂತಲೂ, ಜ್ಞಾನಿಯೆಂತಲೂ ವ್ಯವಹಾರದಲ್ಲಿರುವುದು ನಾಮಭೇದವೇ ಹೊರತು ತತ್ವಭೇದವಲ್ಲ.

ಪರಮಭಾಗವತರಲ್ಲಿ ಅಗ್ರಗಣ್ಯನಾದ ಪ್ರಹ್ಲಾದನು, ಭೂತಕೋಟಿಗೆ ಹಿತವಾದ ಕಾರ್ಯಗಳನ್ನಾಚರಿಸುತ್ತ ಕರ್ಮಯೋಗಿಯಾಗಿಯೂ, ಸರ್ವಕಾರಣನಾದ ಭಗವಂತನಲ್ಲಿ ಅನನ್ಯಸಂಬಂಧವಾದ ಪ್ರೇಮಭಾವವುಳ್ಳ ಭಕ್ತಶಿರೋಮಣಿಯಾಗಿಯೂ ಇರಲಿಲ್ಲವೆ? ಹೀಗೆಯೇ ಜನಕಜಡಭರತಾದಿಗಳೂ ಸಹ ಕರ್ಮ, ಭಕ್ತಿ, ಜ್ಞಾನಗಳೆಂಬ ತ್ರಿವಿಧ ಧರ್ಮಗಳನ್ನು ಒಂದೆಡೆಯಲ್ಲಿಯೇ ಪ್ರಕಾಶಗೊಳಿಸುತ್ತಿರಲಿಲ್ಲವೆ? ಸಮದರ್ಶನವುಳ್ಳ ಮಹನೀಯರಾರೋ ಅವರೇ ನಿಜವಾದ ಬ್ರಹ್ಮವೇತ್ತರು. ಪರಂತು ಈ ಕಾಲದಲ್ಲಿ ಕರ್ಮ, ಭಕ್ತಿ, ಜ್ಞಾನಗಳ ಸಮ್ಮೇಳನವೇ ಮೋಕ್ಷಸಾಧನವೆಂಬ ತತ್ವಾರ್ಥವು ಪೂರೆಯಾಗಿ ರೂಪಾಂತರವನ್ನೈದಿರುತ್ತದೆ. ಒಂದು ಪಾತ್ರೆಯೊಳಗಿನ ನೀರನ್ನು ಇನ್ನೊಂದಕ್ಕೆ ಬದಲಾಯಿಸುವುದು, ಒಂದರ ಮೇಲಿರುವ ಮಾವಿನ ಸೊಪ್ಪನ್ನು ಮತ್ತೊಂದರ ಮೇಲಿಡುವುದು, ನೀರು ಚೆಲ್ಲುವುದು, ತೆಂಗಿನಕಾಯಿಗಳನ್ನು ಕಲಶಗಳ ಮೇಲಿಡುವುದು, ಒಂದರಿಂದ ಮತ್ತೊಂದಕ್ಕೆ ಬದಲಾಯಿಸುವದು ಮುಂತಾದ ಪ್ರಯೋಗಗಳನ್ನು ಮಾತ್ರವೇ "ಕರ್ಮ" ವೆಂದು ಭಾವಿಸಿ ಮದಮಾತ್ಸರ್ಯ ಪೂರಿತರಾಗಿ ಮೆರೆಯುತ್ತಿರುವರು. "ವೇದಗಳಿಗೆ ಜೈಮಿನಿ" ಎಂಬಾತನು ಮಾಡಿರುವ ಮೀಮಾಂಸೆಯನ್ನು ಮಾತ್ರವೇ ನಂಬಿರುವ ಕೆಲವರು, ಜ್ಞಾನಮಾರ್ಗವನ್ನು ಕೊಂಚವಾದರೂ ಸ್ಮರಣೆಗೆ ತಂದುಕೊಳ್ಳದೇ ಜ್ಞಾನಪಥಕ್ಕೆ ದೂರದಲ್ಲಿರುವುದು ಬಹಳ ಶೋಚನೀಯವಾದ ವಿಷಯವಾಗಿದೆ. ಇಂಥವರು ಜ್ಞಾನಯೋಗಿಗಳನ್ನು ನೋಡಿ, ಅವರಿಗೆ ಮೋಕ್ಷವಾಗುವದೇ ಹೊರತು ಮೇಲೆ

ಹೇಳಿದ ಮಂತ್ರರೂಪವಾದ ಕರ್ಮಗಳನ್ನು ಮಾಡುವದಕ್ಕೆ (ಇತರರಿಗಾ ರಿಗೂ) ಸಾಧ್ಯವಿಲ್ಲವೆಂದು ಹೇಳುವದೂ ಉಂಟು. ಬೇಡ! ಬೇಡ! ಚಿನ್ಮ ಯಾನಂದಸಾಧಕರಾದ ಮುಮುಕ್ಷುಗಳಿಗೆ ಈ ವಿಧವಾದ ಕಾರ್ಯಗಳೇನು ಕೆಲಸಕ್ಕೆ ಬರಬಲ್ಲವು? ಅವರಿಗೆ ಬೇಕಾದುದು ಮೋಕ್ಷಸಾಮ್ರಾಜ್ಯ ವೊಂದೇ. ಅದಕ್ಕೆ ಸಾಧನವು ಬ್ರಹ್ಮಜ್ಞಾನವು. ಆದುದರಿಂದ ನಾವಾ ಬ್ರಹ್ಮವಿಚಾರ ಮಾಡುವುದಕ್ಕೆ ತೆರಳೋಣ.

ಪರಮಾತ್ಮನು, ಸರ್ವಜ್ಞತ್ವ, ಸರ್ವಶಕ್ತಿತ್ವ, ಸರ್ವಾಂತರ್ಯಾಮಿತ್ವ ಗಳುಳ್ಳವನು. ಜೀವಾತ್ಮನು ಸಮಸ್ತ ಸದ್ಗುಣಾಂಕುರವಿಶಿಷ್ಟನು. ಸೃಷ್ಟಿಪರಿಣಾಮಕ್ಕೆ ಫಲವಾದ ಜೀವವಿಕಾಸವು ಲೋಕದಲ್ಲೆಲ್ಲಾ ಸಮಾನವಾದರೂ, ಪ್ರಕೃತಿ ಪರಿಶಿಷ್ಟವಾಗಿ ವಿವಿಧ ಪ್ರದೇಶಗಳಲ್ಲಿ ಭಿನ್ನವ್ಯಕ್ತಿಯುಳ್ಳುದಾಗಿದೆ. ಪ್ರಕೃತಿಯು ಸ್ಥಿತಿಗತಿಗಳನ್ನನುಸರಿಸಿ ಪಂಚಭೂತಮಯವಾದ ಚರಾಚರ ಪದಾರ್ಥಗಳಿಗೆ ಷಡ್ಭಾವ ಪರಿವರ್ತನಾ ರೂಪವಾದ ಕಾಲೋಚಿತ ವಿಕಾರಗಳುಂಟಾಗುತ್ತವೆ. ವ್ಯಷ್ಟಿವಿಚಾರ ದಲ್ಲಿ ವೇಷಭಾಷೆಗಳು, ಶೀಲಸ್ವಭಾವಗಳು, ಆಚಾರವ್ಯವಹಾರಗಳು, ನಾನಾದೇಶಗಳಲ್ಲಿ ನಾನಾವಿಧಗಳಾಗಿದ್ದರೂ ಸಮಷ್ಟಿಯಲ್ಲಿ ಗವ್ಯಸ್ಥಿ ನದ ಧರ್ಮಸೂತ್ರವು ಸರ್ವತ್ರ ಏಕರೂಪವಾಗಿಯೇ ಇರುತ್ತದೆ. ಸಂಕು ಚಿತ ಜ್ಞಾನದಿಂದ ತಮ್ಮ ತಮ್ಮ ಆಚಾರವ್ಯವಹಾರಾದಿಗಳೇ ಸರ್ವೋ ತ್ಕೃಷ್ಟವಾದವುಗಳೆಂಬ ಭಾವವಿದ್ದರೂ, ಎಲ್ಲಾ ದೇಶಗಳಿಗೂ ಸ[illegible]ಸ ವಾದ "ನೀತಿಸೂತ್ರವು" ಮಾತ್ರವೆಲ್ಲೆಲ್ಲಿಯೂ ಅವಶ್ಯಾಚರಣೀಯವಾದ ಪರಮಾಧಾರವಾಗಿರುವುದು. ಒಂದೊಂದು ದೇಶದಲ್ಲಿಯೂ ಸಂಸಾರಬಂ ಧನವನ್ನುತ್ತರಿಸಿ ಶಾಶ್ವತ ಬ್ರಹ್ಮಾನಂದಪರರಾಗಿ ಈಶ್ವರ ಧರ್ಮವನ್ನು ಲೋಕದಲ್ಲಿ ಪ್ರಕಾಶಗೊಳಿಸುವದಕ್ಕಾಗಿ ಕೆಲಸಮಾಡುತ್ತಿರುವ ಪರಮ ಹಂಸರನೇಕರಿರುವರು.

ಅಣುರೇಣು ತೃಣಕಾಷ್ಟ ಸ್ಥಾವರಜಂಗಮಾತ್ಮಕವಾದ ಸಮಸ್ತ ಭೂತಕೋಟಿಯಲ್ಲಿಯೂ ತುಂಬಿತುಳುಕುತ್ತಿರುವ ಚೈತನ್ಯವೆಲ್ಲವೂ ಆ ಪರ ಬ್ರಹ್ಮಮಯವಾಗಿದೆ.

ಶ್ಲೋ॥ "ಯದ್ಯದ್ವಿಭೂತಿಮತ್ಸತ್ವಂ ಶ್ರೀಮದೂರ್ಜಿತಮೇವವಾ ।

ತತ್ತದೇವಾವಗಚ್ಛತ್ವಂ ಮಮತೇಜೋಂಶಸಂಭವಂ ॥''
(ಭಗವದ್ಗೀತೆ. ೧೦. ೪೧)

ಯಾವ ಯಾವ ವಸ್ತುಗಳು, ಮಂಗಳಕರ, ಸಮೃದ್ಧಿ, ಊರ್ಜಿತ, ಜ್ಞಾನ, ತೇಜಸ್ಸು, ಕಾಂತಿ ಉಳ್ಳುವಾಗಿವೆಯೋ ಅವೆಲ್ಲವೂ ತನ್ನ ತೇಜಸ್ಸಿನ ಅಂಶದಿಂದುಂಟಾದುವುಗಳಾಗಿ ತಿಳಿಯಬೇಕೆಂದು ಗೀತಾಚಾರ್ಯನ ಉಪದೇಶವು. ಪರಮಾನಂದಕರವಾದ ಪರಬ್ರಹ್ಮ ಚೈತನ್ಯಪ್ರಭಾವವು ವಿಷ್ಣು, ಶಂಕರ, ರಾಮ, ಕೃಷ್ಣಾದಿಗಳಿಂದ ಬಗೆಬಗೆಯಾಗಿ ಪ್ರಕಾಶಿಸಲ್ಪಟ್ಟದೆ. ಸಗುಣ ನಿರ್ಗುಣಗಳೆಂಬ ವಾಕ್ಯಗಳು ಆ ಪರಮಾತ್ಮನ ತತ್ವಾರ್ಥಸೂಚಕಗಳು. ಮತ್ತು ಪರಮಾರ್ಥ ಬೋಧಕಗಳು. ಸಮಸ್ತ ಕಲ್ಯಾಣ ಗುಣಪರಿಪೂರ್ಣನಾದುದರಿಂದ ಆ ಪರಬ್ರಹ್ಮವನ್ನು ಜ್ಞಾನಿಗಳು, ''ಸಗುಣ'' ನೆನ್ನುವರು. ದ್ವೇಷಾಸೂಯಾದಿ ದುರ್ಗುಣಗಳಿಲ್ಲದವನಾದುದರಿಂದ ''ನಿರ್ಗುಣ'' ನೆನ್ನುವರು. ವಾಕ್ಯಭೇದವೇ ಹೊರತು ತತ್ವಭೇದವಲ್ಲ. ಆ ಪರಬ್ರಹ್ಮಸಾಕ್ಷಾತ್ಕಾರಕ್ಕಾಗಿಯೇ ಎಲ್ಲರೂ ಪ್ರಯತ್ನಿಸಬೇಕು. ಪರಮಾತ್ಮ ಸಾಕ್ಷಾತ್ಕಾರಸಾಧನೆಗೆ ಜಾತಿ ಮತಾಧಿಕಾರಗಳಾವುವೂ ಅಟಂಕವಿಲ್ಲ. ಈ ನಿರ್ಗುಣ ಬ್ರಹ್ಮಾರಾಧನ ಮಾರ್ಗವೇ ನೀತಿ ಶಾಸ್ತ್ರ ಸ್ವರೂಪವಾಗಿದೆ.

ಪಕ್ಷಪಾತಸುಲೋಚನಗಳನ್ನು ತೆಗೆದಿಟ್ಟು ಧರ್ಮ ಸಮಾಲೋಚನೆಮಾಡಿದೊಡೆ, ಸರ್ವಮಾನವ ಸೌಭ್ರಾತೃತ್ವವೇ ವೇದಾಂತನ ಮೊದಲನೇ ಸೋಪಾನವೆಂಬ ಪರಮಾರ್ಥ ರಹಸ್ಯವು ಗೋಚರವಾಗುತ್ತದೆ. ದಯಾಮಯರಾದ ಇಂತಹ ಮಹಾಜನರು ಜೀವಕಾರುಣ್ಯವುಳ್ಳವರಾಗಿ ಲೋಕೋಪಕಾರಿಗಳಾಗಿರುತ್ತಾರೆ. ''ಆತ್ಮವತ್ಸರ್ವಭೂತಾನಿ'' ಎಂಬ ಮಹಾವಾಕ್ಯದ ಸತ್ಯಾರ್ಥವು ಜ್ಞಾನಚಕ್ಷುಗಳಿಗೆ ಮಾತ್ರ ಚೆನ್ನಾಗಿ ಗೋಚರವಾಗುತ್ತದೆ.

ಬ್ರಹ್ಮಸಾಕ್ಷಾತ್ಕಾರಕ್ಕೆ ಬಾಹ್ಯಾಚಾರಗಳೂ, ವೇಷಭಾಷೆಗಳೂ, ಕಾರಣವಲ್ಲ. ಆದುದರಿಂದ ತನಗಿಂತಲೂ ಭಿನ್ನವಾದ ವೇಷಭಾಷೆಗಳುಳ್ಳವರಾಗಿರುವುದರಿಂದಲೇ ಇತರರು ಮೋಕ್ಷಾಧಿಕಾರಿಗಳಲ್ಲವೆಂದು ದೂಷಿಸಬಾರದು. ಅನ್ಯರನ್ನು ನಿಕೃಷ್ಟನಾಗಿ ಭಾವಿಸುವದೇ ತನ್ನ ಮು

ಮುಕ್ಷುತ್ವಕ್ಕೆ ಲಕ್ಷಣವಲ್ಲ. ಈಶ್ವರ ಜ್ಞಾನಸಾಧನೆಗೆ ಸಹಕಾರವಾಗ ದಿದ್ದ ಪಕ್ಷದಲ್ಲಿ ಅಂತಹ ನಿರರ್ಥಕಾಡಂಬರಗಳನ್ನು ಪರಿತ್ಯಜಿಸಬೇಕು. ತನ್ನ ಅಂತರಾತ್ಮನಿಗೊಪ್ಪಿತವಲ್ಲದ ನಟನೆಗಳನ್ನು ಇತರರ ಮೆಚ್ಚಿಕೆಗಾಗಿ ಇಟ್ಟುಕೊಳ್ಳಬಾರದು.

ಧಾರ್ಮಿಕನಾದ ಪ್ರತಿಯೊಬ್ಬನೂ ತನ್ನ ಸರ್ವಶಕ್ತಿಗಳನ್ನೂ ಧಾರೆ ಯೆರೆದು, ಗ್ರಂಥಪೇಟಿಕೆಗಳಲ್ಲಿ ಗುಪ್ತವಾಗಿರುವ ಪರಮಾರ್ಥವಾಕ್ಯ ಮಾಣಿಕ್ಯಗಳನ್ನು ಆರಿಸಿ, ತಾನೂ ಧರಿಸಿಕೊಂಡವನಾಗಿ ಅನೇಕತಲಾಂತರ ಗಳವರಿವಿಗೂ ಪ್ರಜೆಗಳಿಗೆಲ್ಲಾ ಲಭಿಸುವಂತೆ ಪ್ರಕಾಶಗೊಳಿಸಬೇಕು. ಜ್ಞಾನಬೀಜವು ಸರ್ವತ್ರ ಪ್ರಕಾಶಹೊಂದುವಂತೆ ಮಾಡಬೇಕು. ಜ್ಞಾನತೇ ಜೋವಿರಾಜಿತರಿಗೆ ಭೇದವಾದಗಳಿಗವಕಾಶವಿರುವುದಿಲ್ಲವು. ಭಿನ್ನವಾದ ಗಳು ನಶಿಸಿ ಪರಮಾತ್ಮನ ಏಕತ್ವವು ಗೋಚರವಾಗುತ್ತದೆ.

"ಏಕಂಸದ್ವಿಪ್ರಾ, ಬಹುಧಾವದಂತಿ"

ಸಚ್ಚಿದ್ಬದ್ಧವಾಚ್ಯನೂ, ಸತ್ಯಮೂರ್ತಿಯೂ, ಒಬ್ಬನೂ, ಆದ ಭಗವಂತನನ್ನು ಜ್ಞಾನಿಗಳು ನಾನಾ ವಿಧವಾಗಿ ವರ್ಣಿಸಿರುತ್ತಾರೆ. ಪರ ಮಾತ್ಮನಿಗೆ ಜೀವಾತ್ಮನು ಅನನ್ಯ ಸಂಬಂಧ ಉಳ್ಳವನಾಗಿರುತ್ತಾನೆ. "ಜ್ಞಾನಾನಂದಮಯಸ್ತ್ವಾತ್ಮಾ, ಶೇಷೋಹಿಪರಮಾತ್ಮನಃ" ಈ ಅರ್ಥವನ್ನು, ಮಹಾಯೋಗಿಯಾದ ಜಡಭರತನೂ, ಇದರಂತೆಯೇ ಅನೇಕ ಮಂದಿ ಯೋಗಿಗಳೂ, ಏಕಮುಖನಾಗಿ ಸಾರಿರುತ್ತಾರೆ. ಭಗವದ್ಭಕ್ತರು ನಾಶರಹಿತರೂ ದೈವಾಂಶೆಯುಳ್ಳವರೂ ಆಗಿರುತ್ತಾರೆಂದು ಯೆಲ್ಲಾ ಮತ ಗಳೂ ಸೂಚಿಸುತ್ತವೆ. ಇದರ ತತ್ವವನ್ನರಿಯುವವರಾದ ಅನೇಕರಿಗೆ ಜೀವಿತವು ದುಃಖಮಯವಾಗಿ ಕಾಣುತ್ತದೆ. ಜ್ಞಾನಿಗಳ ಸಾನಿಧ್ಯವ ನ್ನೈದಿ, ಸದ್ವಿಚಾರವಮಾಡಿದರೇ ಅಜ್ಞಾನವು ನಶಿಸಿ ಹೋಗುವದು. ಅಜ್ಞಾನವು ನಶಿಸಿದ ತಕ್ಷಣವೇ ಜೀವಿಗಳನ್ನು ಬಂಧಿಸತಕ್ಕ ಎಲ್ಲಾ ವಿಧ ವಾದ ಘೋರಶೃಂಖಲಗಳೂ ಹರಿದು ಹೋಗ ಯಾರಿಂದಲೂ ಕೆಡಿಸಲಸಾ ಧ್ಯವಾದ ಪರಮಾರ್ಥಸಿದ್ಧಿ ಕೈಗೂಡಿ ಅಖಂಡಾನಂದ ಸ್ವಯಂಪ್ರಕಾಶ ಪರಿಪೂರ್ಣ ದಿವ್ಯಮಂಗಳಮಯವಾದ ಸ್ವಸ್ವರೂಪದರ್ಶನವಾಗುವುದು.

## ದ್ವಿತೀಯಜಿಜ್ಞಾಸೆ.

"ಯಂ ಶೈವಾಸ್ಸಮುಪಾಸತೇ ಶಿವಇತಿ ಬ್ರಹ್ಮೇತಿ ವೇದಾಂತಿನೋ । ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿನೈಯಾಯಿಕಾಃ ॥ ಅರ್ಹನ್ನಿತ್ಯಥ ಜೈನಶಾಸನರತಾಃ ಕರ್ಮೇತಿ ಮೀಮಾಂಸಕಾಃ । ಸೋಽಯಂನ್ನೋವಿದಧಾತು ವಾಂಛಿತ ಫಲಂತ್ರೈಲೋಕ್ಯನಾಥೋಹರಿಃ ॥

ಯಾವಾತನನ್ನು ಶೈವರು ಶಿವನೆಂತಲೂ, ವೇದಾಂತಿಗಳು ಬ್ರಹ್ಮವೆಂತಲೂ, ಬೌದ್ಧರು ಬುದ್ಧನೆಂತಲೂ, ನೈಯಾಯಿಕರು ಕರ್ತನೆಂತಲೂ ಜೈನರು ಅರ್ಹತನೆಂತಲೂ, ಮೀಮಾಂಸಕರು ಕರ್ಮವೆಂತಲೂ, (ನಾನಾ ವಿಧವಾಗಿ) ಭಾವಿಸುತ್ತಿರುವರೋ ಆ ಭಗವಂತನಾದ ಪರಮಾತ್ಮನು ಎಲ್ಲರ ಮನೋಭೀಷ್ಟವನ್ನು ಸಿದ್ಧಿಗೊಳಿಸಲಿ.

ಅಖಂಡಸಚ್ಚಿದಾನಂದ ಸ್ವಯಂಪ್ರಕಾಶ ಪರಿಪೂರ್ಣವಾದ ಪರಬ್ರಹ್ಮವಿಚಾರಪರರಾದ ಬ್ರಹ್ಮವೇತ್ತರ ಅಭಿಪ್ರಾಯವು ಈರೀತಿಯಾಗಿರುತ್ತದೆ.

ಆದರೇ ಮಹಾಪುರುಷರಾದ ಜ್ಞಾನಿಗಳು ಆಕಸ್ಮಿಕವಾಗಿ ಭಗವನ್ಮಹಿಮಾವೈಭವವನ್ನು ನಾನಾವಿಧವಾಗಿ ಪ್ರಕಾಶಗೊಳಿಸುವರು. ಅವರಿಗೆ ಪಿಪೀಲಿಕಾದಿ ಬ್ರಹ್ಮಪರ್ಯಂತರ ಸಮಸ್ತ ಪದಾರ್ಥಗಳೂ ಭಗವನ್ಮಯವಾಗಿಯೇ ಕಾಣುವುದರಿಂದ, ಒಂದೆಡೆಧ್ಯಾನಿಸುವರು, ಒಂದೆಡೆ ಸ್ತುತಿಸುವರು ಒಂದೆಡೆ ಕೀರ್ತಿಸುವರು, ಒಂದೆಡೆ ನಾಟ್ಯವಾಡುವರು, ಮತ್ತೊಂದೆಡೆ ನಗುವರು, ಒಂದೆಡೆ ಮೌನದಿಂದಿರುವರು, ಒಂದೆಡೆ ಅಂತರ್ಮುಖಿಗಳಾಗುವರು, ಒಂದೆಡೆ ಬಹಿರ್ಮುಖಿಗಳಾಗುವರು. ಹೀಗೆ ಅನಂತಲೀಲಾಮೃತವನ್ನುಸವಿದ ಸಂತೋಷ ಚಿತ್ತರಾದ ಪರಮಯೋಗಿಗಳು ಏಕತ್ವ ಬಹುತ್ವ ವೈಷಮ್ಯಗಳಿಲ್ಲದವರಾಗಿ ಅನಂತನನ್ನು ಅನಂತವಿಧಗಳಿಂದ ಸಂದರ್ಶಿಸುವರು. ಈ ಪರಮರಹಸ್ಯವನ್ನರಿಯದ ಕಾರಣದಿಂದ ಯೋಗಬಾಹ್ಯರಾದ ಮತಾವೇಶಪಿಶಾಚಗ್ರಸ್ತರು ಭಗವಂತನನ್ನು ಪ್ರಾಕೃತನಿರ್ಮಿತಗಳಾದ, ಸಂಕುಚಿತ ಭಾವಬದ್ಧವಾದ ಮತ್ತು ಏಕದೇಶೀಯವಾದ ಜಡಪದಾರ್ಥಗಳಲ್ಲಿ ಮಾತ್ರವೇ ಇರುನೆಂಬ ಭ್ರಾಂತಿಯಿಂದ ಅದನ್ನೇ ಸಾಧಿಸುತ್ತ ಭಗವಂತನ ಸರ್ವಜ್ಞತ್ವ, ಸರ್ವಶಕ್ತಿತ್ವ, ಸರ್ವಾಂತರ್ಯಾಮಿತ್ವಗಳಿಗೆ ವಿರುದ್ಧವಾದ

ತಮ್ಮ ಅಲ್ಪತ್ವವನ್ನು, ಭಯಂಕರವಾದ ತರ್ಜನಭರ್ಜನ ಗರ್ಜನಾದಿಗಳಿಂದ ನಾನಾಮುಖವಾಗಿ ಪ್ರದರ್ಶಿಸುತ್ತಾರೆ. ಇವರಂತೆಯೇ ವಿವೇಕಶೂನ್ಯರಾದ ಮತ್ತೆ ಕೆಲಬರು ಭಗವಂತನು ವಿಗ್ರಹಗಳಲ್ಲಿಲ್ಲವೆಂತಲೂ, ಆತನು ಸರ್ವಾಂತರ್ಯಾಮಿಯಾದಾಗ್ಯೂ ದೀಪವು ಅಂಧಕಾರವನ್ನು ನಾಶಗೊಳಿಸಿ ಸಮಸ್ತ ಪದಾರ್ಥಗಳನ್ನೂ ದೃಷ್ಟಿಗೋಚರವಾಗುವಂತೆ ಮಾಡುವದಾದರೂ, ದೀಪವು ದೀಪವಾಗುವುದಲ್ಲದೇ ದೀಪದಿಂದ ಪ್ರಕಾಶಿಸಲ್ಪಡುವ ಪದಾರ್ಥಗಳೆಲ್ಲವೂ ಸ್ವತಃ "ದೀಪ" ಗಳಾಗಲಾರವೆಂತಲೂ ಅದರಂತೆಯೇ ವಿಗ್ರಹಗಳೂ ದೈವಸಂಬಂಧವಿಲ್ಲದುವುಗಳೆಂತಲೂ ಹೇಳುವವರಾಗಿ ತಮ್ಮ ಅವಿವೇಕವನ್ನೇ ಬಾರಿಬಾರಿಗೂ ಸಾರುತಲಿರುತ್ತಾರೆ. ಭಗವಂತನಿಗೆ ಉಪಮೇಯವಾಗಿ ನಿಲ್ಲತಕ್ಕ ಪದಾರ್ಥವಾವುದೂ ಇಲ್ಲವೆಂಬ ಮಹಾವಾಕ್ಯದ ತತ್ವಾರ್ಥವನ್ನು ಮರೆತು ಹೋಗುವುದೇ ಇದಕ್ಕೆ ಕಾರಣ. ಮೊದಲು ದೀಪವನ್ನು ಪ್ರಕಾಶಗೊಳಿಸುವರೊಬ್ಬರಿರ ಬೇಕಲ್ಲವೇ. ಆಗ ದೀಪವೂ ಒಂದು ಪದಾರ್ಥವೇ ಅಲ್ಲವೇ ? ತರ್ಕಶಾಸ್ತ್ರಕ್ಕೂ, ವ್ಯಾಕರಣಶಾಸ್ತ್ರಕ್ಕೂ, ಸಂಗೀತಶಾಸ್ತ್ರಕ್ಕೂ, ವೈದ್ಯ ಶಾಸ್ತ್ರಕ್ಕೂ, ಜ್ಯೋತಿಷ್ಯಶಾಸ್ತ್ರಕ್ಕೂ, ಗೋಚರಿಸಲಾರದ ಬ್ರಹ್ಮತೇಜವು,

"ಗೋಪ್ಯಸ್ಯನ್ನಧಾವನ್ವಯು ಮಾಪಯೋಗಿನಾಂ । ಕ್ಷಮಂ
ಪ್ರವೇಷ್ಟುಂ ತಪಸೇರಿತಾಂಮನಃ ॥ ನಚಾಂತರ್ನ ಬಹಿರ್ಯಸ್ಯ
ನಪೂರ್ವಂನಾಪಿಚಾಪರಂ । ಪೂರ್ವಾಪರಂ ಬಹಿಶ್ಚಾಂತರ್ಜ
ಗತೋ ಯೋಜಗಚ್ಚಯಃ ॥ (ಭಾಗವತ ದಶಮಸ್ಕಂಧ)

ನಾಲ್ಕು ವೇದಗಳನ್ನೂ ಸಾಂಗವಾಗಿ ಅಧ್ಯಯನ ಮಾಡಿದವರಾದರೂ, ಸಮಸ್ತ ಶಾಸ್ತ್ರಗಳನ್ನೂ ಸಮಗ್ರವಾಗಿ ಓದಿದವರಾದರೂ, "ಸೌಟು" ಅಡಿಗೆ ಮಾಡುವಲ್ಲಿ ಅತಿ ಮುಖ್ಯವಾದ ಸಲಕರಣವಾಗಿದ್ದರೂ ಅಡಿಗೆಯ ರುಚಿಯನ್ನು ಹೇಗೆ ಗ್ರಹಿಸಲಾರದೋ, ಅದರಂತೆಯೇ (ಕೇವಲಶಾಸ್ತ್ರಪಾಠಿಗಳಾದವರು) ಪರಬ್ರಹ್ಮ ತತ್ವಾರ್ಥವನ್ನು ಅರಿಯಲಾರರು. ಅಂದರೇ ಬ್ರಹ್ಮಾನಂದವು ಭಗವದನುಗ್ರಹದಿಂದಲೇ ಉಂಟಾಗಬೇಕೆಂದಭಿಪ್ರಾಯವು. ಭಗವದನುಗ್ರಹವಾದರೋ ಭಕ್ತಿಶ್ರದ್ಧೆಗಳಿಂದೊಡಗೂಡಿದ ಪರಮಾರ್ಥ ವಿಚಾರದಿಂದಲ್ಲದೆ ಸುಮ್ಮನೆ ಲಭಿಸತಕ್ಕುದಲ್ಲ. ಅಂದರೇ ಉಪಾಸಕನ ಸಾಧನ

ಸಂಪತ್ತಿಯು ಎಷ್ಟು ದೃಢವಾಗಿ ದಿನದಿನಾಭಿವೃದ್ಧಿ ಹೊಂದುತ್ತದೆಯೋ, ಅವನಲ್ಲಿ ಗುಪ್ತವಾಗಿರುವ ಬ್ರಹ್ಮತೇಜವೂ ಅಷ್ಟು ತ್ವರಿತವಾಗಿ ಪ್ರಕಾಶ ಹೊಂದುತ್ತದೆ. ಚಿದೈಶ್ವರ್ಯ ಪರಿಪೂರ್ಣನಾದ ಭಗವಂತನ ಸರ್ವಜ್ಞತ್ವ ಸರ್ವಾಂತರ್ಯಾಮಿತ್ವ, ಸರ್ವಶಕ್ತಿತ್ವಗಳನ್ನು ಉಪಾಸಕನು ತನ್ನ ಹೃದಯ ಕಮಲದಲ್ಲಿ ಸಂಕಲ್ಪಿಸಿಕೊಂಡು, ಬೇರೆ ಯಾವ ವಿಧವಾದ ಚಾಂಚಲ್ಯವೂ ಇಲ್ಲದವನಾಗಿ, ಈಶ್ವರ ಸಾನ್ನಿಧ್ಯವನ್ನು ಅಭ್ಯಾಸಮಾಡುತ್ತ ಬಂದರೇ ಮೇಲೆ ಹೇಳಿದಂತೆ ಸಧನೆಗೆ ಫಲಿತಾಂಶನಾದ ಪರಿಪೂರ್ಣತ್ವವನ್ನು ಪಡೆಯುತ್ತಾನೆ. ಇದನ್ನು ಕುರಿತ ಉಪನಿಷದ್ವಾಕ್ಯವು ಈವರೆಗೇ ಸೂಚಿತವಾಗಿದೆಯಲ್ಲವೆ?

“ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣ ಮುದಚ್ಯತೇ । ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವ ಶಿಷ್ಯತೇ” ಈ ಶ್ರುತಿ ವಾಕ್ಯವನ್ನು ವ್ಯಾಖ್ಯಾನ ಮಾಡುತ್ತಾ, ಭಾಷ್ಯಕಾರನು ಹೀಗೆಂದು ವಿವರಿಸಿರುತ್ತಾನೆ.

> “ಏವಂತ್ರ್ಯವಿದ್ಯೇನ ಪ್ರಕಾಶಮಾನಂ ಬ್ರಹ್ಮಯುಗಮದು ಪಾಸನಾರ್ಥಂ ಗ್ರಹೀತು. ಮಶಕ್ಯತ್ವಾತ್ ಯದಿ ಪ್ರತಿಹೃದಯುಗತಂ ಬ್ರಹ್ಮೈಕ್ಯಗೃಹ್ಣಾತಿಸಾಧಕಃ, ಸಾಧನಾಭ್ಯಾಸಹೇತೋಃ ಕಿಮಸ್ತಿ ತತ್ರದೋಷ ಸಂಭಾವನಾ? ತದುತ್ತರೇ ಶ್ರುತಿರಾಹ-ಪೂರ್ಣಸ್ಯಸರ್ವಾತೀತಸ್ಯಪೂರ್ಣಂಸರ್ವಾಂತರ್ಯಾಮಕಂ ಆದಾಯಯತ್ ಅವಶಿಷ್ಯತೇ ಪ್ರತಿಹೃದಯುಗತಂ ಬ್ರಹ್ಮತತ್ ಪೂರ್ಣಮೇವ. ಎಂದು ವ್ಯಾಖ್ಯಾನಮಾಡಿರುತ್ತಾನೆ.

ಅನಂತ ಗುಣರಾಶಿಯಾದ ಭಗವಂತನಲ್ಲಿ ಸಾಧಕನ ಸಕಲಮನೋಭಾವಗಳೂ ಲೀನವಾಗಿ ಸಾಮರಸ್ಯವನ್ನು ಹೊಂದದಿದ್ದರೂ, ಪ್ರಾರಂಭ ದಶೆಯಲ್ಲಿರುವ ಸಾಧಕನಚಿತ್ತದಲ್ಲಿ ಭಗವಂತನ ಚಿದಾಕಾರವು ನಾನಾವಿಧ ಸಾಕಾರಗಳಿಂದಲೇ ಪ್ರತ್ಯಕ್ಷವಾಗುತ್ತದೆ. ಮತ್ತು ಸಾಧಕನನ್ನು ಆಶ್ಚರ್ಯಪ್ರಮೋದಮಗ್ನಮಾನಸನನ್ನಾಗಿಮಾಡುತ್ತ ಸಾಧನ ಸಮುದ್ರದಲ್ಲಿ ಅನುಕ್ಷಣವೂ, ಮುಳುಗಿಸುತ, ತೇಲಿಸುತ ಚಿತ್ರವಿಚಿತ್ರವಾಗಿ ಓಲಾಡಿಸುತ್ತದೆ. ಆದಾಗ್ಯೂ

ದೃಢಸಂಕಲ್ಪನಾದ ಸಾಧಕನು ಅನಂತಲೀಲಾಮೃತ ಪರಿಪೂರ್ಣತ್ವದಲ್ಲಿ ಐಕ್ಯವಾಗುತ್ತಾನೆ.

—:ಮಾಯಾವಿಚಾರ.:—

ಶ್ರುತಿ॥ ಮಾಯಾಂತುಪ್ರಕೃತಿಂ ವಿಂದ್ಯಾನ್ಮಾಯಿನಂತು ಮಹೇಶ್ವರಮ್॥
(ಶ್ವೇತಾಶ್ವತರೋಪನಿಷತ್—೪. ೧೦.)

"ಮಾಯೆ" ಎಂದರೆ ಪ್ರಕೃತಿ ಎಂದು ತಿಳಿ! ಮಹೇಶ್ವರನು (ಪರಮಾತ್ಮನು) ಮಾಯೆಯನ್ನು ಶಾಸಿಸತಕ್ಕ ಮಾಯಾತೀತನೆಂದು ತಿಳಿ! ಎಂದೀ ಉಪನಿಷದ್ವಾಕ್ಯವು ಬೋಧಿಸುತ್ತದೆ. ಮೇಘವು, ಸೂರ್ಯನನ್ನು ಮರೆಮಾಡುವಂದದಿ ಬ್ರಹ್ಮವಿಚಾರವನ್ನು ಮರೆಮಾಡಿ ಜೀವಾತ್ಮರನ್ನು ಭ್ರಾಂತಿಗೊಳಿಸತಕ್ಕ ಶಕ್ತಿಗೆ ಮಾಯೆ, ಯೆಂದು ಹೆಸರು.

ಭಂಗಾರವು, ಒಂದೇ ಆದಾಗ್ಯೂ, ಕಂಕಣ, ಪಿಡ್ಯಾಣ, ಕರ್ಣಭೂಷಣಾದಿ ಆಭರಣಗಳ ರೂಪವನ್ನು ಹೊಂದಿ, ಬೇರೆಬೇರೆ ಹೆಸರುಗಳಿಂದ ಭೇದವಾಗಿ ತೋರುವಂತೆ, ಭೇದರಹಿತವಾದ ಬ್ರಹ್ಮವು ಮಾಯಾಸಂಬಂಧದಿಂದ ಭೇದವಾಗಿರುವಂತೆ ಭ್ರಾಂತಿಯುಂಟಾಗುವುದು. ಇದಕ್ಕೇ ಮಾಯೆ ಎಂದು ಹೆಸರು. ಎಲ್ಲಾವಿಧವಾದ ಅನರ್ಥಗಳಿಗೂ ಈಮಾಯೆಯೇ ಕಾರಣವಾಗಿರುತ್ತದೆ, ಎಂದು ಮಹಾತ್ಮರಾದ ಜ್ಞಾನಿಗಳು ಬಣ್ಣಿಸಿರುತ್ತಾರೆ.

ಮಾಯೆಯನ್ನು ಕುರಿತು ವಿಸ್ತಾರವಾಗಿ ವಿವರಿಸುವುದಕ್ಕೆ ಮೊದಲು ಇಲ್ಲಿ ಹೇಳಬೇಕಾದಮುಖ್ಯಾಂಶವೊಂದಿದೆ. ಅದೇನೆಂದರೆ;—

## ರಜ್ಜುಸರ್ಪಭ್ರಾಂತಿ.

ಅಂದರೇ ಒಬ್ಬ ಮನುಷ್ಯನು, ಒಂದಾನೊಂದು ಸಾಯಂಕಾಲದಲ್ಲಿ ಬೀದಿಯಲ್ಲಿ ಹೋಗುತ್ತಿದ್ದು, ಅಲ್ಲೊಂದು ಕಡೆ ಬಿದ್ದಿದ್ದ "ಹಗ್ಗ" ವನ್ನು ನೋಡಿ, ಅದನ್ನು ಸರ್ಪ ವೆಂದು ಭಾವಿಸಿ ಗಾಬರಿಪಟ್ಟು ಗಟ್ಟಿಯಾಗಿ ಕಿರಿಚಿಕೊಂಡನು. ಅದನ್ನು ಕೇಳಿ ನೆರೆಹೊರೆಯವನೇಕರು ಓಡಿಬಂದು, ಏನು? ಏನೆಂದು ಕೇಳಿದರು. ಅದಕ್ಕಾತನು ಗಡಗಡನೆ ನಡುಗುತ್ತ,

"ಹಾವು! ಹಾವೆಂದು ಹೇಳಿದನು, ಆಗಲಾ ಜನರಲ್ಲಿ ಕೆಲವರು ಮನೆ
ಗಳಿಗೆ ಓಡಿಹೋಗಿ ಭರ್ಜಿ ಗಳನ್ನೂ, ಕೋಲುಗಳನ್ನೂ ತಂದು
ಅದನ್ನು ತಿವಿದರು. ಅದು ಕದಲಲಿಲ್ಲ. ಸತ್ತ ಹಾವೆಂದು ನಿಶ್ಚಯಿಸಿದರು.
ಆದಾಗ್ಯೂ ಯಾರೂ ಅದನ್ನು ಸಮೀಪಿಸಲಿಲ್ಲ. ಆಗ ಅವರಲ್ಲಿ ವಿಚಾರ
ಪರನಾದ ಒಬ್ಬಾತನು, ಅವರ ಆರ್ಭಟಗಳನ್ನು ನಿಲ್ಲಿಸಿ, ತಾನು ಸಮೀ
ಪಕ್ಕೆ ಹೋಗಿ ಕೈಯಿಂದ ತಡವಿನೋಡಿ ಅದರ ನಿಜಸ್ಥಿತಿಯನ್ನು ಕಂಡು
ಹಿಡಿದು, ಅಯ್ಯಾ ಜನಗಳಿರಾ! ಏತಕ್ಕೆ ಗಾಬರಿ ಪಡುತ್ತೀರಿ? ಇದು
ಹಾವಲ್ಲ! ಹಗ್ಗವು! ಎಂದು ಕೈಯಿಂದೆತ್ತಿ ತೋರಿಸಿದನು. ಆಗ ಜನ
ರೆಲ್ಲರೂ "ಹಗ್ಗ! ಹಗ್ಗ! ಹಾವಲ್ಲ! ಹಾವಲ್ಲ! ಹಗ್ಗ! ಎಂದು
ಒಬ್ಬರೊಂದಿಗೊಬ್ಬರು ಹೇಳಿ ಕೊಳ್ಳುತ್ತ ಮನೆಗಳಿಗೆ ಹೋದರು.

ಆದುದರಿಂದ ಪದಾರ್ಥ ವಿಜ್ಞಾನವು ಸರಿಯಾಗಿಲ್ಲದವರು, ಅಂದರೇ
ನಿತ್ಯಾನಿತ್ಯವಸ್ತು ವಿವೇಕವಿಲ್ಲದವರು ಕೆಲವು ಮಂದಿ ತಮ್ಮ ಮನೋದೌ
ರ್ಬಲ್ಯದಿಂದುಂಟಾಗುವ ಭ್ರಾಂತಿಯನ್ನು ಪ್ರಪಂಚಕ್ಕೆ ತೋರ್ಪಡಿಸಿ ಅನೇ
ಕಭ್ರಮ ಪ್ರಮಾದಗಳನ್ನುಂಟುಮಾಡುತ್ತಾರೆ. ಇಂತಹ ಅನರ್ಥ ಕರವಾದ
ಸಂಕಲ್ಪಗಳೆಲ್ಲವೂ ಯಾವುದರಿಂದುಂಟಾಗುವುದೋ ಅದಕ್ಕೆ "ಪ್ರಕೃತಿ
ಚಾಂಚಲ್ಯ" ಅಥವಾ ಮಾಯೆ ಎಂದು ಹೆಸರು.

## —:ಮಾಯಾಪರೀಕ್ಷೆ.:—

ನೈಮಿಶಾರಣ್ಯದಲ್ಲಿ ತಪಸ್ಸು ಮಾಡುತ್ತಿದ್ದ ಶಾಂಡಿಲ್ಯ ಮಹರ್ಷಿಯ
ಶಿಷ್ಯರಲ್ಲೊಬ್ಬನಾದ ಸುಯಜ್ಞ ನೆಂಬಾತನು, ಒಂದಾನೊಂದು ದಿವಸ
ತನ್ನ ಗುರುವಿನ ಬಳಿಗೆ ಬಂದು, ಎಲೈ ಪ್ರಭುವೇ! ವಿಷ್ಣುಮಾಯೆ!
ವಿಷ್ಣುಮಾಯೆ! ಎಂದು ತಾವು ಪದೇಪದೇ ಹೇಳುತ್ತೀರಲ್ಲಾ! ಅದರ
ವಿವರವೇನು? ಅದು ಮುನಿಪುತ್ರರಾದ ನಮ್ಮನ್ನೇನು ಮಾಡಬಲ್ಲದು?
ಅದರ ಪ್ರತಾಪನೆಷ್ಟರದು? ಎಂದು ಅಲಕ್ಷ್ಯವಾಗಿ ಪ್ರಶ್ನೆಮಾಡಿದನು.
ಆಗ ಶಾಂಡಿಲ್ಯನು ತನ್ನ ಮನಸ್ಸಿನಲ್ಲಿ ಓಹೋ! ಭಗವನ್ಮಾಯಾ
ಪ್ರಭಾವವು ಇವನಿಗಿನ್ನೂ ತಿಳಿಯಲಿಲ್ಲವೆಂದು ಕಾಣುತ್ತದೆ! ವಿಶ್ವಾ

ಮಿತ್ರ, ಪರಾಶರ, ಭೃಗು, ವಸಿಷ್ಠ, ನಾರದಾದಿ ಮಹಾಮುಹರಿಗೂ ಅಜೇಯವಾದ "ವಿಷ್ಣುಮಾಯೆಯ ಬಿಸಿಯು" ಇವನಿಗಿನ್ನೂ ನೋಕಲಿಲ್ಲವೆಂದು ತೋರುತ್ತದೆ! ಒಂದು ಸಾರಿಯಾದರೂ ನೋಕಸಿದ್ದರೆ ಬುದ್ಧಿ ಬರುವುದಿಲ್ಲ! ಎಂದು ನಿಶ್ಚಯಿಸಿ, ಮುನಿಕುಮಾರಾ! ನೀನು ಕೇಳಿದುದು ಒಳ್ಳೆಯಪ್ರಶ್ನೆ! ಇದು ಮುಖ್ಯವಾಗಿ ತಿಳಿಯ ಬೇಕಾದ ವಿಷಯವು! ಸ್ವಲ್ಪ ಶ್ರಮೆತೆಗೆದುಕೊಂಡು, ಆಗೋ ಅಲ್ಲಿರುವ ಸರೋವರ ದಲ್ಲಿ ಸ್ನಾನಮಾಡಿಬಾ! ನಂತರ ಭಗವನ್ಮಾಯೆಯು ತಿಳಿಯಲಾಗುತ್ತದೆ! ಎಂದು ಹೇಳಿದನು.

ಸುಜ್ಞನು ಒಡನೆಯೆ ಸರೋವರಕ್ಕೆ ತೆರಳಿ ನೀರಲ್ಲಿ ಮುಳು ಗಿದನು. ತಕ್ಷಣವೇ ಎಲ್ಲಿಯೋ ಒಂದು ದೊಡ್ಡಪಟ್ಟಣದ ಮುಂಭಾಗ ದಲ್ಲಿ ಹೋಗುತ್ತಿದ್ದನು. ಆ ಪಟ್ಟಣದ ಅರಸನು ಆ ದಿವಸವೇ ಮರಣ ಹೊಂದಿದ ಕಾರಣದಿಂದ, ಮಕ್ಕಳಿಲ್ಲದ ಆ ರಾಜನ ರಾಜ್ಯಕ್ಕೆ ಯಾರು ಅರಸರಾಗಬೇಕೆಂಬ ಜಗಳ ಹುಟ್ಟಿ, ದಾಯಾದಿಗಳೆಲ್ಲರೂ ಸೇರಿ, ಪಟ್ಟದ ಆನೆಯ ಸೊಂಡಲಕ್ಕೆ ಹೂವಿನಹಾರವನ್ನು ಕೊಟ್ಟು ಅದು ಯಾರ ಕೊರಳಿಗೆ ಹಾಕುತ್ತದೆಯೋ ಅವನನ್ನು "ಅರಸ"ನನ್ನಾಗಿ ಮಾಡುವಂತೆ ನಿಶ್ಚಯಿಸಿಕೊಂಡು ಆನೆಯೊಂದಿಗೆ ಎಲ್ಲರೂ ಬರುತ್ತಿದ್ದರು. ಆ ಮದ ಗಜವು ಎಲ್ಲರನ್ನೂ ಬಿಟ್ಟು, ಊರುಮುಂದೆ ಹೋಗುತ್ತಿದ್ದ ಈ ಮುನಿ ಪುತ್ರನ ಕೊರಳಿಗೆ ಹಾರವನ್ನು ಹಾಕಿ ಘೀಂಕಾರ ಮಾಡಿತು. ಆಗಲಾ ಪುರವಾಸಿಗಳೆಲ್ಲರೂ, ಮುನಿ ಪುತ್ರನಿಗೆ ನಮಸ್ಕರಿಸಿ, ಆ ದೇಶಾಚಾರ ವನ್ನು ತನಿಗೆ ತಿಳಿಸಿ, ಆತನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ರಾಜ್ಯಾ ಭಿಷೇಕ ಮಾಡಿದರು. ಪಟ್ಟಾಭಿಷೇಕಕ್ಕೆ ಬಂದಿದ್ದ ಸಾಮಂತ ರಾಜ ರಲ್ಲೊಬ್ಬಾತನು ಈ ನೂತನ ರಾಜನಿಗೆ ತನ್ನ ಮಗಳನ್ನು ಕೊಟ್ಟು ವಿವಾಹಮಾಡಿದನು. ರಾಜನಿಗೆ ನಾಲ್ಕಾರು ಮಂದಿ ಮಕ್ಕಳಾದುವು. ಸಂ ಸಾರವು ದೊಡ್ಡದಾಯಿತು. ಬಹು ಪ್ರತಾಪದಿಂದ ರಾಜ್ಯಭಾರ ಮಾಡು ತ್ತಿದ್ದನು. ಕೆಲವು ಕಾಲವಾದ ಮೇಲೆ ಈತನಿಗೂ ಸಾಮಂತರಾಜನಾದ ಮತ್ತೊಬ್ಬನಿಗೂ ವಿರೋಧವುಂಟಾಯಿತು. ಯುದ್ಧಕ್ಕೆ ಪ್ರಾರಂಭವಾ

ಯಿತು. ಶತ್ರುರಾಜನ ಪ್ರತಾಪವನ್ನು ಎದುರಿಸಲಾರದೆ ಈತನು ಸೋತುಹೋದನು. ಶತ್ರುಗಳು ಅರಮನೆಗೆ ಪ್ರವೇಶಿಸಿ ಈತನನ್ನು ಸೆರೆಹಿಡಿದು ತಮ್ಮ ರಾಜನ ಬಳಿಗೆ ಕೊಂಡೊಯ್ದರು. ಈತನನ್ನು ಕೈಕಾಲು ಕಟ್ಟಿ ನೀರಿನಲ್ಲಿ ಹಾಕಿಬಿಡಿರೆಂದಾ ರಾಜನು ಭಟರಿಗಾಜ್ಞಾಪಿಸಿದನು. ಅದರಂತೆಯೇ ಭಟರೀತನನ್ನು ಕೈ ಕಾಲು ಕಟ್ಟಿ ಆ ಪಟ್ಟಣದ ಮುಂಭಾಗದಲ್ಲಿದ್ದ ಸರೋವರದಲ್ಲಿ ಹಾಕಿದರು. ರಾಜನು ಹಾಹಾಕಾರದಿಂದ ಬೊಬ್ಬಿಡುತ್ತ, ಹತ್ತು, ಸುರಿದು ನೀರಲ್ಲಿ ಮುಳುಗಿದನು. ತಕ್ಷಣವೇ ಮೇಲಕ್ಕೆದ್ದನು. ಸುತ್ತಲೂ ನೋಡಿದನು. ಏನಿದೆ? ನಿಮಿಷಾರ್ಧಕ್ಕೆ ಮೊದಲು ತಾನು ಮುಳುಗಿದ ಸರೋವರವೇ ಆಗಿದೆ! ನೂತನರಾಜನು ಪುನಃ ಮುನಿಪುತ್ರನೇ ಆದನು. ಭಯಕಂಪಿತಗಾತ್ರನಾಗಿ ಗುರುಗಳ ಬಳಿಗೆ ಓಡಿಹೋಗಿ, ಭಕ್ತಿಪೂರ್ವಕವಾಗಿ ಸಾಷ್ಟಾಂಗನಮಸ್ಕಾರಗಳನ್ನಾಚರಿಸಿ, ತನ್ನ ಸ್ಥಿತಿಗತಿಗಳನ್ನೆಲ್ಲಾ ಹೇಳಿಕೊಂಡನು. ಆಗ ಶಾಂಡಿಲ್ಯನು ನಸುನಗುತ, ಮುನಿಕುಮಾರಾ! ನೀನಿಲ್ಲಿಂದ ಹೊರಟು ಇನ್ನೂ ಹತ್ತು ನಿಮಿಷಗಳುಕೂಡಾ ಆಗಲಿಲ್ಲವಲ್ಲಾ! ಅಷ್ಟರಲ್ಲೇ ಇಷ್ಟೊಂದು ಹೊಸವಿಚಿತ್ರಗಳನ್ನು ಹೇಳುತ್ತಿರುವೆಯಲ್ಲಾ! ಎಷ್ಟು ಬೇಗನೆ ರಾಜನಾದೆ? ಎಷ್ಟುಬೇಗ ಮದುವೆಯಾಯಿತು? ಮಕ್ಕಳಾಯಿತು? ಎಷ್ಟುಬೇಗ ರಾಜ್ಯಭ್ರಷ್ಟತೆಯುಂಟಾಯಿತು? ಏನಾಶ್ಚರ್ಯವಿದು? ಎಂದು ವಿನೋದವಾಗಿ ಕೇಳಿದನು. ಶಿಷ್ಯನಿಗೇನೂ ತೋರಲಿಲ್ಲ. ಸ್ವಾಮೀ! ನನಗೊಂದೂ ತೋರುವಹಾಗಿಲ್ಲ! ಭ್ರಾಂತನಾಗಿರುವೆನು! ಇದೇನು ಮಾಯೆಯಾಪ್ರೋ ನಾನರಿಯೆನು! ಎಂದನು. ಆಗ ಶಾಂಡಿಲ್ಯನು, ಆ! ಹಾ! ಮಗೂ! ಅದೇ! ಅದೇ!! ವಿಷ್ಣುಮಾಯೆ!!! ಎಂದು ಹೇಳುತ, ಶಿಷ್ಯನನ್ನು ಬಳಿಗೆ ಕರೆದು, ಮೈಸವರುತ, ಮಾಯಾಲಕ್ಷಣವನ್ನು ಬೋಧಿಸಿ, ಮುನಿಕುಮಾರಾ! ಕರುಣಾಸಮುದ್ರನಾದ ಭಗವಂತನ ನಿರ್ಹೇತುಕಜಾಯಮಾನ ಕೃಪಾ ಕಟಾಕ್ಷದಿಂದ ನಾವು ಕಡೆಹಾಯಬೇಕೇಹೊರತು ನಮ್ಮ ಪ್ರತಾಪಗಳೂ, ಇಂದ್ರಜಾಲಗಳೂ, ಭಗವಂತನ ಸನ್ನಿಧಿಯಲ್ಲಿ, ಲೇಶಮಾತ್ರವೂ ನಡೆಯಲಾರವೆಂದು ತಿಳಿ! ಎಂದು ಶಿಷ್ಯನನ್ನು ಸಮಾಧಾನಗೊಳಿಸಿ ಶಾಂಡಿಲ್ಯನು ಬದರಿಕಾಶ್ರಮಕ್ಕೆ ತೆರಳಿದನು. ಆದ್ದರಿಂದ

ಮಾಯಾಪ್ರಭಾವವನ್ನು ತಿಳಿದು, ಅದರ ಭ್ರಾಂತಿಯಿಂದ ವಿಮುಕ್ತರಾಗಬೇಕಾದರೆ, ಭಗವತ್ಕಟಾಕ್ಷವುಂಟಾಗಬೇಕು. ಏಕೆಂದರೆ, ಮಾಯಾಶಕ್ತಿಯು ಭಗವಂತನಿಗಧೀನವಾದುದು.

"ಪ್ರಕೃತಿಂಸ್ವಾಮಧಿಷ್ಠಾಯ, ಸಂಭವಾಮ್ಯಾತ್ಮಮಾಯಯಾ"

(ಭಗವದ್ಗೀತೆ)

ಸ್ವಕೀಯವಾದ ಮಾಯೆಯನ್ನು ಸ್ವಾಧೀನಮಾಡಿಕೊಂಡು ಸ್ವಶಕ್ತಿಯಿಂದಲೇ ನಾನವತರಿಸುತ್ತಿರುವೆನು, ಎಂದು ಗೀತಾಚಾರ್ಯನಾದ ಶ್ರೀಕೃಷ್ಣಪರಮಾತ್ಮನು ಒಕ್ಕಣಿಸಿರುವನು.

ಈ ವಿಧವಾದಮಾಯೆಯು, ಹೊನ್ನು, ಹೆಣ್ಣು, ಮಣ್ಣುಗಳೆಂಬ ಮೂರು ಬಗೆಯ ಆಶೆಗಳನ್ನುಂಟುಮಾಡಿ, ಮನುಷ್ಯಕೋಟಿಯನ್ನು, ಭಗವದ್ವಿಚಾರದಿಂದ ದೂರಕ್ಕೆತಳ್ಳಿ, ಭಗವತ್ಪ್ರಕಾಶವು ಚೇತನರಿಗೆ ಕಾಣಿಸದೆ ಮರೆಮಾಡತಕ್ಕ ಕಗ್ಗತ್ತಲೆಯಾಗಿ ಪರಿಣಮಿಸಿ, ಚೇತನರಾದ ಮನುಷ್ಯರಿಗೂ, ಸರ್ವಚೈತನ್ಯಪರಿಪೂರ್ಣನಾದ ಭಗವಂತನಿಗೂ ಮಧ್ಯೆ ಹಾಕಿರುವ ತೆರೆಯೋಪಾದಿಯಲ್ಲಿ ವ್ಯಾಪಿಸಿ "ಶ್ರೇಯಾಂಸಿಬಹುವಿಘ್ನಾನಿ" ಎಂಬಂತೆ ಭಕ್ತಜನರ ಸತ್ಪ್ರಯತ್ನಗಳಿಗೆ ಬಹುವಿಧವಾದ ವಿಘ್ನಗಳನ್ನುಂಟುಮಾಡುತ್ತದೆ. ಆದಾಗ್ಗ್ಯೂ, ದೃಢಮನಸ್ಕರಾದ ಭಗವದ್ಭಕ್ತರಿಗೆ ಇದರಿಂದ (ಮಾಯೆಯಿಂದ) ಯಾವಬಾಧಕವೂ ಉಂಟಾಗುವುದಿಲ್ಲ. ಸಾಧಕರಾದ ಭಕ್ತರು, ಪ್ರಾರಂಭದಲ್ಲಿ ತಮಗುಂಟಾಗತಕ್ಕ ವಿಘ್ನಗಳಿಗೆ ಹೆದರದೆ ಕೆಲಕಾಲ ಕಷ್ಟಗಳಿಗೆ ಸಹಿಸಿ ಭಕ್ತಿಯನ್ನು ಸಾಧಿಸಿದರೆ, ಇದರ ಸ್ವರೂಪವು ಚನ್ನಾಗಿ ಗೋಚರಿಸುತ್ತದೆ.—

ಶ್ಲೋ॥ ಹಿರಣ್ಮಯೇನಪಾತ್ರೇಣ, ಸತ್ಯಸ್ಯಾಪಿಹಿತಂಮುಖಂ।
ತತ್ತ್ವಂಪೂಷನ್ನಪಾವೃಣು ಸತ್ಯಧರ್ಮಾಯದೃಷ್ಟಯೇ ॥

(ಬೃಹದಾರಣ್ಯಕ. ೭-೧೫-೧)

ಹಿರಣ್ಮಯವಾದ (ಭಂಗಾರದ) ಪಾತ್ರೆಯಿಂದ, ಸತ್ಯವೆಂಬ ಪರಬ್ರಹ್ಮದ ಮುಖವು ಮುಚ್ಚಲ್ಪಟ್ಟಿದೆ. ಜಗತ್ಪೋಷಕನಾದ ಸೂರ್ಯನೇ ! ಸತ್ಯವನ್ನೇ ಧರ್ಮವಾಗಿ ಕೈಕೊಂಡಿರು ನನಗಾಪರಬ್ರಹ್ಮವನ್ನು ತೋರಿಸುವುದಕ್ಕಾಗಿ, ನೀನಾ ಭಂಗಾರದ ಪಾತ್ರೆಯನ್ನು ತೆಗೆದುಹಾಕು ! ಎಂದು

ತಪೋಧನರಾದ ಋಷಿಗಳು ತ್ರಿಮೂರ್ತ್ಯಾತ್ಮಕನಾದ ಸೂರ್ಯನನ್ನು ಪ್ರಾರ್ಥಿಸಿರುತ್ತಾರೆ. ಪರಂತು, ಸೂರ್ಯ ಕಿರಣಗಳ ತೇಜಸ್ಸು, ಇತರರ ದೃಷ್ಟಿಗೆ ದುರ್ಭರವಾಗಿದ್ದರೂ, ಸೂರ್ಯನಿಗದು ಸ್ವಾಧೀನವಾಗಿಯೇ ಇರುತ್ತದೆಯಷ್ಟೆ ! ಅದರಂತೆಯೇ, ಭಗವನ್ಮಾಯೆಯು ಇತರರಿಗೆ ಅಜೇಯವಾಗಿದ್ದರೂ ಭಗವಂತನಿಗದು ಸ್ವಾಧೀನವಾಗಿರುತ್ತದೆ. ಆದುದರಿಂದ ಭಕ್ತರು ಮಾಯೆ ಯನ್ನು ಗೆಲ್ಲಬೇಕೆಂದು ಅವಸ್ಥೆ ಪಡುವುದಕ್ಕಿಂತ,ಮಾಯಾತೀತ ಸ್ವರೂಪನಾದ ಭಗವಂತನನ್ನು ಶರಣು ಹೊಕ್ಕರೆ ಸಕಲಾರ್ಥಸಿದ್ಧಿಯುಂಟಾಗುತ್ತದೆ ! ಒಂದರ್ಥದಲ್ಲಿ "ಮಾಮಾಯಾ ! " ಮಾಯೆ ಯೆಂಬುದೇ ಇಲ್ಲವೆಂದು ಕೆಲವು ಮಂದಿ ಯೋಗಿಗಳು ಸೂಚಿಸಿರುತ್ತಾರೆ. ಅಥವಾ „ಮಾ ! ಎಂದರೇ ಲಕ್ಷ್ಮಿಯು. ಲಕ್ಷ್ಮಿಯೇ ಮಾಯೆ, ಎಂದು ಮತ್ತೆ ಕೆಲವು ಮಂದಿ ಭಕ್ತರು ಸೂಚಿಸಿರುತ್ತಾರೆ. ಇದರಿಂದಲೂ ಬಾಧಕವಿಲ್ಲ. ಲಕ್ಷ್ಮಿಯು ಭಗವಂತನಾದ ಶ್ರೀಮನ್ನಾರಾಯಣನ ಪತ್ನಿಯು. ಆಗಲೂ ಭಗವಂತನಿಗೆ ಒಳಪಟ್ಟವಳೇ ಹೊರತು ಅನ್ಯಳಲ್ಲ. ಆದುದರಿಂದ ಯಾವಬಗೆಯಲ್ಲಿ ನೋಡಿದರೂ, ಭಗವತ್ಕಾಟಾಕ್ಷ ವೊಂದಿದ್ದರೇ ಸಾಕು. ಮಾಯೆ, ಗೀಯೆ ಮುಂತಾದ ಯಾವ ಭಾಧಕಗಳೂ ಉಂಟಾಗುವುದಿಲ್ಲವೆಂದು ಪರಿಷ್ಕಾರವಾಗಿ ತಿಳಿಯಬರುತ್ತದೆ.

## —: ವೇ ದ ಗ ಳು :—

ಧರ್ಮ, ಅರ್ಥ ಕಾಮ, ಮೋಕ್ಷಗಳೆಂಬ ಚತುರ್ವಿದ ಪುರುಷಾರ್ಥಗಳಲ್ಲಿ ಮನುಷ್ಯರು ಯಾವುದನ್ನು ಹೇಗೆ ಆಚರಿಸ ಬೇಕು ? ಯಾವುದನ್ನು ಹೇಗೆ ಸಾಧಿಸಬೇಕು ! ಎಂಬ ಯುಕ್ತಾಯುಕ್ತ ಪರಿಜ್ಞಾನವನ್ನುಂಟು ಮಾಡತಕ್ಕ ಶಾಸ್ತ್ರಗಳನೇಕವಾಗಿರುವುವು. ಅವುಗಳಲ್ಲಿ ಸ್ವತಃಪ್ರಮಾಣಗಳೆಂತಲೂ ಪರತಃಪ್ರಮಾಣ ಗಳೆಂತಲೂ, ಎರಡು ಬಗೆಯಾದ ವಿಭಾಗಗಳುಂಟು. " ಸ್ವತಃ ಪ್ರಮಾಣ " ಗಳೆಂದರೇ ಧರ್ಮಾಧರ್ಮಗಳನ್ನು ತಾವಾಗಿಯೇ ಶಾಸನ ಮಾಡತಕ್ಕವುಗಳು. ಅಂದರೇ "ಸತ್ಯಂವದ ! ಧರ್ಮಂಚರ ! " ಎಂಬ ಆಜ್ಞಾರೂಪ ವಾದ ಧರ್ಮ ಪದ್ಧ

ತಿಗಳನ್ನು ಪ್ರಭುವಿನಂತೆ ಕಟ್ಟಳೆ ಮಾಡತಕ್ಕವುಗಳು. ಅಂಥ ವುಗಳು ಯಾವುವೆಂದರೆ, ಋಗ್ವೇದ, ಯಜುರ್ವೇದ, ಸಾಮ ವೇದ, ಅಥರ್ವಣವೇದ, ಎಂಬ ನಾಲ್ಕುವೇದಗಳು. ಇವುಗಳಿಗೆ ಸ್ವತಃಪ್ರಮಾಣ ಗಳೆಂದು ಹೆಸರು.

ವೇದದಲ್ಲಿ ಹೀಗೆ ವಿಧಿಸಲ್ಪಟ್ಟಿದೆ ! ವೇದಾರ್ಥವನ್ನು ಬಲ್ಲ ಮಹರ್ಷಿ ಗಳು ಹೀಗೆಂದು; ಹೇಳಿರುತ್ತಾರೆ. ಇದರಂತೆ ನಡೆಯುವುದು, ಶ್ರೇಯಸ್ಕ ರವು ! ಎಂಬೀ ವಿಧವಾದ ವೇದ ವಿಧಿಗಳನ್ನು ಸೂಚಿಸತಕ್ಕವುಗಳಿಗೆ " ಪರತಃ ಪ್ರಮಾಣ " ಗಳೆಂದು ಹೆಸರು. ಅಂಥವುಗಳು ಯಾವುವೆಂ ದರೆ, ಮನುಸ್ಮೃತಿ, ಪರಾಶರಸ್ಮೃತಿ, ಮುಂತಾದ ಸ್ಮೃತಿಗಳೂ, ಭಾರತ, ರಾಮಾಯಣಾದಿ ಇತಿಹಾಸಗಳೂ, ಭಾಗವತಾದಿ ಪುರಾಣಗಳೂ ಆಗಿರುತ್ತವೆ. ಆದುದರಿಂದ, ಲೋಕದಲ್ಲಿರುವ ಸಮಸ್ತ ಶಾಸ್ತ್ರ ಗಳೂ ವೇದೋಕ್ತ ಧರ್ಮಶಾಸನಗಳನ್ನು ಸೂಚಿಸತಕ್ಕವುಗಳಾಗಿರುತ್ತವೆ. ಅಂದರೇ "ಪ್ರಭುವಿನ ಆಜ್ಞೆಯನ್ನು" ಪ್ರಚಾರಪಡಿಸತಕ್ಕ ಆತನ ಭೃತ್ಯವರ್ಗದವರನ್ನು ಹೋಲಿರುತ್ತವೆ.

" ಶ್ರುತಿಸ್ಮೃತಿ ವಿರುದ್ಧಾನಾಂ ಪ್ರಮಾಣಾಂ ಪ್ರಥಮಾಂ ಶ್ರುತಿಃ " ಎಂಬ ಶಾಸ್ತ್ರವಚನದಂತೆ, ಯಾವುದಾದರೊಂದು ಧರ್ಮವನ್ನು. ನಿರ್ಣಯ ಮಾಡುವಲ್ಲಿ, ವೇದವಚನವೊಂದು ವಿಧವಾಗಿಯೂ, ಸ್ಮೃತಿವಚನವೊಂದು ವಿಧವಾಗಿಯೂ, ವಿರುದ್ಧವಾಗಿ ಪರ್ಯವಸಿತವಾದರೇ, ವೇದದಲ್ಲೇನೆಂದು ಹೇಳಲ್ಪಟ್ಟಿದೆಯೋ ಅದನ್ನೇ " ಪ್ರಮಾಣವಾಗಿ " ಅಂಗೀಕರಿಸಬೇ ಕೆಂದು ಪರಿಷ್ಕಾರವಾಗಿ ಸೂಚಿಸಲ್ಪಟ್ಟಿದೆ.

ಲೋಕದಲ್ಲಿರುವ ಸಮಸ್ತ ಶಾಸ್ತ್ರಗಳಿಗೂ ವೇದವೇ ಮೂಲಾಧಾ ರವಾಗಿರುತ್ತದೆ. "ವೇದಯಂತೀತಿವೇದಃ" ತಿಳಿಸತಕ್ಕದಾದುದರಿಂದ ವೇದ ವೆಂದು ಹೆಸರು. " ಶ್ರೂಯತಇತಿಶ್ರುತಿಃ " ಅಂದರೇ (ಪರಮೇಶ್ವರನಿಂದ ಮಂತ್ರದ್ರಷ್ಟರಾದ ಋಷಿಗಳಿಗೆ) ಕೇಳಿಸಲ್ಪಟ್ಟಿತಾ ದುದರಿಂದ, ಶ್ರುತಿ ಯೆಂದು ಹೆಸರು.

ವೇದವು, ಭಗವಂತನಿಂದ ಬ್ರಹ್ಮದೇವರಿಗೆ ಲಭಿಸಿತು. ಬ್ರಹ್ಮನು ಋಷಿಗಳಿಗುಪದೇಶಮಾಡಿದನು. ಋಷಿಗಳು ತಮ್ಮ ಶಿಷ್ಯರಿಗುಪದೇಶ ಮಾಡಿದರು. ಹಾಗೆಯೇ ಗುರು ಶಿಷ್ಯ ಕ್ರಮದಿಂದ ಪರಂಪರೆಯಾಗಿ ಪ್ರಚಾರಕ್ಕೆ ಬಂದಿತು.

ಋಗ್ವೇದ—ಯಜುರ್ವೇದ—ಸಾಮವೇದ—ಅಥರ್ವವೇದ—ಎಂಬ ನಾಲ್ಕು ವೇದಗಳಿರುವುವೆಂದು ಹಿಂದಣ ಪ್ರಕರಣದಲ್ಲಿ ಹೇಳಲ್ಪಟ್ಟಿಥೆಯಲ್ಲವೆ? ಈ ಪ್ರಕರಣದಲ್ಲಿ ಅವುಗಳ ಪೂರ್ವೋತ್ತರಗಳನ್ನು ಕುರಿತು ವಿಚಾರಿಸೋಣ.

ಋಗ್ವೇದವು, ಎಲ್ಲಕ್ಕಿಂತಲೂ ಅತಿಪುರಾತನವಾದುದೆಂಬುದನ್ನು ಎಲ್ಲರೂ ಒಪ್ಪುವರಷ್ಟೆ. ಈ ಅಭಿಪ್ರಾಯವನ್ನು ಪುಷ್ಟೀಕರಿಸತಕ್ಕ "ಪ್ರಮಾಣವಚನ" ಗಳಲ್ಲಿ ಸೂಚಿಸಲ್ಪಡುತ್ತವೆ. "ತ್ರಯೋವೇದಾ ಅಜಾಯಂತ, ಋಗ್ವೇದ ಏವಾಗ್ನೇರಜಾಯತ ಯಜುರ್ವೇದೋ ವಾಯೋಃ ಸಾಮವೇದ ಆದಿತ್ಯಾತ್" (ಐತರೇಯ ಬ್ರಾಹ್ಮಣ ೫—೩೨)

ಮೂರು ವೇದಗಳು ಹುಟ್ಟಿದುವು. ಅಗ್ನಿಯಿಂದ ಋಗ್ವೇದವೂ, ವಾಯುವಿನಿಂದ ಯಜುರ್ವೇದವೂ, ಸೂರ್ಯನಿಂದ ಸಾಮವೇದವೂ, ಹುಟ್ಟಿದುವು.

"ಋಚಸ್ಸಾಮಾನಿಜಜ್ಞಿರೇಯಜುಸ್ತಸ್ಮಾದಜಾಯತ"
(ಋಗ್ವೇದ, ೧೦—೯೦—೯)

ಋಕ್ಕುಗಳೂ, ಸಾಮಗಳೂ ಹುಟ್ಟಿದುವು. ಅವುಗಳಿಂದ, ಯಜುಸ್ಸು ಹುಟ್ಟಿತು.

"ಕಂವ್ರೋಹೋತಾರಂವೃಣೀಯಾಮ್ ಕಂಅಧ್ವರ್ಯುಂ । ಕಂ
ಉದ್ಗಾತಾರಂ । ಕಂಬ್ರಹ್ಮಾಣಂಇತಿ । ತಲೂಚುಃ ॥ ಋಗ್ವಿ
ದನೇವಹೋತಾರಂವೃಣೀಷ್ವಯಜುರ್ವಿದಮಧ್ವರ್ಯುಂ ।
ಸಾಮವಿದಮುದ್ಗಾತಾರಂ।ಅಥರ್ವಾಂಗಿರೋವಿದಂಬ್ರಹ್ಮಾಣಂ।
ತಥಾಹಾಸ್ಯಯಜ್ಞಶ್ಚತುಷ್ಪಾತ್ ಪ್ರತಿತಿಷ್ಠತಿ"
(ಗೋಪಥಬ್ರಾಹ್ಮಣ ೨—೨೪)

[ಯಜ್ಞದಲ್ಲಿ] ಯಾರನ್ನು (ಹೋತೃ)ವಾಗಿಯೂ, ಯಾರನ್ನುಅಧ್ವರ್ಯ

ನಾಗಿಯೂ, ಯಾರನ್ನು ಉದ್ಗಾತೃ ನಾಗಿಯೂ, ಯಾರನ್ನು ಬ್ರಹ್ಮ ನಾಗಿಯೂ ಏರ್ಪಡಿಸಿಕೊಳ್ಳಬೇಕು? ಋಗ್ವೇದವನ್ನರಿತವನನ್ನು (ಹೋತ್ರ) ಹೋತೃವಾಗಿಯೂ, ಯಜುರ್ವೇದವರಿತವನನ್ನು ಅಧ್ವರ್ಯು ನನ್ನಾಗಿಯೂ, ಸಾಮವೇದವರಿತವನನ್ನು ಉದ್ಗಾತೃ ನನ್ನಾಗಿಯೂ, ಅಥರ್ವವೇದವರಿತವ ನನ್ನು ಬ್ರಹ್ಮ ನನ್ನಾಗಿಯೂ ಏರ್ಪಡಿಸಿಕೊಳ್ಳಬೇಕು. ಆಗ ಯಜ್ಞವು ನಾಲ್ಕು ಪಾದಗಳುಳ್ಳದ್ದಾಗಿ (ಸ್ಥಿರವಾಗಿ) ನಿಲ್ಲುತ್ತದೆ.

ಶ್ಲೋಕ॥ ಅಗ್ನಿವಾಯುರವಿಭ್ಯಸ್ತು । ತ್ರಯಂ ಬ್ರಹ್ಮ ಸನಾತನಂ ।
ದುದೋಹ ಯಜ್ಞಸಿದ್ಧ್ಯರ್ಥಂ । ಋಗ್ಯಜುಸ್ಸಾಮಲಕ್ಷಣಂ॥

[ಮನುಸ್ಮೃತಿ ೧—೨—೩].

ಯಜ್ಞಸಿದ್ಧಿಗಾಗಿ ಸನಾತನಗಳಾದ ಋಗ್ಯಜುಸ್ಸಾಮ ಗಳೆಂಬ ಮೂರು ವೇದಗಳನ್ನು, ಅಗ್ನಿ—ವಾಯು—ಸೂರ್ಯರಿಂದ ಕರೆದನು.

ಅಥರ್ವವೇದವನ್ನು, ಅಥರ್ವಾಂಗಿರಸರೆಂಬ ಋಷಿಗಳು ತಮ್ಮ ತಪಶ್ಶಕ್ತಿಯಿಂದ ಪ್ರಚಾರಕ್ಕೆ ತಂದರು.

"ಚತ್ವಾರೋ ಇಮೇ ವೇದಾಃ ಋಗ್ವೇದೋ ಯಜುರ್ವೇದಃ ಸಾಮವೇದೋ ಬ್ರಹ್ಮವೇದಃ" (ಗೋಪಥ ಬ್ರಾಹ್ಮಣ ೨—೧೬)

ಈ ವೇದಗಳು ನಾಲ್ಕು. ಋಗ್ವೇದ—ಯಜುರ್ವೇದ—ಸಾಮವೇದ—ಬ್ರಹ್ಮವೇದಗಳೆಂದು.

"ಋಗ್ಯತ್ರಾರ್ಥವಶೇನ ಪಾದವ್ಯವಸ್ಥಾ, ಗೀತಿಷುಸಾಮಾಖ್ಯಾ, ಶೇಷೇಯಜುಶ್ಶಬ್ದಃ" (ಜೈಮಿನಿ ಸೂತ್ರ .೨—೧—೩೫—೩೭)

ಯಾವ ವೇದದಲ್ಲಿ ಅರ್ಥವನ್ನನುಸರಿಸಿ (ಛಂದೋಬದ್ಧವಾಗಿ) ಪಾದಗಳು ಏರ್ಪಡಿಸಲ್ಪಟ್ಟಿರುವುವೋ ಅದಕ್ಕೆ ಋಗ್ವೇದ ವೆಂದು ಹೆಸರು. ಅಂದರೆ ಯಾವ ವೇದ ಮಂತ್ರದಲ್ಲಿ ಪಾದನಿಯಮ ವಿರುವುದೋ ಆ ಮಂತ್ರಕ್ಕೆ "ಋಕ್ಕು" ಎಂತಲೂ, ಸಂಗೀತ ಹಾಡುವಂತೆ ಮನೋಹರವಾಗಿ (ಗಾನಮಾಡುವುದಕ್ಕೆ) ಅನುಕೂಲವಾಗಿರುವ ಗೀತಗಳುಳ್ಳದ್ದಕ್ಕೆ ಸಾಮವೇದವೆಂತಲೂ ಹೆಸರು. ಅಂದರೆ ಗೀತರೂಪವಾಗಿರುವ ವೇದವು

ತ್ರಗಳಿಗೆ ಸಾಮವೇದವೆಂದು ಹೆಸರು. ಮಿಕ್ಕವುಗಳಿಗೆ "ಯಜುಸ್ಸು" ಗಳೆಂದು ಹೆಸರು. ಅದರೇ. "ಯಜ್" ಪೂಜಾಸಂಗತಿಕರಣ ದಾನೇಷು—ಎಂಬ ಧಾತ್ವರ್ಥದಂತೆ ಯಜ್ಞಾಗ್ನಿಹೋತ್ರಗಳನ್ನು ನಡೆಯಿ ಸುವ ವಿಧಾನಗಳನ್ನೂ, ಈಶ್ವರಸ್ತೋತ್ರಪದ್ಧತಿಗಳನ್ನೂ ತಿಳುಹಿಸುವ ಮಂತ್ರಗಳುಳ್ಳ ವೇದಕ್ಕೆ ಯಜುರ್ವೇದವೆಂದು ಹೆಸರು.

"ಪುರೋಹಿತಂ ತಥಾಥರ್ವಮಂತ್ರ ಬ್ರಾಹ್ಮಣಪಾರಗವ್"

(ಮತ್ಸ್ಯಪುರಾಣ)

ಅಥರ್ವವೇದದಲ್ಲಿನ, ಮಂತ್ರಬ್ರಾಹ್ಮಣಗಳನ್ನು ಚನ್ನಾಗಿ ಕಲಿತವರನ್ನು ಪುರೋಹಿತರನ್ನಾಗಿ ಏರ್ಪಡಿಸಬೇಕು.

"ಅಭಿಷಿಕ್ತೋ ಽ ಥರ್ವಮಂತ್ರೈರ್ಮಹೀಂ ಭುಂಕ್ತೆ ಸಸಾಗರಾಂ"

(ಮಾರ್ಕಂಡೇಯ ಪುರಾಣ.)

ಅಥರ್ವವೇದಮಂತ್ರಗಳಿಂದ ಅಭಿಷಿಕ್ತನಾದ ರಾಜನು ಸಾಗರಯುಕ್ತ ವಾದ ಭೂಮಿಯನ್ನು ಆಳುವನು, ಎಂಬೀ ಮುಂತಾದ ವಾಕ್ಯಗಳನ್ನನು ಸರಿಸಿ, ಯಜ್ಞಾಗ್ನಿಹೋತ್ರಾದಿ ವೈದಿಕ ಲೌಕಿಕಧರ್ಮಗಳನ್ನೆಲ್ಲವನ್ನೂ ಒಳ ಗೊಂಡಿರುವುದಕ್ಕೆ ಅಥರ್ವವೇದ ವೆಂದು ಹೆಸರು.

—:ವೇದವು ಪೌರುಷೇಯುವೇ? ಅಪೌರುಷೇಯುವೇ?:—

ಇಂತು ಐಹಿಕ, ಆಮುಷ್ಮಿಕ ಧರ್ಮ ರಹಸ್ಯಗಳನ್ನೆಲ್ಲಾ ಒಳ ಗೊಂಡಿರುವ, ಋಗ್ಯಜುಸ್ಸಾಮಾಥರ್ವಗಳೆಂಬ ನಾಲ್ಕುವೇದಗಳು, (ವೇದ= ಶ್ರುತಿ) ಮಹಾತ್ಮರಾದ ಬ್ರಹ್ಮರ್ಷಿಗಳಿಂದ ಲೋಕದಲ್ಲಿ ಪ್ರಚಾರಕ್ಕೆ ತರಲ್ಪಟ್ಟಿತೆಂದು ಹಿಂದಿನ ಪ್ರಕರಣದಲ್ಲಿ ವ್ಯಕ್ತವಾಗಿರುವುದಲ್ಲವೇ? ಯಾ ವಾಗ ವೇದಗಳನ್ನು ಋಷಿಗಳು ಪ್ರಚಾರಕ್ಕೆ ತಂದರೆಂದು ಹೇಳಲಾಯಿ ತೋ, ಆಗ, ವೇದವು ಭಗವಂತನಿಂದ ವಿರಚಿತವಾದುದಲ್ಲವೆಂತಲೂ, ಪುರು ಷರಿಂದ (ಮನುಷ್ಯರಿಂದ) ವಿರಚಿಸಲ್ಪಟ್ಟಿತೆಂತಲೂ, ಆದ್ದರಿಂದ ವೇದವು ಪೌರುಷೇಯವು ವೆಂತಲೂ ಕೆಲವರು ವಾದಿಸುತ್ತಾರೆ. ಋಷಿಗಳು ವೇದವನ್ನು ಪ್ರಚಾರಕ್ಕೆ ತಂದ ಮಾತ್ರಕ್ಕೇ ಅವರು ವೇದ ಮಂತ್ರಗ ಳನ್ನು ವಿರಚಿಸಿದ ಮಂತ್ರಕರ್ತರಲ್ಲವೆಂತಲೂ, ಪರಮಾತ್ಮನಿಂದ ನಿಸೃತ

ವಾದ ವೇದ ವಿದ್ಯೆಯನ್ನು ತಮ್ಮ ಜ್ಞಾನದೃಷ್ಟಿಯಿಂದ ನೋಡಿದವರಾದುದರಿಂದ ಋಷಿಗಳು ಮಂತ್ರದ್ರಷ್ಟರೆಂತಲೂ, ಆದುದರಿಂದ ವೇದವು "ಅಪೌರುಷೇಯ"ವೆಂತಲೂ ಮತ್ತೆ ಕೆಲವರು ವಾದಿಸುತ್ತಾರೆ.

ಪೌರುಷೇಯವೆಂದರೆ ಪುರುಷರಿಂದ ಮಾಡಲ್ಪಟ್ಟದ್ದೆಂತಲೂ, ಅಪೌರುಷೇಯವೆಂದರೆ ಪುರುಷರಿಂದ ಮಾಡಲ್ಪಟ್ಟದ್ದಲ್ಲವೆಂತಲೂ ಈಗ ಪರಿಷ್ಕಾರವಾಯಿತಲ್ಲವೆ ? ಈ ಎರಡಭಿಪ್ರಾಯಗಳಲ್ಲಿ ಯಾವುದು ನಿಜ ? ಯಾವುದು ಅನಿಜ ? ಎಂದು ವಿಚಾರಿಸಿತಿಳಿಯೋಣ.

ವಿತಂಡವಾದವೆಂಬ ಮೂರ್ಖತ್ವವನ್ನು ಬಿಟ್ಟು ಸತ್ಯಾರ್ಥವನ್ನು ಗ್ರಹಿಸಬೇಕೆಂಬ ಶಾಂತಸ್ವಭಾವವುಳ್ಳವರಿಗೆ ಮೇಲೆ ಹೇಳಿದ ಎರಡಭಿಪ್ರಾಯಗಳೂ ಸಮಾಧಾನವನ್ನೇ ಉಂಟುಮಾಡುತ್ತವೆ. ಹೇಗೆಂದರೆ ? ಒಂದು ಬಗೆಯವರು ವೇದವನ್ನು ಪೌರುಷೇಯವೆನ್ನುತ್ತಾರಲ್ಲವೆ ? ಇದರಿಂದ ಬಾಧಕವೇನು ?

''ಸ್ಮ್ರುರು ಸಂಜ್ಞೆ ಶರೀರೇ ಽಸ್ಮಿನ್ ವೇದೇ ಹೇತ್ರಿಷ್ಠ ತ್ರಿಂತಿಪುರುಷಃ ।
ಪುರುಷಾಣಾಂ ಉತ್ತಮಃಪುರುಷೋತ್ತಮಃ ॥ ,,

ಎಂಬ ಶಬ್ದಾರ್ಥದಂತೆ ಪುರುಷೋತ್ತಮನಾದ ಭಗವಂತನಿಂದ ಮಾಡಲ್ಪಟ್ಟಿತಾದುದರಿಂದ ವೇದವು ,,ಪೌರುಷೇಯ,, ವೆಂದು ಧಾರಾಳವಾಗಿ ಹೇಳಬಹುದು.

ಮತ್ತೊಂದು ಪಕ್ಷದವರು ಅಪೌರುಷೇಯ ವೆಂದು ಹೇಳುವುದಾದರೆ, ಅದರಿಂದಲೂ ಯಾವಬಾಧಕವೂ ಇಲ್ಲ. ಹಿಂದಣಪ್ರಕರಣದಲ್ಲಿ ಸೂಚಿಸಿರುವಂತೆ ,,ದೇವತಿರ್ಯಙ್ಮನುಷ್ಯೇಷು ಪುನ್ನಾಮಾಭಗವಾನ್ ಹರಿಃ,, ಎಂಬ ಮಹರ್ಷಿಗಳ ವಚನದಂತೆ "ಪುರುಷ" ಶಬ್ದವು ಪರಮಾತ್ಮನಾದ ಭಗವಂತನಿಗೊಬ್ಬನಿಗೆ ಸಲ್ಲುವುದೇ ಹೊರತು ಮತ್ತೆ ಯಾರಿಗೂ ಸಲ್ಲುವುದಿಲ್ಲ. ಯಾರನ್ನು ನಾವು ಮಂತ್ರಕರ್ತರು, ಅಥವಾ ಮಂತ್ರದ್ರಷ್ಟರೆಂದು ವಾದಿಸುತ್ತೇವೆಯೋ ಅಂತಹ ಋಷಿಮುನಿಗಳೇ ,,ಸಹಸ್ರಶೀರ್ಷಾಪುರುಷಃ,, ಎಂತಲೂ, ,,ಭಗವಾನ್ ಪುರುಷೋ ಽ ವ್ಯಯಃ ॥ ಎಂತಲೂ ಪುರುಷೋತ್ತಮನಾದ ಭಗವಂತನನ್ನು ಸ್ತೋತ್ರ ಮಾಡಿರುತ್ತಾರೆ. ಆದ್ದರಿಂದ ಪುರುಷ ಶಬ್ದವು ಭಗವಂತನಿಗೊಬ್ಬನಿಗೆ ಹೊ

ರತು ಮತ್ತ್ಯಾರಿಗೂ ಅನ್ವಯಿಸುವುದಿಲ್ಲ. ಈಗ ಪೌರುಷೇಯು, ಅಪೌರು ಷೇಯು ವೆಂದು ವಾದಿಸತಕ್ಕವರು ಹೇಳುವಂತೆ, ಸಾಂಸಾರಿಕ ತಾಪತ್ರಯು ಗಳಿಗೊಳಪಟ್ಟು, ವಾತ ಪಿತ್ತ ಶ್ಲೇಷ್ಮಾದಿಗಳಿಂದ ಪೀಡಿತರಾಗಿ, ರಾಗ ದ್ವೇಷಾದಿಗಳಿಂದೊಡಗೂಡಿ ಭವಸಾಗರದಲ್ಲಿ ಮುಳುಗಿ ತೇಲುತ್ತಿರುವ ಪಾಂಚಭೌತಿಕ ಶರೀರಧಾರಿಗಳಂದ ಗರುಡನ ರಿಂದ ವೇದವು ವಿರಚಿಸ ಲ್ಪಡಲಿಲ್ಲ ವಾದುದರಿಂದ ಅಪೌರುಷೇಯು ವೆಂತಲೂ ದಾರಾಳವಾಗಿ ಹೇಳಬಹುದು. ಶಾಂತದಿಂದ ಯೋಚಿಸಿದರೆ ಈ ಎರಡಭಿಪ್ರಾಯುಗಳೂ ಸಮ್ಮತವಾಗಿಯೇ ಕಾಣುತ್ತವೆ.

ಮಂತ್ರದ್ರಷ್ಟರು, ಅಥವಾ ಮಂತ್ರ ಕರ್ತರೆಂದು ನಾವು ಯಾರನ್ನು ಹೇಳುತ್ತೇವೆಯೋ ಅಂತಹ ಋಷಿಗಳೆಲ್ಲರೂ ಗಂಡಸರು (ಪುರುಷರು) ಆದುದರಿಂದ ವೇದವು ಪೌರುಷೇಯು ವೆಂದು ಹೇಳು ವವರ ಮಾತು ಅಸಂಗತವಾಗಿ ಪರಿಣಮಿಸುತ್ತದೆ. ಏಕೆಂದರೆ, ಋಗ್ವೇ ದದಲ್ಲಿ, ವಿಶ್ವವಾರಾ, ವಾಗ್ದೇವೀ ಅಪಾಲಾ, ಶ್ರದ್ಧಾ, ಅದಿತಿ ಮುಂತಾದ ಸ್ತ್ರೀಯರಿಂದ ವಿರಚಿಸಲ್ಪಟ್ಟಿರುವ ಋಕ್ಕುಗಳನೇಕವಾಗಿರುತ್ತವೆ. ಆ ದರಿಂದ ವೇದವು ಸ್ತ್ರೀಯೇಯು ವೆಂದು ಹೇಳಬೇಕಾಗಿ ಬರುತ್ತದೆ. ಪರಂತು ಧರ್ಮದಲ್ಲಿ ಬುದ್ಧಿಯೂ, ಸತ್ಯದಲ್ಲಿ ವಿಶ್ವಾಸವೂ, ಇರತಕ್ಕ ಪಂಡಿತರೆಲ್ಲರೂ ವೇದವನ್ನು ಪೌರುಷೇಯು ವೆಂತಲೂ, ಅಪೌ ರುಷೇಯುವೆಂತಲೂ ಹಠಹಿಡಿದು, ಖಂಡವಾದ ಮಾಡಬಾರದು. ಪೌರುಷೇಯುವೆಂದರೆ, ಪುರುಷೋತ್ತಮನಿಂದ ಅನುಗ್ರಹಿಸಲ್ಪಟ್ಟಿತೆಂದಭಿ ಪ್ರಾಯುವು. ಅಪೌರುಷೇಯುವೆಂದರೆ, ಪ್ರಾಕೃತ ಪುರುಷರಾದ ಸಾಮಾ ನ್ಯ ಮನುಷ್ಯರಿಂದ ವಿರಚಿಸಲ್ಪಟ್ಟದ್ದಲ್ಲವೆಂದಭಿಪ್ರಾಯುವು. ಪರಂತು ಈ ಎರಡು ಸಿದ್ಧಾಂಗಳೂ ವೇದವು ಭಗವದ್ವಿರಚಿತವೆಂಬುವನ್ನೇ ಸೂಚಿ ಸುತ್ತವೆ. ಇದು ಮನಸ್ಸಿಗೆ ಹಿಡಿಯಬೇಕಾದರೆ, ಹೃದಯುವಲ್ಲಿ "ಶಾಂತ" ವಿರಬೇಕು.

—:ವೇದಕಾಲನಿರ್ಣಯು.:—

"ಪಂಡಿತರಲ್ಲಿ ಕೆಲವರುಮಂದಿ, ತಾವು ಹೇಳಬೇಕಾದ ಸದ್ವಿಷಯಿಗಳನ್ನು

ಹೇಳುವುದಕ್ಕೆ ಬದಲಾಗಿ ಅನುಪಯುಕ್ತವಾದ ವಿಷಯಗಳನ್ನು ಕುರಿತು ಚರ್ಚೆಮಾಡುತ್ತ ವ್ಯರ್ಥವಾಗಿ ಕಾಲಕಳೆಯುತ್ತಾರೆ! ಸಂತೆ ಮುಗಿಯುವುದರೊಳಗಾಗಿ ತನಗೆ ಬೇಕಾದ ಪದಾರ್ಥಗಳನ್ನು ಸಂಗ್ರಹಿಸಿಕೊಳ್ಳುವವನೇ ಬುದ್ಧಿಶಾಲಿಯು! ವ್ಯರ್ಥವಾದ ಕೆಲಸಗಳಲ್ಲಿ ಕಾಲಕಳೆಯಬಾರದು! ಹರಿಶ್ಚಂದ್ರನು ಯಾವ ವರ್ಷದಲ್ಲಿ (ಇಸವಿಯಲ್ಲಿ) ಸಿಂಹಾಸನವನ್ನೇರಿದನು? ನಳರಾಯನು ಯಾವ ವರ್ಷದಲ್ಲಿ ಕಾಡಿಗೆ ತೆರಳಿದನು? ಎಂಬೀ ಮುಂತಾದ ಗತದ ವಿಚಾರಗಳನ್ನು ವಿಮರ್ಶಿಸುವುದಕ್ಕಾಗಿ ಆಯುಷ್ಯವನ್ನು ಹಾಳು ಮಾಡಬಾರದು! ಏಕೆಂದರೆ, ಅಂತಹ ಕಾಲನಿರ್ಣಯ ವಿಷಯಗಳಿಂದ ಯಾರಿಗೆ ಯಾವ ಪ್ರಯೋಜನವೂ ಇಲ್ಲದಿದ್ದರೂ, ನೀವು ಮಾಡುವ ಚತುರನಾದ ಕೀಟಲೆಗಳಿಂದ ಅನೇಕಮಂದಿ ವಿದ್ಯಾರ್ಥಿಗಳು ಈ ಶುಷ್ಕಕಾಲಕ್ಷೇಪದಿಂದ ವ್ಯರ್ಥರಾಗುತ್ತಾರೆ. ಮತ್ತು ಅನೇಕ ಗ್ರಂಥಗಳು ಈ ಶುಷ್ಕವಾದವನ್ನು ಚರ್ಚಿಸುತ್ತ ವ್ಯರ್ಥವಾಗುತ್ತವೆ! ಎಂದು ಮಹಾತ್ಮರಾದ ಶಿವಾನಂದಯೋಗಿಗಳು ತಮ್ಮ ಶಿಷ್ಯರಿಗೆ ಪದೇಪದೇ ಉಪದೇಶಮಾಡಿರುತ್ತಾರೆ.

ಇವನ್ನು ಜ್ಞಾಪಕದಲ್ಲಿಟ್ಟುಕೊಂಡು ವಿಚಾರಿಸಿ ನೋಡಿದರೆ, ವೇದಕಾಲ ನಿರ್ಣಯವು ಅನುಪಯುಕ್ತವಾದ ಮತ್ತು ಅಸಾಧ್ಯವಾದ ವಿಷಯವೆಂಬುದು ಚೆನ್ನಾಗಿ ಗೋಚರಿಸುತ್ತದೆ. ಕೆಲವು ವರ್ಷಗಳಹಿಂದೆ ನಡೆದ ವಿಷಯಗಳಿಗೆ ಕಾಲನಿರ್ಣಯ ಮಾಡುವುದೇ ಕಷ್ಟಸಾಧ್ಯವಾಗಿರುತ್ತದೆ. ಈ ಕಲಿಯುಗದಲ್ಲಿಯೇ ಒಂದೆರಡು ಸಹಸ್ರ ವರ್ಷಗಳ ಹಿಂದೆ ಹುಟ್ಟಿದ್ದ, ಕಾಳಿದಾಸ, ವಿಕ್ರಮಾದಿತ್ಯ, ಶಂಕರಾಚಾರ್ಯರಾದಿಯಾಗಿ ಕೆಲವುಮಂದಿ ಮಹನೀಯರ ಕಾಲ ನಿರ್ಣಯಮಾಡತೊಡಗಿದ ಈ ಕಾಲದ ಚರಿತ್ರಕಾರರನೇಕರು, ಇಬ್ಬರು ವಿಕ್ರಮಾದಿತ್ಯರಿದ್ದರೆಂತಲೂ, ಮೂರುಮಂದಿ ಕಾಳಿದಾಸರಿದ್ದರೆಂತಲೂ, ಏನೇನೋ ವಿಚಿತ್ರವಾಗಿ ಹೇಳುತ್ತ, ಅಸಂಬದ್ಧ ಪ್ರಮಾಣಗಳಿಗೆ ಅಪ್ರಯುಕ್ತ ವಿಷಯಗಳನ್ನು ಜತೆಗೊಳಿಸಿದಂತೆ, ತಮ್ಮ ಊಹಾಪೋಹಗಳಿಗೆ ನೆರವಾಗಿ ಪ್ರಸಿದ್ಧರಾದ ಮಹಾತ್ಮರ ಚರಿತ್ರೆಗಳಿಗೆ ಮಿಥ್ಯಾರೂಪವಾದ ಕಳಂಕಗಳನ್ನಾರೋಪಿಸುತ್ತ ಭ್ರಾಂತರಾಗಿರುವಲ್ಲಿ, ಎಷ್ಟೋ ಯುಗಗಳಿಗೆ ಹಿಂದಿನ ವಿಷಯಗಳಾದ ವೇದಕಾಲ ನಿರ್ಣಯಾದಿ ಗಹನ ವಿಚಾರಗಳಿಂದ ಆಗತಕ್ಕ ಪ್ರಯೋಜನವೇನು? ಪರಂತು ಇದು ಸಾಧ್ಯ

ವಾನ ಮತ್ತೂ ನಿರ್ದಿಷ್ಟವಾದ ವಿಷಯವಾಗಲಾರದೆಂದು ಅನೇಕ ಮಂದಿ ಪಂಡಿತರು ಒಕ್ಕಣಿಸಿರುವರು. ಇದಕ್ಕೊಂದು ನಿದರ್ಶನವನ್ನಿಲ್ಲಿ ಸೂಚಿಸುತ್ತೇನೆ.

“ವೇದಗಳ ಕಾಲವನ್ನು ನಿಶ್ಚಯಿಸುವುದು ಕಷ್ಟವು. ನಿಜವಾಗಿ ಈ ವೇದವಿಷ್ಟು ವರ್ಷಗಳ ಹಿಂದೆ ಬರೆಯಲ್ಪಟ್ಟಿತೆಂದು ಹೇಳುವುದು ಅಸಂಭವವು. (ಅಸಾಧ್ಯವು) ಆದಾಗ್ಯೂ, ಪಂಡಿತರು ಬೇಕಾದಮಟ್ಟಿಗೆ ತಮ್ಮ ತಮ್ಮ ಬುದ್ಧಿಚಾತುರ್ಯವನ್ನುಪಯೋಗಿಸಿ, ಅಜ್ಞೇಯವಾದ (ತಿಳಿಯಲಸಾಧ್ಯವಾದ) ವೇದೋತ್ಪತ್ತಿ ಕಾಲವನ್ನು ಕಂಡರಿಯಬೇಕೆಂದು ಯತ್ನಿಸುವರು. ಅಂತಹ ಊಹೆಗಳು “ಗುರಿಗೆ ಮೊಳದಹುದ್ದ ಹೆಜ್ಜೆ ಕಡಮೆ,, ಯಾಗಿ ಸರಿಹೋಗುತ್ತವೆ. (ಅಂದರೇ ಸತ್ಯಕ್ಕೆ ದೂರವಾಗಿರುತ್ತವೆ, ಯೆಂದಭಿಪ್ರಾಯವು) ಆದುದರಿಂದ ವಾಚಕರು ಇಂತಹ ಕಾಲನಿರ್ಣಯಗಳನ್ನು ನಿಶ್ಚಯವಾದವುಗಳೆಂತಲೂ, ಎಂದಿಗೂ ಬದಲಾಯಿಸಲಾರದವುಗಳೆಂತಲೂ ಎಣಿಸಬಾರದು ಇದಕ್ಕಿಂತಲೂ ಹೆಚ್ಚಾದ ನಿಶ್ಚಯವುಳ್ಳ ಕಾಲನಿರ್ಣಯವನ್ನು ಮತ್ತೆ ಯಾರಾದರೂ ಮಾಡುವವರಿಗೂ ಈ ಕಾಲನಿರ್ಣಯವು ಗ್ರಾಹ್ಯವೆಂದೆಣಿಸಬೇಕು.

(ಆಂಧ್ರ ವಿಜ್ಞಾನ ಸರ್ವಸ್ವ ಸಂಪುಟ. ೨.)

ಋಗ್ವೇದವು ನಾಲ್ಕುಸಾವಿರ ವರ್ಷಗಳ ಹಿಂದೆ ವಿರಚಿಸಲ್ಪಟ್ಟಿತೆಂದು ಕೆಲವು ಮಂದಿಯೂ, ಮೂರುಸಾವಿರ ವರ್ಷಗಳಹಿಂದೆ ವಿರಚಿಸಲ್ಪಟ್ಟಿತೆಂದು ಕೆಲವು ಮಂದಿಯೂ ಹೇಳಿರುತ್ತಾರೆ. ತಮ್ಮ ಊಹೆಗಳನ್ನು ಸಿದ್ಧಾಂತಪಡಿಸಿ ಕೊಳ್ಳುವುದಕ್ಕಾಗಿ ಅನೇಕ ಯುಕ್ತಿಗಳನ್ನು ಕಲ್ಪಿಸಿರುತ್ತಾರೆ. ಇವುಗಳೆಲ್ಲವೂ ಭ್ರಮಪ್ರಮಾದಗಳಿಂದ ಕೂಡಿರುವುವೇ ಹೊರತು ನಿಶ್ಚಯವಾದವುಗಳಲ್ಲವೆಂದು ಧಾರಾಳವಾಗಿ ಹೇಳಬಹುದು.

ಒಂದುವೇಳೆ ಈ ಕಾಲನಿರ್ಣಯವನ್ನು ಕಷ್ಟಪಟ್ಟು ಸಿದ್ಧಾಂತಮಾಡುವುದರಿಂದ, ಪಂಡಿತರು ತಮ್ಮ ಪಾಂಡಿತ್ಯದ ಪ್ರತಿಭೆಯನ್ನು ತೋರ್ಪಡಿಸಿಕೊಳ್ಳಬಹುದೇ ಹೊರತು. ಅದರಿಂದಾಗತಕ್ಕ ಪ್ರಯೋಜನವು ಎಳ್ಳಷ್ಟಾದರೂ ಇರಲಾರದೆಂಬುದನ್ನು ಧರ್ಮಾನುಷ್ಠಾನಪರರಾದ ಸಾಧುಜನರು ತಿಳಿಯಬೇಕಾದ ಮುಖ್ಯಾಂಶವಾಗಿರುತ್ತದೆ.

## —: ಸೋಮುಕಾಸುರನು ವೇದಗಳನ್ನು ಕದ್ದವಿಚಾರ ;—

ಒಂದಾನೊಂದು ಕಾಲದಲ್ಲಿ ಚತುರ್ಮುಖ ಬ್ರಹ್ಮನು, ದೇವತೆಗಳನ್ನೂ ಋಷಿ ಮುನಿಗಳನ್ನೂ ಸಭೆಮಾಡಿಸಿ, ಅವರಿಗೆ ವೇದವಿದ್ಯೆಯನ್ನು ತಿಳಿಸುತ್ತಿದ್ದಾಗ, ಸೋಮುಕಾಸುರನೆಂಬ ರಾಕ್ಷಸನು ಕಳ್ಳವೇಷದಿಂದ ಅಲ್ಲಿ ಕುಳಿತಿದ್ದು ವೇದವನ್ನು ಕದ್ದೊಯ್ದು ಸಮುದ್ರದಲ್ಲಿ ಬಚ್ಚಿಟ್ಟನೆಂತಲೂ, ಆಗ, ಭಗವಂತನಾದ ಶ್ರೀಮಹಾವಿಷ್ಣುವು, ಮತ್ಸ್ಯಾವತಾರವನ್ನು ಧರಿಸಿ ದುರ್ಮಾರ್ಗನಾದ ಆರಾಕ್ಷಸನನ್ನು ಕೊಂದು ವೇದಗಳನ್ನು ಬ್ರಹ್ಮನಿಗೆ ತಂದು ಕೊಟ್ಟನೆಂತಲೂ, ಪುರಾಣಗಳಲ್ಲಿ ಚತುರವ್ಯವಾದ ಕಥಾಭಾಗವು ಹೇಳಲ್ಪಟ್ಟಿದೆ. ಇದರ ತತ್ವಾರ್ಥವನ್ನರಿಯದೆ, ಈ ಕಥಾಭಾಗವು ಸುಳ್ಳೆಂತಲೂ, ಒಂದು ವೇಳೆ ಸೋಮುಕಾಸುರನಲ್ಲಿ ವೇದಗಳಿದ್ದರೇ ವಿಷ್ಣುವಿಗೇನು ನಷ್ಟವಾಗುತ್ತಿದ್ದಿತೆಂತಲೂ ಕ್ರಿಸ್ತಮತ ಬೋಧಕರಾದ ಒಬ್ಬ ಘಾದರಿಯವರು ಆಕ್ಷೇಪಿಸಿದರು. ಅದಕ್ಕೊಬ್ಬ ವಿದ್ಯಾವಂತರು ಹೀಗೆಂದು ಪ್ರತ್ಯುತ್ತರವಿತ್ತರು. "ದುರ್ಜನಸ್ಯವಿಶಿಷ್ಟತ್ವಂ ಪರೋಪದ್ರವಕಾರಣಂ" ಎಂಬಂತೆ ದುರ್ಮಾರ್ಗರಿಗೆ ಸದ್ವಿದ್ಯೆಲಭಿಸಿದರೂ ಅದರಿಂದವರಿಗೂ ಲೋಕಕ್ಕೂ ಸ್ವಲ್ಪವಾದರೂ ಪ್ರಯೋಜನವಾಗುವುದಿಲ್ಲ. ಆದುದರಿಂದ, ಸೋಮುಕಾಸುರನಿಗೆ ವೇದವಿದ್ಯೆಲಭಿಸುವುದರಿಂದ ಮತ್ತೇನೋ ಪ್ರಮಾದವುಂಟಾಗುವಂತಿರಬಹುದು. ಭಗವಂತನದನ್ನು ಬಲ್ಲವನಾದಕಾರಣ, ಅವನಿಗಾವಿದ್ಯೆಯು ಲಭಿಸದಂತೆಮಾಡಿದನು.

"ಅಗ್ನಿಹೋತ್ರಾಶ್ಚವೇದಾಶ್ಚರಾಕ್ಷಸಾನಾಂ ಗೃಹೇಗೃಹೇ"

"ನಾಸ್ತಿಧರ್ಮಂಚಸತ್ಯಂಚ ರಾಕ್ಷಸಾನಾಂಗೃಹೇಗೃಹೇ"

ಎಂಬಂತೆ ಅಗ್ನಿಹೋತ್ರಗಳೂ, ವೇದಗಳೂ ಪ್ರತಿ ರಾಕ್ಷಸನ ಮನೆಯಲ್ಲಿಯೂ ಇದ್ದಾಗ್ಯೂ, ಒಬ್ಬನಲ್ಲಾದರೂ, ಸತ್ಯಶಾಂತ್ಯಾದಿ ಧರ್ಮಗುಣಗಳಿರಲಿಲ್ಲ. ಅದರಂತೆ ದಯಾದಾಕ್ಷಿಣ್ಯಾದಿ ಧರ್ಮಸ್ವಭಾವಗಳಿಲ್ಲದ ದುರ್ಜನನಲ್ಲಿ ವೇದವಿದ್ಯೆ ಇದ್ದರೂ ಪ್ರಯೋಜನವಾಗಲಾರದು. ಆದ್ದರಿಂದ ದುರುಳನಾದ ರಾಕ್ಷಸನನ್ನು ಕೊಂದು ಭಗವಂತನು ವೇದಗಳನ್ನುದ್ಧರಿಸಿದನು. ಇದರಲ್ಲೇನು ದೋಷ? ಎಂದು ಹೇಳಿದರು. ಆದಾಗ್ಯೂ ಘಾದರಿ

ಯುವರು ತಮ್ಮ ಅಸಮ್ಮತವನ್ನೇ ಸೂಚಿಸಿದರು. ಪರಂತು ಎರಡನೇ ದಿವಸದಲ್ಲಿ ಆ ಫಾದರಿಯುವರದೇ ಒಂದು ದಿವ್ಯ ಪ್ರಸಂಗವು ನಡೆಯಿತು, ಆ ಪ್ರಸಂಗದಲ್ಲವರು ಹೀಗೆಂದು ಹೇಳಿದರು.

“ ದೇವರು ನಮಗೆ ಎಲ್ಲವನ್ನೂ ಕೊಟ್ಟಿದ್ದಾನೆ ? ನಮ್ಮನ್ನು ಪ್ರೀತಿಯಿಂದ ನೋಡುತ್ತಾನೆ ! ಆದರೇ ಕೆಲವರು ಅವಿವೇಕಿಗಳು ಇತರರನ್ನು ನೋಡಿ ದುರಾಶೆಪಟ್ಟು, ದೇವರು ನಮಗೆ ಮೋಟಾರು ಗಾಡಿಯನ್ನು ಕೊಡಲಿಲ್ಲ. ಒಳ್ಳೇ “ಬಂಗಲೆಯನ್ನು” ಕೊಡಲಿಲ್ಲ. ಎಂದು ದೇವರನ್ನು ದೂಷಿಸುತ್ತಾರೆ. ಇದು ದೇವರತಪ್ಪಲ್ಲ. ದೂಷಿಸುವರದೇ ತಪ್ಪು. ನಮಗೆ ಏನು ಬೇಕೆಂಬುದನ್ನು ಆ ನಮ್ಮ ತಂದೆ ಬಲ್ಲನು. ಹಾಗೆ ದೂಷಿಸುವರಿಗೆ ಮೋಟಾರನ್ನೂ ಬಂಗಲೆಯನ್ನು ಕೊಟ್ಟಿದ್ದರೇ ಅದರಿಂದಾ ಮನುಷ್ಯರಿಗೆ ಏನೋ ಒಂದು ದೊಡ್ಡ ಹಾನಿಸಂಭವಿಸುವಂತಿರ ಬಹುದು. ಆದ್ದರಿಂದಲೇ ದೇವರು ಅವನಿಗೆ ಮೋಟಾರನ್ನಾಗಲೀ, ಬಂಗಲೆಯನ್ನಾಗಲೀ ಕೊಡಲಿಲ್ಲ ! ಎಂದು ಹೇಳಿದರು. ಆಗ ಅಲ್ಲಿ ಕುಳಿತಿದ್ದ ಮೊದಲನೆಯ ದಿನದ ಪಂಡಿತರು, ಓಹೋ! ಫಾದರಿಯುವರೇ! ಈಗ ತಾವು ಹೇಳಿದ್ದೂ, ನಾನು ನಿನ್ನೆಯದಿನ ಸೋಮುಖಾಸುರನ ವಿಷಯವಾಗಿ ಹೇಳಿದ್ದೂ ಒಂದೇ ಆಗಿರುತ್ತದೆ. ಈ ಭಾಗ್ಯಕ್ಕೆ ನಿನ್ನೆಯ ದಿವಸ ತಾವೇಕೆ ಸಮ್ಮತಿಸಲಿಲ್ಲ? ಎಂದು ಕೇಳಿದರು. ಫಾದರಿಯುವರಿಗೇನೂ ತೋಚಲಿಲ್ಲ, ಸುಮ್ಮನಾದರು. ಪರಂತು ಇಂತಹಫಾದರಿಗಳ ಉಪನ್ಯಾಸಗಳನ್ನು ಕೇಳಿ ಮರುಳಾಗುವುದರಿಂದ ನಮ್ಮವರಲ್ಲನೇಕರು ನಮ್ಮ ಶಾಸ್ತ್ರಗಳನ್ನೇ ಹೀಯಾಳಿಸುವುದುಂಟು. ಇದಕ್ಕೆಲ್ಲಾ ಅವರ ಅಲ್ಪ ತಿಳಿವಳಿಕೆಯೇ ಕಾರಣವಾಗಿರುತ್ತದೆ. ಆದುದರಿಂದ ಸೋಮುಖಾಸುರನ ಕಥೆಯಿಂದ ತಿಳಿಯಬೇಕಾದ ಸಾರಾಂಶವೇನೆಂದರೆ ಸದ್ವಿದ್ಯೆಗಳು ದುರ್ಜನರಿಗೆ ಲಭಿಸಿದಾಗ್ಗೂ ಅವರದನ್ನು ತಮ್ಮ ದುರ್ಮಾರ್ಗತನದಲ್ಲಿಯೇ ಉಪಯೋಗಿಸುತ್ತಾರೆ. ಅದು ಭಗವದಿಚ್ಛೆಯಿಲ್ಲವಾದುದರಿಂದ, ಸದ್ವಿದ್ಯೆಗಳು ದುರ್ಜನರ ವಶಕ್ಕೆ ಸಿಕ್ಕಿದಾಗ್ಗೂ ಅವರಿಗದು ದಕ್ಕುವುದಿಲ್ಲ. ಅದರಂತೆಯೇ ಸೋಮುಖಾಸುರನಿಗೂ ವೇದ ವಿದ್ಯೆಯು ದಕ್ಕಲಿಲ್ಲವೆಂದು ತಿಳಿಯಬೇಕು.

## —:ವೇದವಿಭಾಗಗಳು:—

ಬಹು ಕಾಲದವರೆಗೂ ವೇದದಲ್ಲಿ, ಋಕ್ಕುಗಳೂ, ಯಜುಸ್ಸುಗಳೂ, ಸಾಮಗಳೂ, ಒಂದರೊಂದಿಗೊಂದು ಕಲೆತು ಬಹಳಗಹನವಾಗಿದ್ದುವು. ಆಗ ಕೃಷ್ಣದ್ವೈಪಾಯನರೆಂಬ ನಾಮಾಂತರವುಳ್ಳ ಶ್ರೀವೇದವ್ಯಾಸರು, ವೇದಗಳನ್ನು ವಿಭಜಿಸಿ ಋಗ್ವೇದ—ಯಜುರ್ವೇದ—ಸಾಮವೇದ—ಅಥರ್ವವೇದಗಳೆಂಬ ನಾಲ್ಕು ವೇದಗಳನ್ನು ಪ್ರತ್ಯೇಕವಾಗಿ ವಿಂಗಡಿಸಿ ತಮ್ಮ ಶಿಷ್ಯರಲ್ಲಿ ನಾಲ್ಕುಮಂದಿಗೆ ಬೋಧಿಸಿದರು.

ಪೈಲನಿಗೆ ಋಗ್ವೇದವನ್ನೂ, ವೈಶಂಪಾಯನನಿಗೆ ಯಜುರ್ವೇದವನ್ನೂ, ಜೈಮಿನಿಗೆ ಸಾಮವೇದವನ್ನೂ, ಸುಮಂತನಿಗೆ ಅಥರ್ವವೇದವನ್ನೂ ಉಪದೇಶಮಾಡಿ, ಅವರವರನ್ನು ಆಯಾವೇದಶಾಖಾಪ್ರವರ್ತಕರಾಗಿರುವಂತೆ ಏರ್ಪಡಿಸಿದರು. ಪೈಲ, ವೈಶಂಪಾಯನಾದಿಗಳು, ತಮಗೆ ಗುರುಮುಖವಾಗಿ ಲಭಿಸಿದ ವೇದವಿದ್ಯೆಯನ್ನು ತಮ್ಮ ಶಿಷ್ಯರಿಗುಪದೇಶಮಾಡಿದರು. ಅವರು ತಮ್ಮ ಶಿಷ್ಯರಿಗುಪದೇಶ ಮಾಡಿದರು. ಅದರಂತೆಯೇ ಗುರುಶಿಷ್ಯ ಪರಂಪರೆಯಾಗಿ ವೇದವು ಪ್ರಪಂಚವೆಲ್ಲಾ ವ್ಯಾಪಿಸಿತು. ಇಂತು ಸಮಸ್ತ ಧರ್ಮಗಳಿಗೂ ಮೂಲಾಧಾರವಾಗಿರುವ ಚತುರ್ವೇದಗಳಲ್ಲಿನ ಒಂದಕ್ಷರವಾದರೂ ಲೋಪವಾಗದೆ ಭದ್ರವಾಗಿರುವುದಕ್ಕೆ ತಕ್ಕಂತೆ ಪದ-ಕ್ರಮ-ಜಟಾ-ಘನ ಪಾಠಗಳೆಂಬ ಹೆಸರಿನಿಂದ ಕಟ್ಟು ವಿಟ್ಟಗಳನ್ನೇರ್ಪಡಿಸಿ, ವೇದಾಧ್ಯಯನವು ಸ್ಥಿರವಾದ ಪದ್ಧತಿಗಳಿಂದ ನೆಲೆಗೊಳಿಸಲ್ಪಟ್ಟಿತು.

ಮನೋಹರವಾದ ಆ ಪದ್ಧತಿಯನ್ನು ತಿಳಿಸತಕ್ಕ ಒಂದಾನೊಂದು ಋಕ್ಕಿನ ಪಾಠವಿಲ್ಲಿ ಸೂಚಿಸಲ್ಪಡುತ್ತದೆ.

ಮೂಲಋಕ್:—

ಪವಸ್ವವಾಜಸಾತಯೇ॰ ವಿಪ್ರಸ್ಯ ಗೃಣತೋವೃಧೇ । ಸೋಮರಾಸ್ವಸುವೀರ್ಯಂ ॥ (ಋಗ್ವೇದ-೯-೪೪-೬.)

ತಾತ್ಪರ್ಯ ॥ ಎಲೈಸೋಮನೇ ! ನಮಗೆ ಅನ್ನಲಾಭವುಂಟಾಗಲು ನಿನ್ನನ್ನು ಸ್ತುತಿಸುತ್ತಿರುವ ವಿಪ್ರನಾದ ನನಗೆ ಅಭಿವೃದ್ಧಿಯಾಗುವುದಕ್ಕೆ

ತಕ್ಕ ರಸವನ್ನು ಕೊಡು. ವೀರ್ಯವಂತನಾದ ಸುಪುತ್ರನನ್ನು ನನಗೆ ಕೊಡು!

ಪದಪಾಠ॥ ಪವಸ್ವ । ವಾಜಸಾತಯೇ । ವಿಪ್ರಸ್ಯ । ಗೃಣತಃ।
ವೃಧೇ । ಸೋಮ । ರಾಸ್ವ । ಸುವೀರ್ಯಮ್ ॥

ಕ್ರಮಪಾಠ॥ ಪವಸ್ವವಾಜಸಾತಯೇ । ವಾಜಸಾತಯೇ
ವಿಪ್ರಸ್ಯ । ವಾಜಸಾತಯ ಇತಿವಾಜಸಾತಯೇ । ವಿಪ್ರ
ಸ್ಯಗೃಣತಃ । ಗೃಣತೋವೃಧೇ । ವೃಧಇತಿವೃಧೇ ।
ಸೋಮರಾಸ್ವ । ರಾಸ್ವವೀರ್ಯಂ। ಸುವೀರ್ಯಮಿತಿಸುವೀರ್ಯಮ್॥

ಜಟಾಪಾಠ॥ ಪವಸ್ವ, ವಾಜಸಾತಯೇ ವಾಜಸಾತಯೇ, ಪವಸ್ವ ಪವಸ್ವ, ವಾಜಸಾತಯೇ । ವಾಜಸಾತಯೇ, ವಿಪ್ರಸ್ಯ ವಿಪ್ರಸ್ಯ, ವಾಜಸಾತಯೇ ವಾಜಸಾತಯೇ, ವಿಪ್ರಸ್ಯ । ವಾಜಸಾತಯ ಇತಿ ವಾಜಸಾತಯೇ । ವಿಪ್ರಸ್ಯ, ಗೃಣತೋ ಗೃಣತೋ, ವಿಪ್ರಸ್ಯ ವಿಪ್ರಸ್ಯ, ಗೃಣತಃ । ಗೃಣತೋವೃಧೇವೃಧೇ, ಗೃಣತೋಗೃಣತೋ, ವೃಧೇ । ವೃಧಇತಿವೃಧೇ । ಸೋಮ, ರಾಸ್ವ, ರಾಸ್ವಸೋಮಸೋಮ, ರಾಸ್ವ । ರಾಸ್ವಸುವೀರ್ಯಗ್ಂ, ಸುವೀರ್ಯಗ್ಂ, ರಾಸ್ವರಾಸ್ವ, ಸುವೀರ್ಯಂ, ಸುವೀರ್ಯಮಿತಿಸುವೀರ್ಯಮ್ ॥

ಘನಪಾಠ॥ ಪವಸ್ವ, ವಾಜಸಾತಯೇ ವಾಜಸಾತಯೇ, ಪವಸ್ವ ಪವಸ್ವ, ವಾಜಸಾತಯೇ, ವಿಪ್ರಸ್ಯ ವಿಪ್ರಸ್ಯ, ವಾಜಸಾತಯೇ, ಪವಸ್ವ ಪವಸ್ವ, ವಾಜಸಾತಯೇ, ವಿಪ್ರಸ್ಯ। ವಾಜಸಾತಯೇ, ವಿಪ್ರಸ್ಯ ವಿಪ್ರಸ್ಯ, ವಾಜಸಾತಯೇ ವಾಜಸಾತಯೇ, ವಿಪ್ರಸ್ಯ, ಗೃಣತೋಗೃಣತೋ, ವಿಪ್ರಸ್ಯ, ವಾಜಸಾತಯೇ ವಾಜಸಾತಯೇ, ವಿಪ್ರಸ್ಯಗೃಣತಃ । ವಾಜಸಾತಯ ಇತಿ ವಾಜಸಾತಯೇ । ವಿಪ್ರಸ್ಯ, ಗೃಣತೋಗೃಣತೋ, ವಿಪ್ರಸ್ಯ ವಿಪ್ರಸ್ಯ, ಗೃಣತೋ, ವೃಧೇವೃಧೇ, ಗೃಣತೋ, ವಿಪ್ರಸ್ಯ ವಿಪ್ರಸ್ಯ, ಗೃಣತೋ, ವೃಧೇ । ಗೃಣತೋ, ವೃಧೇವೃಧೇ, ಗೃಣತೋಗೃಣತೋ, ವೃಧೇ । ವೃಧ ಇತಿವೃಧೇ । ಸೋಮ, ರಾಸ್ವರಾಸ್ವ, ಸೋಮಸೋಮ, ರಾಸ್ವ, ಸುವೀರ್ಯಗ್ಂ ಸುವೀರ್ಯಗ್ಂ । ರಾಸ್ವ, ಸೋಮಸೋಮ, ರಾಸ್ವ, ಸುವೀರ್ಯಂ । ರಾಸ್ವ,

ಸುಮೀತ್ಯಗ್ನೌ ಸುಮೀಷ್ಯಗ್ನೌ । ದಾಸ್ಯದಾಸ್ಯ ಸುಮೀಷ್ಯ। ಸುಮೀತ್ಯ ಮಿಶ್ರಿಸುಮೀತ್ಯ॥

## —:ವೇದಕಾಂಡ ವಿಭಾಗ:—

ವೇದದಲ್ಲಿ, ಕರ್ಮಕಾಂಡ, ಉಪಾಸನಾಕಾಂಡ, ಜ್ಞಾನಕಾಂಡ ಗಳೆಂಬ ಮೂರು ಬಗೆ ಭಾಗಗಳಿರುತ್ತವೆ. ಕರ್ಮಕಾಂಡ ವೆಂದರೆ, ಐಹಿಕ ಆಮುಷ್ಮಿಕ ಸುಖಸಾಧನಭೂತಗಳಾದ ಯಜ್ಞಾಗ್ನಿಹೋತ್ರಾದಿ ಬಗೆಬಗೆ ಯಾಗಕರ್ಮಗಳನ್ನು ಬೋಧಿಸುವ ಭಾಗವು.

ಉಪಾಸನಾ ಕಾಂಡವೆಂದರೆ, ಪರಮಕರುಣಾಸಮುದ್ರನಾದ ಭಗವಂತನಲ್ಲಿ ಭಕ್ತಿವಿಶ್ವಾಸಗಳುಂಟಾಗುವ ಪದ್ಧತಿಗಳನ್ನು ಬೋಧಿಸುವ ಭಾಗವು.

ಜ್ಞಾನಕಾಂಡ ವೆಂದರೆ.—ಆತ್ಮವಿಚಾರವನ್ನು, ಅದರ ಫಲಿತಾಂಶ ವಾದ ನಿತ್ಯಾನಂದ ವೈಭವವನ್ನು ತಿಳಿಸುವಭಾಗವು.

## —:ವೇದವಿಷಯಾನುಕ್ರಮಣಿಕೆ.:—

ಈ ವರೆಗೂ, ಋಗ್ಯಜುಸ್ಸಾಮಾಥರ್ವಗಳೆಂಬ ನಾಲ್ಕು ವೇದಗಳಿರುವವೆಂದು ಸೂಚಿಸಲಾಯಿತಲ್ಲವೇ? ಇನ್ನು ಈ ನಾಲ್ಕು ವೇದಗಳಲ್ಲಿಯೂ ಏನೇನು ವಿಷಯಗಳಿರುವುವೆಂಬುದನ್ನೂ, ಎಷ್ಟೆಷ್ಟು ಅಧ್ಯಾಯಗಳು, ಸೂಕ್ತಗಳು, ಮಂತ್ರಗಳು ಇರುವುವೆಂಬುದನ್ನೂ ವಿಚಾರಿಸಿ ನೋಡೋಣ.

ಋಕ್ಕುಗಳೆಂದರೆ, ಛಂದೋಬದ್ಧಗಳಾಗಿ ಸಮಸ್ತ ಧರ್ಮಗಳನ್ನೂ ಶಾಸನ ಮಾಡತಕ್ಕ ವಾಕ್ಯಗಳು.

ಯಜುಸ್ಸುಗಳೆಂದರೆ, ಛಂದೋನಿಯಮವಿಲ್ಲದ ಗದ್ಯ ಮಾತ್ರ ಪ್ರಕರಣವಾಗಿ, ಯಜ್ಞಾಗ್ನಿಹೋತ್ರಾದಿ ಕರ್ಮಗಳನ್ನು ವಿಧಿಸುವ ವಾಕ್ಯಗಳು.

ಸಾಮಗಳೆಂದರೆ, ಸಂಗೀತದಂತೆ ಹಾಡುವುದಕ್ಕನುಕೂಲವಾಗಿ ಸೂತ್ರರೂಪವಾಗಿರುವ ವಾಕ್ಯಗಳು.

ಅಥರ್ವ (ಮಂತ್ರ) ಗಳೆಂದರೇ, ಲೌಕಿಕ ಪಾರಮಾರ್ಥಿಕವ್ಯವಹಾರ ರಹಸ್ಯಗಳನ್ನೆಲ್ಲಾ ತಿಳಿವಾಗಿ ಬೋಧಿಸತಕ್ಕ ವಾಕ್ಯಗಳು.

ಋಗ್ವೇದದಲ್ಲಿ ೨೧ ಶಾಖೆಗಳೂ, ಯಜುರ್ವೇದದಲ್ಲಿ ೧೦೧ ಶಾಖೆಗಳೂ, ಸಾಮವೇದದಲ್ಲಿ ೧೦೦೦ ಶಾಖೆಗಳೂ, ಅಥರ್ವವೇದದಲ್ಲಿ ೫೦ ಶಾಖೆಗಳೂ, ಇರುವುವು. [ಕೆಲವುಕಡೆ ೯ ಶಾಖೆಗಳೆಂಬು ಹೇಳಲ್ಪಟ್ಟಿದೆ.]

ಋಗ್ವೇದದಲ್ಲಿ, ಅಶ್ವಲಾಯನ, ಶಾಕಲಬಾಷ್ಕಲ, ಶಾಂಖಾಯನ, ಮಾಂಡೂಕ್ಯ ಐತರೇಯ, ಕೌಷೀತಕೀ, ಶೈಶಿರಿ, ಪೈಂಗಿ, ಮುದ್ಗಲ, ಶಿಶಿರ, ವಾತ್ಸ್ಯ, ಗೋಕುಲಾದಿ ಹೆಸರುಗಳುಳ್ಳ ಶಾಖೆಗಳಿರುವುವು.

ಯಜುರ್ವೇದದಲ್ಲಿ ; ತೈತ್ತಿರೀಯ ಸಂಹಿತೆಯೆಂತಲೂ, ವಾಜಸನೇಯ ಸಂಹಿತೆಯೆಂತಲೂ, ಎರಡು ವಿಭಾಗಗಳಿರುತ್ತವೆ. ತೈತ್ತಿರೀಯಸಂಹಿತೆಗೆ, ಕೃಷ್ಣ ಯಜುರ್ವೇದವೆಂದು ಹೆಸರು. ವಾಜಸನೇಯ ಸಂಹಿತೆಗೆ, ಶುಕ್ಲಯಜುರ್ವೇದವೆಂದು ಹೆಸರು. ಈ ಶಾಖೆಗೆ (ಶುಕ್ಲಯಜುರ್ವೇದಕ್ಕೆ) ಸೇರಿದವರಿಗೆ ಪ್ರಥಮಶಾಖೆಯುವರೆಂದು ಹೆಸರು. ಯಜುರ್ವೇದದಲ್ಲಿ, ಮೈತ್ರಾಯಣೀಯ, ಆಪಸ್ತಂಬೀಯ, ಬೋಧಾಯನ, ಜಾಬಾಲ, ಹಿರಣ್ಯಕೇಶಿ, ಕಾತ್ಯಾಯನಾದಿ ಹೆಸರುಗಳುಳ್ಳ ಶಾಖೆಗಳಿರುವುವು.

ಸಾಮವೇದದಲ್ಲಿ, ಕಾಥ್ರೋಲ, ಮಹಾಕಾಥ್ರೋಲ, ಕಾಣ್ವಮುಗ್ರ, ರಾಣಾಯನ, ಲಾಂಗಲಿಕ, ಶಾರ್ದೂಲ, ಕೌಥುಮ, ಸಾತ್ಯಾಯನಾದಿ ಹೆಸರುಗಳುಳ್ಳ ಶಾಖೆಗಳಿರುವುವು.

ಅಥರ್ವವೇದದಲ್ಲಿ, ಶೌನಕೀಯ, ತೌತ್ತಾಯನ, ಜಾಜಲ, ಬ್ರಹ್ಮಪಲಾಶ, ಪಿಪ್ಪಲಾದ, ಮಾಮೋದ, ದೇವದರ್ಶ, ಕುಮುದ, ಚಾರಣವಿದ್ಯಾದಿ ಹೆಸರುಗಳುಳ್ಳ ಶಾಖೆಗಳಿರುವುವು.

ಋಗ್ವೇದದಲ್ಲಿ, ಎಂಟು (೮) ಅಷ್ಟಕಗಳು, ೧೦ ಮಂಡಲಗಳು, ೬೪ ಅಧ್ಯಾಯಗಳು, ೨೧೦೬ ವರ್ಗಗಳು, ೧೦೧೭ ಸೂಕ್ತಗಳು, ೧೦೫೮೦ ಋಕ್ಕುಗಳು ಇರುವುವು.

ಯಜುರ್ವೇದದಲ್ಲಿ, (ಶುಕ್ಲ ಯಜುರ್ವೇದದಲ್ಲಿ) ೪೨ ಅಧ್ಯಾಯಗಳು, ೧೯೦೦ ಮಂತ್ರಗಳು, ೭೬೧೧ ಬ್ರಾಹ್ಮಣಗಳು ಇರುವುವು. (ಕೃಷ್ಣ

ಯಜುರ್ವೇದದಲ್ಲಿ.) ಏಳು ಕಾಂಡಗಳು, ೪೨ ಪ್ರಶ್ನೆಗಳು, ೬೫೧ ಅನುವಾಕಗಳು, ೧೮೦೦೦ ಮಂತ್ರಬ್ರಾಹ್ಮಣ ಸಮ್ಮಿಳಿತವಾದ ಯಜುಸ್ಸುಗಳು ಇರುವುವು.

ಸಾಮವೇದದಲ್ಲಿ, ೧೧೧ ಸಾಮಗಾನಗಳೂ, ೧೫೪೯ ಮಂತ್ರ (ಪದ್ಯ) ಗಳೂ, ೯೦೧ ವಾಲಖಿಲ್ಯ ಸೂಕ್ತಗಳೂ ಇರುವುವು.

ಅಥರ್ವವೇದದಲ್ಲಿ, ೨೦ ಕಾಂಡಗಳು, ೭೩೬ ಸೂಕ್ತಗಳು, ೩೮ ಪ್ರಪಾಠಗಳು, ೧೧೧ ಅನುವಾಕಗಳು, ೬೧೧೪ ಋಕ್ಕುಗಳು ಇರುವುವು. ಈ ವೇದದಲ್ಲಿರುವ ಮಂತ್ರಗಳ ಸಂಖ್ಯೆ ೧೨೦೦೦ ಎಂದು ಗೋಪಥ ಬ್ರಾಹ್ಮಣದಲ್ಲಿ ಸೂಚಿತವಾಗಿದೆ.

—:ವೇದವಿಷಯಾನುಕ್ರಮಣಿಕೆ:—

ಋಗ್ವೇದದಲ್ಲಿ, ಆರ್ಯಾವರ್ತ ಸಂಚಾರಿಗಳಾದ ಋಷಿಗಳು ಪರಮಾತ್ಮನನ್ನು ಸ್ತೋತ್ರಮಾಡಿದ ಮಂತ್ರವಿಧಾನಗಳು, ಕುತ್ಸನು, ಗೃತ್ಸನು ತುಗ್ರನು ಮುಂತಾದವರ ಚರಿತ್ರೆಗಳು, ಗೀತಗಳು, ಸಮುದ್ರದಮೇಲೆ ಹಡಗುಗಳನ್ನು ನಡೆಯಿಸುವ ವಿಧಾನಗಳು, ಆಯುರ್ವೇದ ರಹಸ್ಯಗಳು, ನಕ್ಷತ್ರವಿದ್ಯೆ, ಚಂದ್ರಸಂಚಾರ, ಋತುವರ್ಣನೆ, ಇಂದ್ರ—ಅಗಸ್ತ್ಯಸಂವಾದ, ವಿಷಪರಿಹಾರಸ್ತೋತ್ರ, ವಸ್ತ್ರಗಳನ್ನು ನೇಯುವ ವಿದ್ಯೆ, ಕೌಶಿಕಗೀತಗಳು, ಗಾಯತ್ರೀ ಓಂಕಾರಸ್ವರೂಪ, ಗಾಯತ್ರೀಸ್ತೋತ್ರ, ಸೂರ್ಯಸ್ತೋತ್ರ, ಚಿನ್ನದಕೆಲಸ, ರಥನಿರ್ಮಾಣ, ಲೋಹಗಳಿಂದ ತಯಾರಿಸತಕ್ಕ ವಿವಿಧ ಯಂತ್ರಗಳವಿಧಾನ, ಯುದ್ಧಭಟರಿಗೆ ಅನುಕೂಲಿಸುವ ಕವಚಗಳನ್ನು ತಯಾರಿಸುವವಿಧಾನ, ಮಳೆ ಬರುವುದಕ್ಕಾಗಿ ವಸಿಷ್ಠರು ವಿರಚಿಸಿದ ವರ್ಷಸ್ತೋತ್ರಗಳು, ಅಶ್ವಗೃಹನಿರ್ಮಾಣ ಮುಂತಾದ ಕಾರ್ಯಗಳಲ್ಲಿ ಮಾಡಿದ ಸ್ತೋತ್ರಗಳು. ಚಿನ್ನದ ಗಣಿಗಳಿಂದ ಚಿನ್ನವನ್ನು ಶೇಖರಿಸುವವಿಧಾನಗಳು, ರುದ್ರಸ್ತುತಿ, ಅನೇಕಮಂದಿ ರಾಜರಚರಿತ್ರೆಗಳು, ರಾಜರನ್ನು ಸಿಂಹಾಸನಾರೂಢರನ್ನಾಗಿ ಮಾಡತಕ್ಕ ರಾಜ್ಯ ಪಟ್ಟಾಭಿಷೇಕವಿಧಾನಗಳು, ದೇವಪತ್ನಿವರ್ಣನೆ, ಸೋಮಲತೆಯವರ್ಣನೆ, ಆನೆ, ಕುದುರೆ, ಮುಂತಾದುವುಗಳ ಮೇಲೆ ಸವಾರಿ ಮಾಡತಕ್ಕ ವಿಧಾನಗಳು, ಧನು,

ಭಕ್ತಿ ವಿನಯ ವಿಶ್ವಾಸಾದಿ ಸದ್ಗುಣಗಳುಂಟಾಗುವುದಕ್ಕೆ ಮಾರ್ಗಗಳು, ಕೆರೆ, ಕುಂಟೆ, ಭಾವಿ, ಬುಗ್ಗೆ ಮುಂತಾದ ಜಲಾಧಾರಗಳನ್ನು ನಿರ್ಮಿಸುವ ಮತ್ತು ಅವುಗಳಿಂದ ನೀರು ತೋಡುವವಿಧಾನಗಳು, ಪುರೋಹಿತರು, ಆಚಾರ್ಯರು ಮುಂತಾದವರ ಲಕ್ಷಣಗಳು. ಆಪದ್ವಿಚಾರದಲ್ಲಿ ನಡೆಯಿಸಬೇಕಾದ ಮರ್ಯಾದೆಗಳು ಮುಂತಾದ ಶಿಷ್ಟ ಪದ್ಧತಿಗಳವಿವರ, ಚಿನ್ನದನಾಣ್ಯಗಳನ್ನು ತಯಾರಿಸುವಿಕೆ, ಸಮುದ್ರಯಾನ, ವಿದೇಶಗಳೊಂದಿಗೆ ವರ್ತಕವಮಾಡುವ ರಹಸ್ಯಗಳು, ಸೂರ್ಯ ಚಂದ್ರ ಸಂವಾದಗಳು, ಯಮುನಾ ಸುಭಾಷಿತ, ವಿಶಲ್ಯ ಕರಣಿ, ಉಪನೇತ್ರ ನಿರ್ಮಾಣ, ಅಂಬರೀಷ ಕುಮಾರೀ ಉಪಾಖ್ಯಾನ' ಕಾಲನಿರ್ಣಯ, ಖಗೋಳ ಭೂಗೋಳ ವಿಚಾರ, ಗ್ರಹಣ ವಿಧಾನ, ಸಪ್ತರ್ಷಿ ಮಂಡಲವರ್ಣನೆ, ಪ್ರಪಂಚಸೃಷ್ಟಿವಿಚಾರ, ಭೂಮಧ್ಯರೇಖೆ, ಅಕ್ಷಾಂಶ ಮುಂತಾದ ಅನೇಕ ವಿಷಯಗಳು ಋಗ್ವೇದದಲ್ಲಿರುವುವು.

ಯಜುರ್ವೇದದಲ್ಲಿ, ಯಜ್ಞ, ಅಗ್ನಿಹೋತ್ರಾದಿ ಕರ್ಮಗಳವಿಧಾನ. ದರ್ಶಪೂರ್ಣಿಮಾದಿಪರ್ವಕಾಲಗಳಲ್ಲಿ ಮಾಡಬೇಕಾದ ಪಿತೃಕರ್ಮಗಳವಿಧಾನ, ಧರ್ಮವಿಚಾರ, ಬ್ರಹ್ಮವಿದ್ಯೆ, ನಿತ್ಯಕರ್ಮಗಳ ವಿವರ, ಪೃಥಿವ್ಯಾದಿ ಲೋಕಭ್ರಮಣರಹಸ್ಯ, ಸೃಷ್ಟಿವಿದ್ಯೆ, ವಾಜಪೇಯ—ರಾಜಸೂಯ, ಅಶ್ವಮೇಧ—ಸೌತ್ರಾಮಣಿ—ನಾರಾಯಣಬಲಿ—ಅಗ್ನಿಷ್ಟೋಮ— ಅತಿರಾತ್ರ—ಪೌಂಡರೀಕ, ಮುಂತಾದ ಯಜ್ಞಗಳವರ್ಣನೆ, ಸೋಮಪಾನವಿಚಾರ, ಆಕರ್ಷಣ—ಅನುಕರ್ಷಣ, ಪ್ರಕಾಶ್ಯ ಪ್ರಕಾಶಕ, ಮುಂತಾದ ಸೃಷ್ಟಿರಹಸ್ಯಗಳು, ಶಾರೀರ ಶಾಸ್ತ್ರವಿಚಾರ, ರಾಜಧರ್ಮ—ಪ್ರಜಾಧರ್ಮಗಳು, ಪುನರ್ಜನ್ಮ ಪ್ರಶಂಸೆ, ಗಣಿತವಿದ್ಯೆ, ಅಹಿಂಸಾಧರ್ಮಶಾಸನ, ಈಶ್ವರಸ್ತೋತ್ರಗಳು ಮುಂತಾದ ಅನೇಕ ವಿಷಯಗಳು ಯಜುರ್ವೇದದಲ್ಲಿರುವುವು.

ಸಾಮವೇದದಲ್ಲಿ, ಪರಮೇಶ್ವರನನ್ನು ಅನೇಕ ವಿಧವಾದ ಪದಗಳಿಂದ ಸಂಬೋಧಿಸುತ್ತ ಗಾನರೂಪವಾಗಿ ಸ್ತೋತ್ರಮಾಡತಕ್ಕ ಗೀತಗಳಿರುವುವು. ಇವು ಪ್ರಾಚ್ಯಸಾಮಗಾನ-ಉದೀಚ್ಯಸಾಮಗಾನಗಳೆಂಬ ವಿಭಿದಾನದಿಂದ ಕೂಡಿರುವ ಅನೇಕ ಗೀತಗಳು ಸಾಮವೇದದಲ್ಲಿರುವುವು.

ಅಥರ್ವವೇದದಲ್ಲಿ, ದೀರ್ಘಾಯುವುಂಟಾಗುವುದಕ್ಕೂ, ಆ

ರೋಗ್ಯವಾಗಿರುವುದಕ್ಕೂ ಅನುಕೂಲವಾದ ಸ್ತೋತ್ರಗಳು, ವ್ಯಾಧಿನಿವಾರಣೆಗೂ, ಭ್ರಾಂತಿ, ಪಿಶಾಚಬಾಧಾಪರಿಹಾರಕ್ಕೂ ತಕ್ಕ ಮಂತ್ರಗಳು, ಶತ್ರುಗಳನ್ನೂ, ಭೂತಗಳನ್ನೂ, ಮಾಂತ್ರಿಕರೆಂಬ ಭೂತವೈದ್ಯರನ್ನೂ ಜಯಿಸತಕ್ಕ ಮಂತ್ರಗಳು, ಅಭಿಚಾರಿಕಾದಿ ಮಾರಣ ಹೋಮಗಳು, ಸ್ತ್ರೀಯರಿಗೆ ಅಭಿವೃದ್ಧಿಯನ್ನೂ, ಅಧಿಕಾರವನ್ನೂ ಉಂಟುಮಾಡತಕ್ಕ ಮಂತ್ರಗಳು, ರಾಜರಿಗೂ, ಬ್ರಾಹ್ಮಣರಿಗೂ, ಪ್ರಜೆಗಳಿಗೂ, ಯೋಗಕ್ಷೇಮಗಳುಂಟಾಗತಕ್ಕಮಂತ್ರಗಳು, ವೃಷ್ಟಿಸಂಬಂಧವಾದ ಮಂತ್ರಗಳು, ಸೃಷ್ಟಿಗೂ—ಸೃಷ್ಟಿಕರ್ತನಿಗೂ ಸಂಬಂಧಿಸತಕ್ಕ ಮಂತ್ರಗಳು, ಆಯುರ್ವೇದರಹಸ್ಯಗಳು, ವ್ಯಾಧಿಲಕ್ಷಣಗಳು, ಚಿಕಿತ್ಸೆಗಳು, ಮಂತ್ರಗಳು, ಮೂಲಿಕೆಗಳು, ಯಂತ್ರಗಳು, ವ್ರಣಚಿಕಿತ್ಸೆ, ಕಾರ್ಯಸಾಧನ ಸೂಕ್ತಗಳು, ಐಕಮತ್ಯ—ವಶೀಕರಣ ಮಂತ್ರಗಳು, ಮುಂತಾದ ಅನೇಕವಿಷಯಗಳು ಅಥರ್ವವೇದದಲ್ಲಿರುವುವು.

ಯಜುರ್ವೇದ—ಸಾಮವೇದ—ಅಥರ್ವವೇದಗಳೆಂಬ ಈ ಮೂರು ವೇದಗಳಲ್ಲಿಯೂ, ಋಗ್ವೇದ ಮಂತ್ರಗಳು ಅಲ್ಲಲ್ಲಿ ಸೇರಿರುತ್ತವೆ. ಆದುದರಿಂದ ಋಗ್ವೇದದಲ್ಲಿನ ಅಭಿಪ್ರಾಯಗಳು ಅನೇಕವಾಗಿ ಈ ಮೂರು ವೇದಗಳಲ್ಲಿಯೂ ಕಾಣಬರುತ್ತವೆ.

### —: ವೇದಸ್ವರವಿಚಾರ :—

ವೇದಮಂತ್ರಗಳು ಉದಾತ್ತ—ಅನುದಾತ್ತ—ಸ್ವರಿತ—ದೀರ್ಘಸ್ವರಿತಗಳೆಂಬ ನಾಲ್ಕು ಬಗೆಯ ಸ್ವರಗಳಿಂದೊಡಗೂಡಿರುತ್ತವೆ.

ಈ ಸ್ವರಗಳನ್ನು ಸೂಚಿಸತಕ್ಕ ಗುರುತುಗಳು ಈ ಕೆಳಗೆ ವಿವರಿಸಲ್ಪಡುತ್ತವೆ.

—
ಉದಾತ್ತ, ಅಕ್ಷರದ ಮೇಲ್ಭಾಗದಲ್ಲಿ ಬರೆಯತಕ್ಕ ಅಡ್ಡಗೀಟು.

ಅನುದಾತ್ತ, ಅಕ್ಷರದ ಕೆಳಗೆ ಬರೆಯತಕ್ಕ ಅಡ್ಡಗೀಟು.
—

|
ಸ್ವರಿತ, ಅಕ್ಷರದ ಮೇಲ್ಭಾಗದಲ್ಲಿ ಬರೆಯತಕ್ಕ ಉದ್ದಗೀಟು.

ದೀರ್ಘಸ್ವರಿತ; ಅಕ್ಷರದ ಮೇಲ್ಭಾಗದಲ್ಲಿ ಬರೆಯುತಕ್ಕ ಎರಡುಉದ್ದಗೀಟುಗಳು.

ಋಗ್ವೇದಕ್ಕೆ ಗೋತ್ರಋಷಿ, ಅತ್ರಿಯು. ದೇವತೆ ಬ್ರಹ್ಮನು, ಛಂದಸ್ಸುಗಾಯತ್ರಿಯು, ರುರುವರ್ಣವು. (ಜಿಂಕೆಬಣ್ಣವು). ಯಜುರ್ವೇದಕ್ಕೆ ಗೋತ್ರಋಷಿ, ಭರದ್ವಾಜನು, ದೇವತೆರುದ್ರನು, ತ್ರಿಷ್ಟುಪ್ ಛಂದಸ್ಸು, ತಾಮ್ರಬಣ್ಣವು. ಸಾಮವೇದಕ್ಕೆ ಗೋತ್ರಋಷಿ ಕಶ್ಯಪನು, ದೇವತೆವಿಷ್ಣುವು, ಜಗತೀಛಂದಸ್ಸು, ಬಿಳಿಯಬಣ್ಣವು. ಅಥರ್ವವೇದಕ್ಕೆ, ಗೋತ್ರಋಷಿಯು ವೈತಾನನು, ದೇವತೆ ಇಂದ್ರನು, ಅನುಷ್ಟುಪ್‌ಛಂದಸ್ಸು, ಕೃಷ್ಣಬಣ್ಣವು.

ಋಗ್ಯಜುಸ್ಸಾಮಾದಿ ನಾಲ್ಕುವೇದಗಳಲ್ಲಿಯೂ, ಸಂಹಿತಾಭಾಗ—ಬ್ರಾಹ್ಮಣಭಾಗ ಎಂದು ಎರಡುವಿಧಗಳಾಗಿರುತ್ತವೆ. ಸಂಹಿತೆ ಎಂದರೇ ಮಂತ್ರವೆಂದರ್ಥವು. ಮಂತ್ರಭಾಗಕ್ಕೆ ಸ್ವರಗಳು ಹಾಕಲ್ಪಟ್ಟಿರುತ್ತವೆ. ವೇದಪ್ರಮಾಣವನ್ನು ಹೇಳುವಲ್ಲಿ ಎಲ್ಲಿಯಾದರೂ, ಸಂಹಿತೆಯೋ? ಬ್ರಾಹ್ಮಣವೋ? ಎಂಬ ವಿವರವು ಸೂಚಿಸಲ್ಪಡದಿದ್ದರೆ, ಅಂತಹ ಸ್ಥಳದಲ್ಲಿ ಸಂಹಿತೆಯೆಂತಲೇ ಗ್ರಹಿಸಬೇಕೆಂದು ವೇದವಿದ್ಯಾವಿಶಾರದರಾದ ಮಹರ್ಷಿಯರು ನಿಶ್ಚಯಿಸಿರುತ್ತಾರೆ.

"ವೇದ್ಯಂತೇಜ್ಞಾಪ್ಯಂತೇಧರ್ಮಾರ್ಥಕಾಮಮೋಕ್ಷಾಃ" ಎಂಬಶಬ್ದಾರ್ಥದಂತೆ, ಧರ್ಮ - ಅರ್ಥ - ಕಾಮ ಮೋಕ್ಷಗಳೆಂಬ ನಾಲ್ಕು ಬಗೆಯ ಪುರುಷಾರ್ಥ ರಹಸ್ಯಗಳನ್ನು ಬೋಧಿಸತಕ್ಕ ಅನೇಕ ಸಾವಿರ ಮಂತ್ರಗಳಿಂದ ಶೋಭಿಸುತ್ತಿರುವ ವೇದವಿದ್ಯೆಯನ್ನು ಮುದ್ರಣ ಯಂತ್ರಗಳು ಮುಂತಾದ ಯಾವತೆರನಾದ ಉಪಕರಣಗಳ ಸಹಾಯವನ್ನೂ ಅಪೇಕ್ಷಿಸದೆಯೇ, ಘನತರ ಪಾಠಕ್ರಮವನ್ನೇರ್ಪಡಿಸಿ, ಸಿಷ್ಯಾಮಧ್ಯಮವನ್ನನುಸರಿಸಿ ಶಿಷ್ಯರಿಗೆ ಬೋಧಿಸುತ್ತ, ಯುಗ ಯುಗಾಂತರಗಳಿಂದಲೂ, ಪಿತ್ರಾರ್ಜಿತವಾದ ಅಮೂಲ್ಯಧನವೆಂಬ ಶ್ರದ್ಧಾಭಕ್ತಿಗಳಿಂದ, ಶುದ್ಧವಾಗಿಯೂ, ಭದ್ರವಾಗಿಯೂ, ಜತನಪಡಿಸಿದ ಆರ್ಯಕುಲಾವತಂಸರಾದ ಋಷಿಮುನಿಗಳ ಅನುಪಮಾನ ಪ್ರತಿಭಾ ವೈಭವವನ್ನು ಎಷ್ಟುಕೊಂಡಾಡಿದರೂ ಸಾಲದಲ್ಲವೆ !

## —:ವೇದಾಂಗಗಳು.:—

ಶ್ಲೋ॥ ಶಿಕ್ಷಾವ್ಯಾಕರಣಂ ಛಂದೋನಿರುಕ್ತಂ ಜ್ಯೋತಿಷಂ ತಥಾ ।
ಕಲ್ಪಶ್ಚೇತಿಷಡಂಗಾನಿ ವೇದಸ್ಯಾಹುರ್ಮನೀಷಿಣಃ ॥

ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷಗಳೆಂಬ ಈ ಆರೂ ವೇದಾಂಗಗಳಾಗಿರುತ್ತವೆ.



ಇವುಗಳ ವಿವರವೇನೆಂದರೆ ;

(೧) ಶಿಕ್ಷಾ:—ವೇದಾರ್ಥವನ್ನು ತಿಳಿಸತಕ್ಕ ಸಾಧನಗಳಲ್ಲಿ ಇದು ಮೊದಲನೆಯದು. ಇದು ಪಾಣಿನಿ ಎಂಬ ಮಹರ್ಷಿಯಿಂದ ವಿರಚಿಸಲ್ಪಟ್ಟಿತು. ಇದಕ್ಕೆ ಸರಿಯಾಗಿ ಇತರರಿಂದ ವಿರಚಿಸಲ್ಪಟ್ಟ, ವ್ಯಾಸಶಿಕ್ಷಾ, ಭಾರದ್ವಾಜಶಿಕ್ಷಾ, ಶಂಭುಶಿಕ್ಷಾ, ಸರ್ವಸಮ್ಮತಶಿಕ್ಷಾ, ನಾರದಶಿಕ್ಷಾ, ಮುಂತಾದ ಹೆಸರುಗಳಿಂದ ಪ್ರಕರಣ ಗ್ರಂಥಗಳನೇಕವಾಗಿರುವುವು. ಆದಾಗ್ಯೂ ಪಾಣಿನೀ ಗ್ರಂಥವೇ ಸರ್ವಜನಾಂಗೀಕಾರವನ್ನು ಪಡೆದು ಈಗ ಪ್ರಚಾರದಲ್ಲಿರುವುದು. ಈ ಗ್ರಂಥದಲ್ಲಿ ವೇದಶಬ್ದಗಳನ್ನು, ಅಕ್ಷರಕ್ರಮವಾಗಿ ಅಂದರೇ, ಅಕಾರದಿಂದ ಹಕಾರದವರೆಗೂ ಇರತಕ್ಕ ಸಮಸ್ತ ಅಕ್ಷರಗಳನ್ನೂ ಯಾವರೀತಿಯಲ್ಲಿ ಉಚ್ಚರಿಸಬೇಕೋ ಆ ವಿವರವನ್ನು ಸ್ಪಷ್ಟವಾಗಿ ತಿಳಿಸಲ್ಪಟ್ಟಿದೆ. ಮತ್ತು ವೇದಾಕ್ಷರಗಳಿಗೆ ಸಂಬಂಧಿಸಿದ "ಉದಾತ್ತ, ಅನುದಾತ್ತ, ಸ್ವರಿತ" ಗಳೆಂಬ ಸ್ವರಗಳ ವಿಧಾನವನ್ನೂ, ಸ್ಥಾನಗಳ ವಿವರವನ್ನೂ ಚನ್ನಾಗಿ ತಿಳಿಸುತ್ತದೆ, ಇದನ್ನು ಸಾಂಪ್ರದಾಯವಾಗಿ ಕಲಿತವರು ವೇದಮಂತ್ರಗಳನ್ನು ನಿರ್ದುಷ್ಟವಾಗಿ ಉಚ್ಚರಿಸುತ್ತಾರೆ.

(೨) ವ್ಯಾಕರಣ:—ಅಂದರೇ, ಅಕ್ಷರಗಳ "ಶಬ್ದಾಪಶಬ್ದ", ಗಳನ್ನು ಬೋಧಿಸತಕ್ಕನಿಘಂಟುವು. ಇದನ್ನು ವಿರಚಿಸಿದವರು ಪಾಣಿನೀ ಮಹರ್ಷಿಯು. ಪದಗಳಸಂಧಿ, ಆದೇಶ - ಲೋಪ, ಆಗಮ, ಹ್ರಸ್ವ, ದೀರ್ಘ ಮುಂತಾದ, ಅಕ್ಷರ - ಪದ - ವಾಕ್ಯಪ್ರಯೋಗ ನಿಬಂಧನೆಗಳೆಲ್ಲವೂ ಈ ಗ್ರಂಥದಲ್ಲಿ ಪರಿಷ್ಕಾರವಾಗಿ ತಿಳಿಸಲ್ಪಟ್ಟಿರುತ್ತವೆ. ವ್ಯಾಕರಣಗಳಸಂಖ್ಯೆ ಎಷ್ಟೆಂದು ವಿಚಾರಿಸಿದರೆ, ಎಂಟು ವ್ಯಾಕರಣಗಳೆಂದು ಕೆಲವು

ಕಡೆಯೂ, ಒಂಭತ್ತು ವ್ಯಾಕರಣಗಳೆಂದು ಕೆಲವುಕಡೆಯೂ, ಹೇಳಲ್ಪಟ್ಟಿರುತ್ತೆ. ಇಂದ್ರ, ಸಾರಸ್ವತ, ಶಾಕಟಾಯನ ವ್ಯಾಕರಣಗಳೆಂಬ ಮತ್ತೆ ಮೂರು ಗ್ರಂಥಗಳೂ ಸ್ವಲ್ಪಮಟ್ಟಿಗೆ ಪ್ರಚಾರದಲ್ಲಿರುತ್ತವೆ. ಆದಾಗ್ಯೂ ಪಾಣಿನ್ಯಾಚಾರ್ಯನ ಗ್ರಂಥವೇ ಸರ್ವತ್ರವ್ಯಾಪಿಸಿರುತ್ತದೆ.

ಪಾಣಿನೀ ವ್ಯಾಕರಣಕ್ಕೆ "ಅಷ್ಟಾಧ್ಯಾಯಿ" ಎಂದು ಹೆಸರು. ಎಂಟಧ್ಯಾಯಗಳುಳ್ಳ ಗ್ರಂಥವಾದ್ದರಿಂದ ಈ ಹೆಸರುಂಟಾಗಿರುತ್ತದೆ. ಪಣಿನ ಮಹಾಮುನಿ—ದಕ್ಷಾದೇವಿಯೆಂಬ ದಂಪತಿಗಳು ಪಾಣಿನಿಯ ಜನನೀ ಜನಕರು.

ಶ್ಲೋ॥ ಏನಾಕ್ಷರಸಮಾಮ್ನಾಯಮಧಿಗಮ್ಯಮಹೇಶ್ವರಾತ್ ।
ಕೃತ್ಸ್ನಂ ವ್ಯಾಕರಣಂಪ್ರೋಕ್ತಂ ತಸ್ಮೈಪಾಣಿನಯೇ ನಮಃ ॥

ಎಂಬೀ ಶ್ಲೋಕದಲ್ಲಿ ಪಾಣಿನಿಯು ಭಗವಂತನಾದ ಮಹೇಶ್ವರನನ್ನಾರಾಧಿಸಿ, ಅಕ್ಷರಸಮಾಮ್ನಾಯವನ್ನೂ, ಅಶೇಷವಾದ ವ್ಯಾಕರಣವನ್ನೂ ಗ್ರಹಿಸಿದನೆಂದು ವ್ಯಕ್ತವಾಗುತ್ತದೆ.

ಪಾಣಿನ್ಯಾಚಾರ್ಯನು ಒಂದಾನೊಂದು ನಿರ್ಮಲಪ್ರದೇಶದಲ್ಲಿ ಕುಳಿತು ವ್ಯಾಕರಣ ವನ್ನು ವಿರಚಿಸಬೇಕೆಂಬ ತನ್ನ ಸಂಕಲ್ಪವು ನಿರ್ವಿಘ್ನವಾಗಿ ಪೂರ್ತಿಯಾಗತಕ್ಕ "ವರವನ್ನು" ಅನುಗ್ರಹಿಸಬೇಕಾಗಿ ಪರಮೇಶ್ವರನನ್ನು ಪ್ರಾರ್ಥಿಸುತ್ತ ಕೈಗಳನ್ನು ಬಗಸೆಯಾಗಿ ಹಿಡಿದಿರುವಾಗ್ಯೆ, ಪರಮಶಿವನ ಪ್ರೇರಣೆಯಿಂದ "ಆದಿಶೇಷನು" ಸಣ್ಣದಾದ ಸರ್ಪರೂಪವನ್ನು ಧರಿಸಿ ಬಗಸೆಯಲ್ಲಿ ಬಿದ್ದನು. ಆಗ ಪಾಣಿನಿಯು ಗಾಬರಿಯಿಂದ, ಆಸರ್ಪವನ್ನು ಕೆಳಗೆ ಬಿಸಾಟು "ಕೋರ್ಭವಾನ್" ಅಂದರೆ "ನೀನುಯಾರು?" ಎಂಬರ್ಥವನ್ನು ಕೊಡತಕ್ಕ ಪ್ರಶ್ನೆಮಾಡಿದನು. ಇದು ಅಪಶಬ್ದವು. "ಕೋಭವಾನ್" ಎಂದಿರಬೇಕು. ಅಂಜಲೀ ಬದ್ಧನಾಗಿದ್ದ ಪಾಣಿನಿಯು ಬಗಸೆಯಿಂದ ಜಾರಿಕೆಳಗೆ ಬಿದ್ದ ಕಾರಣದಿಂದ ಆದಿಶೇಷನಿಗೆ "ಪತಂಜಲಿ" ಎಂಬ ಹೆಸರುಂಟಾಯಿತು. ಆಗ ಪತಂಜಲಿಯು, ನೀನು ಯಾರೆಂದು ತನ್ನನ್ನು ಪ್ರಶ್ನೆಮಾಡಿದ ಪಾಣಿನಿಯನ್ನು ಕುರಿತು "ಸರ್ಪೋಽಹಂ" ಅಂದರೆ, ನಾನು ಹಾವು! ಎಂದು ಪರಿಹಾಸವಾಗಿ ಪ್ರತ್ಯುತ್ತರ ವಿತ್ತನು.

ಆಗ್ಗೆ ಪಾಣಿನಿಗೆ ಗಾಬರಿಯು ಪರಿಹಾರವಾಗಿದ್ದಿತಾದ್ದರಿಂದ, ಪತಂಜಲಿಯು ವಾಕ್ಯವು ಅಪಶಬ್ದವೆಂಬುದನ್ನು ಗ್ರಹಿಸಿ, ‥ರೇಪಃಕ್ವಗತಃ? ಅಂದರೆ, ‥ಸರ್ಪೋ=ಽಸಂ'' ಎಂದಿರಬೇಕಾದ ಶಬ್ದವನ್ನು ‥ಸರ್ಪ್ಪೋಽಹಂ'' ಎಂದುಚ್ಚರಿಸಿದೆ ಯಲ್ಲಾ, ರೇಪ (ರಕಾರ) ವೆಲ್ಲಿಗೆ ಹೋಯಿತು ? ಎಂದು ಆಕ್ಷೇಪಿಸಿದನು. ಆಗ ಪತಂಜಲಿಯು ‥ತ್ವಯಾಪಹೃತಃ'' ಅಂದರೆ, ಕೋಭವಾನ್! ಎಂಬುದನ್ನು ಕೋರ್ಭವಾನ್ ಎಂದುಚ್ಚರಿಸಿದನೀನೇ ‥ರಕಾರ'' ವನ್ನು ಅಪಹರಿಸಿಬಿಟ್ಟಿರುವೆಯಲ್ಲವೇ? ಎಂದುಸಮಾಧಾನ ಹೇಳಿದನು.

ನಂತರ ಪಾಣಿನಿಯು, ತನ್ನ ಅಪಶಬ್ದ ಪ್ರಯೋಗಕ್ಕೂ, ಪರಮೇಶ್ವರನು ಪತಂಜಲೀ ರೂಪದಲ್ಲಿ ಪ್ರಸನ್ನನಾಗ ಸೂಕ್ಷ್ಮವಾಗಿ ಬುದ್ಧಿ ಹೇಳಿದುದಕ್ಕೂ, ಲಜ್ಜಾಸಂತೋಷಗಳನ್ನು ಹೊಂದಿ, ಪತಂಜಲಿಗೆ ಪ್ರದಕ್ಷಿಣ ನಮಸ್ಕಾರಗಳನ್ನಾಚರಿಸಿ, ಭಗವಂತನಾದ ಮಹೇಶ್ವರನನ್ನು ಕುರಿತು ಭಕ್ತಿಯುಕ್ತನಾಗಿ ಸ್ತೋತ್ರಮಾಡಿದನು. ತರುವಾಯ ಪತಂಜಲಿಯ ದಿವ್ಯಾನುಗ್ರಹ ಬಲದಿಂದ ವ್ಯಾಕರಣ ವನ್ನು ವಿರಚಿಸಿದನು.

ಶ್ಲೋ॥ ಪ್ರಥಮಂ ಪ್ರೋಚ್ಯತೇ ಬ್ರಾಹ್ಮಂ ದ್ವಿತೀಯ ಮೈಂದ್ರಮೇವಚ । ಯಾಮ್ಯಂಪ್ರೋಕ್ತಂ ತತೋರೌದ್ರಂ ವ್ಯಾಯವ್ಯಂವಾರುಣಾತಥಾ । ಸಾವಿತ್ರಂಚತಥಾ ಪ್ರೋಕ್ತಮಷ್ಟಮಂ ವೈಷ್ಣವಂತಥಾ ॥

(ಭವಿಷ್ಯ ಮಹಾಪುರಾಣ)

(೧) ಬ್ರಾಹ್ಮ (೨) ಐಂದ್ರ (೩) ಯಾಮ್ಯ (೪) ರೌದ್ರ (೫) ವಾಯವ್ಯ (೬) ವಾರುಣ (೭) ಸಾವಿತ್ರ (೮) ವೈಷ್ಣವ, ಎಂಬ ಹೆಸರುಗಳುಳ್ಳ ವ್ಯಾಕರಣಗಳಿರುವುವೆಂದು ಮೇಲೆ ಹೇಳಿದ ಪುರಾಣವಚನದಿಂದ ವ್ಯಕ್ತವಾಗುತ್ತದೆ. ಇದಲ್ಲದೆ, ವ್ಯಾಕರಣ ಭಾಷ್ಯಗಳು ಅನೇಕವಾಗಿರುತ್ತವೆ.

ಪತಂಜಲಿ ವಿರಚಿತ "ಮಹಾಭಾಷ್ಯ" ಕ್ಕೆ ಭರ್ತೃಹರಿ ವಿರಚಿತ

“ವಾಕ್ಯಪದೀಯ” ಕಾಶೀಪಂಡಿತ ವಿರಚಿತ “ ಹೇಲಾರಾಜೀಯ ” ಕಯ್ಯಟೋಪಾಧ್ಯಾಯಕೃತ “ಭಾಷ್ಯಪ್ರದೀಪ” ಅನ್ನಂಭಟ್ಟ ವಿರಚಿತ “ಮಿತಾಕ್ಷರಿ” ಭಟ್ಟೋಜೀದೀಕ್ಷಿತಕೃತ “ಶಬ್ದಕೌಮುದಿ, ಸಿದ್ಧಾಂತ ಕೌಮುದಿ” “ವೈಯಾಕರಣ ಸರ್ವಸ್ವ” “ಬೃಹದ್ವೈಯಾಕರಣ ಭೂಷಣ ಸಾರನಿರ್ಣಯ” “ಪ್ರೌಢಮನೋರಮಾ” ಹರಿದೀಕ್ಷಿತ ವಿರಚಿತ “ಶಬ್ದರತ್ನ” ನಾಗೋಜೀಭಟ್ಟಕೃತ “ಶಬ್ದೇಂದು ಶೇಖರ„ ಶಬ್ದಮಂಜೂಷ “ ಪರಿಭಾಷೇಂದು ಶೇಖರ ” ವಾಮನವಿರಚಿತ “ಕಾಶಿಕಾವೃತ್ತಿ” ಹರದತ್ತವಿರಚಿತ “ಪದಮಂಜರೀ” ಜ್ಞಾನೇಂದ್ರ ಸರಸ್ವತೀವಿರಚಿತ “ತತ್ವಬೋಧಿನಿ” ಮುಂತಾದ ಅನೇಕಾನೇಕ ವ್ಯಾಕರಣ ಗ್ರಂಥಗಳು ವಿರಚಿಸಲ್ಪಟ್ಟಿರುತ್ತವೆ. ಸಿದ್ಧಾಂತ ಕೌಮುದಿಯನ್ನು ಖಂಡಿಸುತ್ತ, ಜಗನ್ನಾಥಾಚಾರ್ಯನು, ಚಕ್ರಪಾಣಿ ಮುಂತಾದವರು, „ಸಿದ್ಧಾಂತರತ್ನಾಕರ, ಮನೋರಮಾಕುಚಮರ್ದನ” ಮುಂತಾದ ಖಂಡನ ಗ್ರಂಥಗಳನ್ನು ಬರೆದಿರುವರಾದಾಗ್ಯೂ „ಸಿದ್ಧಾಂತ ಕೌಮುದಿ” ಗೇ ವಿಶೇಷವ್ಯಾಪ್ತಿ ಯಿರುತ್ತದೆ.

ಇವಲ್ಲದೇ, ಭೋಜ, ಭಟ್ಟಾಚಾರ್ಯ, ಮಾಧವಾಚಾರ್ಯ, ವಾಚಸ್ಪತಿ ಮಿಶ್ರ, ಮುಂತಾದವರಿಂದ ವಿರಚಿಸಲ್ಪಟ್ಟ ವ್ಯಾಕರಣ ಭಾಷ್ಯಗಳು ಅನೇಕವಾಗಿರುವುವು. ನಿತ್ಯಬ್ರಹ್ಮಚಾರಿಯಾದ ಶ್ರೀ ಆಂಜನೇಯನು, ಸೂರ್ಯನ ಬಳಿಯಲ್ಲಿ ಒಂಭತ್ತು ವ್ಯಾಕರಣಗಳನ್ನು ಕಲಿತು “ನವವ್ಯಾಕರಣ ಪಂಡಿತ” ನೆಂಬ ಬಿರುದನ್ನು ಸಂಪಾದಿಸಿವನೆಂದು ಕೆಲವು ಇತಿಹಾಸಗಳಲ್ಲಿ ಸೂಚಿಸಲ್ಪಟ್ಟಿಧೆ. ಅಮರ, ಜೈನೇಂದ್ರಾದಿಗಳಿಂದ ವಿರಚಿಸಲ್ಪಟ್ಟ ಮತ್ತೆ ಕೆಲವು ವ್ಯಾಕರಣಗಳೂ ಅಲ್ಲಲ್ಲಿ ಕಾಣಬರುತ್ತವೆ. ಆದಾಗ್ಯೂ, ಈ ವ್ಯಾಕರಣಗಳೆಲ್ಲಕ್ಕಿಂತಲೂ „ಪಾಣಿನೀಯ„ (ವ್ಯಾಕರಣ) ವೇ ಎಲ್ಲರಿಂದಲೂ ಪ್ರಾಮುಖ್ಯವನ್ನು ಪಡೆದು „ವೇದಾಂಗ„ ವೆಂಬ ಖ್ಯಾತಿಯನ್ನು ಹೊಂದಿರುತ್ತದೆ.

ಛಂದಸ್ಸು:—ಋಗ್ಯಜುಸ್ಸಾಮಾಥರ್ವಗಳೆಂಬ ನಾಲ್ಕುವೇದಗಳಲ್ಲಿರುವ ಎಲ್ಲಾ ಮಂತ್ರಗಳಿಗೂ, "ಪಾದವಿಭಜನ, ಗುರು—ಲಘು, ಪ್ರಮಾಣ, ಮುಂತಾದ, ಅಕ್ಷರಪ್ರಸ್ತಾರ ವಿಧಿಗಳನ್ನು ಬೋಧಿಸತಕ್ಕ ನಿಘಂಟುವು. ಇದು ಪಿಂಗಳ (ಪಿಂಗಲ) ಮುನಿಯಿಂದ ವಿರಚಿಸಲ್ಪಟ್ಟಿತು. ವೇದದಲ್ಲುಕ್ತವಾಗಿರುವ "ಗಾಯತ್ರೀ ಮುಂತಾದ ಮಂತ್ರಗಳಿಗೇರ್ಪಟ್ಟಿರುವ "ಅನುಷ್ಟುಪ್, ತ್ರಿಷ್ಟುಪ್, ಬೃಹತೀ" ಮುಂತಾದ ಛಂದಗಳ ವಿವರವನ್ನು ಈ ನಿಘಂಟುವಿನಲ್ಲಿ ಚನ್ನಾಗಿ ತಿಳಿಯುಬಹುದು. ಇದಕ್ಕೆ ಅನೇಕ ವ್ಯಾಖ್ಯೆಗಗಳು (ಭಾಷ್ಯಗಳು) ವಿರಚಿಸಲ್ಪಟ್ಟಿರುವುವು. ಕಾಶ್ಯಪಛಂದಸ್ಸು, ಹಲಾಯುಧನಿಂದ ವಿರಚಿಸಲ್ಪಟ್ಟ, ಮೃತಸಂಜೀವನಿ, ಕೇದಾರಕವಿಕೃತ ವೃತ್ತರತ್ನಾಕರ, ಶ್ರೀನಾಥಕೃತ, ಧೀಶೋಧಿನೀ ಮುಂತಾದ ಅನೇಕವ್ಯಾಖ್ಯೆಗಳಿರುತ್ತವೆ.

ಛಂದಶ್ಶಾಸ್ತ್ರದಲ್ಲಿರುವ, ಅನೇಕಾನೇಕ "ವೃತ್ತಗಳ" ಕಲ್ಪನಾ ಕೌಶಲವೂ, "ಪ್ರಸ್ತಾರಗಳ" ರಚನಾ ಚಾತುರ್ಯವೂ, ಅತ್ಯಂತ ಮನೋಹರವಾಗಿರುತ್ತವೆ.

ಈ ಛಂದಶ್ಶಾಸ್ತ್ರಕರ್ತನಾದ ಪಿಂಗಳನಿಗೆ ಬದ್ಧವೈರಿಯಾದ "ಗರುಡನು" ಒಂದಾನೊಂದು ದಿವಸ, ಪಿಂಗಳನನ್ನು ಕೊಲ್ಲಬೇಕೆಂದು ಬಂದು, ಆತನಿಂದ ವಿರಚಿತವಾದ ಛಂದಪ್ರಸ್ತಾರಗಳನ್ನು ನೋಡಿ ಆಶ್ಚರ್ಯಚಕಿತನಾಗಿ ತನ್ನ ವಿರೋಧಭಾವವನ್ನು ತೊರೆದು ಹೊರಟು ಹೋದನೆಂಬ "ಐತಿಹ್ಯ" ವನ್ನು ಕೇಳಿದರೇ ಎಂತಹ ಪಾಮರರಿಗಾದರೂ, "ವಿದ್ಯಾಭಿಲಾಷೆ" ಹುಟ್ಟುತ್ತದೆ. ಛಂದಶ್ಶಾಸ್ತ್ರದಲ್ಲುಕ್ತವಾಗಿರುವ ವೃತ್ತಗಳಲ್ಲಿ ಕೆಲವನ್ನಿಲ್ಲಿ ಸೂಚಿಸುತ್ತೇನೆ.

ಚಾಪಕವೃತ್ತ, ಶಾರ್ದೂಲವಿಕ್ರೀಡಿತ ವೃತ್ತ, ಮತ್ತೇಭವೃತ್ತ, ಮತ್ತಕೋಕಿಲಾ, ಉತ್ಪಲಮಾಲಾ, ಭುಜಂಗಪ್ರಯಾತ, ಪಂಚಚಾಮರ, ಮಹಾಸ್ರಗ್ಧರ, ಉತ್ಸಾಹ, ಭಾಮಿನೀಷಟ್ಪದಿ, ವಾರ್ಧಿಕಷಟ್ಪದಿ, ಚೌಪದಿ, ಕಂದ, ಗೀತ, ಮಂಗಳಮಹಾಶ್ರೀ ಮುಂತಾದ ವೃತ್ತಗಳೂ, ಅವುಗಳ

ಗಣ, ಯತಿ, ಪ್ರಾಸ, ಲಕ್ಷಣಗಳೆಲ್ಲವೂ ಛಂದಶ್ಶಾಸ್ತ್ರದಲ್ಲಿ ಸವಿಸ್ತಾರವಾಗಿ ಹೇಳಲ್ಪಟ್ಟಿರುತ್ತವೆ.

(೪) ನಿರುಕ್ತ:— ವೇದದಲ್ಲಿರುವ ಶಬ್ದಗಳಿಗೂ, ಪದಗಳಿಗೂ ನಿರ್ಧರವಾದ ಅರ್ಥಗಳನ್ನು ತಿಳಿಸತಕ್ಕ ನಿಘಂಟುವು. ಅಂದರೇ, ವ್ಯಾಕರಣಕ್ಕೆ ಕೂಡಾ ಅಸಾಧ್ಯವಾದ, ಶಬ್ದಗಳೂ, ಪದಗಳೂ ವೇದದಲ್ಲಿರುತ್ತವೆ. ಅಂಥ ವುಗಳಿಗೆಲ್ಲಾ ನಿಷ್ಕರ್ಷೆಯಾದ ಅರ್ಥಗಳನ್ನು ‹‹ನಿರುಕ್ತ›› ದಲ್ಲಿ ತಿಳಿಯ ಬಹುದು. ಇದನ್ನು ವಿರಚಿಸಿದವರು ‹‹ಯಾಸ್ಕಮಹರ್ಷಿಯರು›› ಇದಕ್ಕೆ ಮೊದಲೇ ‹‹ಕಾಶ್ಯಪಮಹರ್ಷಿ›› ಎಂಬವರು ವಿರಚಿಸಿದ್ದ, ವೇದ ನಿಘಂಟುವಿಗಿದು ಭಾಷ್ಯದಂತೆ ಬಹುವಿಶದವಾಗಿರುತ್ತದೆ. ಇದರಲ್ಲಿ ಪದಕಾಂಡ, ಅರ್ಥಕಾಂಡ, ಗಳೆಂಬ ಎರಡು ವಿಭಾಗಗಳಿರುವುವು.

ಸ್ವತಃ ಭಾಷ್ಯರೂಪವಾಗಿರುವ ಈ ನಿರುಕ್ತಕ್ಕೆ, ದುರ್ಗಾಚಾರ್ಯ ನೆಂಬ ಪಂಡಿತರು ‹‹ಋಜುವ್ಯಾಖ್ಯೆ›› ಎಂಬ ವ್ಯಾಖ್ಯಾನವನ್ನು ಬರೆದಿರು ತ್ತಾರೆ. ಮತ್ತೂ ಕೆಲವು ವ್ಯಾಖ್ಯಾನಗಳಿರುತ್ತವೆ. ಯಾಸ್ಕಮಹರ್ಷಿ ಗಿಂತಲೂ ಪೂರ್ವಿಕರಾದ ‹‹ಶಾಕಪೂಣಿ›› ಮುಂತಾದಪಂಡಿತರು ವೇದಶಬ್ದ ಗಳ ನಿರ್ವಚನಗಳನ್ನು ಬಹು ಮಟ್ಟಿಗೆ ವ್ಯಾಖ್ಯಾನ ರೂಪವಾಗಿ ಪ್ರಕಾಶ ಪಡಿಸಿದ್ದುದರಿಂದ, ಅವುಗಳು ನಿರುಕ್ತಕಾರನಾದ, ಯಾಸ್ಕಾಚಾರ್ಯರಿಗೆ ಎಷ್ಟೋ ಸಹಾಯಕರವಾದುವು. ಈ ಸಹಾಯವನ್ನು ಹೊಂದಿದ ಯಾಸ್ಕಾ ಚಾರ್ಯರು ತಮಗೆ ಯಾರ ಬರವಣಿಗೆಗಳು ಬಹುದೂರ ಸಹಾಯಮಾಡಿ ದುವೋ ಅಂತಹ, ಶಾಕಪೂಣಿ ಮುಂತಾದ ಪೂರ್ವಾಚಾರ್ಯರನ್ನು ತಮ್ಮ ನಿರುಕ್ತಗ್ರಂಥದಲ್ಲಿ ಸೂಚಿಸಿ ಕೃತಜ್ಞರಾಗಿರುತ್ತಾರೆ. ನಿರುಕ್ತವು ಆದಿ ಯಲ್ಲಿ ೧೨ ಅಧ್ಯಾಯಗಳುಳ್ಳ ಗ್ರಂಥವಾಗಿದ್ದು ಈಗ ೧೪ ಅಧ್ಯಾಯಗಳಿಗೆ ವೃದ್ಧಿ ಹೊಂದಿರುತ್ತದೆ.

ವೇದಾಕ್ಷರ, ವೇದಶಬ್ದ, ವೇದವಾಕ್ಯಗಳಿಗೆ, ನಿರಂಕುಶವಾದ ಅರ್ಥ ವನ್ನು ಬೋಧಿಸತಕ್ಕ ನಿಘಂಟುಗಳಲ್ಲಿ ‹‹ನಿರುಕ್ತವು›› ಪ್ರಧಾನಸ್ಥಾನವನ್ನ ಲಂಕರಿಸಿರುತ್ತದೆ.

(೫) ಜ್ಯೋತಿಷ:— ಇದು ವೇದಾಂಗಗಳಲ್ಲಿ ಐದನೆಯದು.

ಈಗ್ರಂಥವು,. ಗ್ರಹನಕ್ಷತ್ರಾದಿಗಳ ಸ್ಥಿತಿಗತಿಗಳನ್ನು ಬೋಧಿಸುತ್ತದೆ.

ಶ್ಲೋ॥ ಲಕ್ಷಂತುಚತುರೋವೇದಾಃ । ಲಕ್ಷಂಭಾರತಮುಚ್ಯತೇ ।
ಕೃಷಿವಂಲಕ್ಷಯುತಂಚೈವ । ಚಾತುರ್ಲಕ್ಷಂತುಜ್ಯೋತಿಷಂ ॥

ಎಂಬ ಆರ್ಯೋಕ್ತಿಯಂತೆ, ಜ್ಯೋತಿಷವು, ನಾಲ್ಕುಲಕ್ಷ ಶ್ಲೋಕ ಪರಿಮಿತಿಯುಳ್ಳ ಗ್ರಂಥವು. ಜ್ಯೋತಿಶ್ಶಾಸ್ತ್ರವು, "ಗಣಿತ" ಹೋರಾ- "ಸಂಹಿತಾ", ರೂಪಗಳನ್ನು ವಹಿಸಿ ಮೂರು ವಿಭಾಗಗಳಾಗಿದ್ದು, ತರುವಾಯ, ಸಂಹಿತಾಭಾಗದಿಂದಹುಟ್ಟಿದ "ಕೇರಳ-ಶಕುನ" ಗಳೆಂಬ ಮತ್ತೆರಡು ಭಾಗಗಳು ಹೆಚ್ಚಾಗಿ, ಐದು ಭಾಗಗಳಾದುವು. ಪರಂತು ಈಗಪ್ರಚಾರದಲ್ಲಿರುವ ಹೆಸರುಗಳನ್ನನುಸರಿಸಿ, "ಸಿದ್ಧಾಂತ-ಜಾತಕ-ಮುಹೂರ್ತ-ಪ್ರಶ್ನೆ" ಗಳೆಂಬ ನಾಲ್ಕು ಭಾಗಗಳಾಗಿರುತ್ತವೆ.

ವೇದೋಕ್ತವಾದ, ಯಜ್ಞಾಗ್ನಿಹೋತ್ರಾದಿ ಕರ್ಮಗಳಿಗೆ ಈಶಾಸ್ತ್ರವು ಕಾಲನಿರ್ಣಯಮಾಡುತ್ತದೆ. ಆದ್ದರಿಂದ ಜ್ಯೋತಿಶ್ಶಾಸ್ತ್ರವು, ಐಹಿಕಾಮುಷ್ಮಿಕ ಸುಖದಾಯಕವಾದುದಾಗಿರುತ್ತದೆ. ವೇದಾಂಗಭೂತವಾಗಿರುವ ಈ ಶಾಸ್ತ್ರವು ಖಗೋಳ-ಭೂಗೋಳಗಳ ಸ್ಥಿತಿಗಳನ್ನು ಕುರಿತು ಬೋಧಿಸತಕ್ಕ ಉದ್ದೇಶದಿಂದ, ಆದಿಯಲ್ಲಿ ವಿರಚಿಸಲ್ಪಟ್ಟಿತು. ಈಗ ಕೆಲವುಮಂದಿ ಪಂಡಿತರಲ್ಲಿ ಆ ವಿಧವಾದ ಮುಖ್ಯಾಭಿಪ್ರಾಯವು ಮರೆಯಾಗಿ "ಜ್ಯೋತಿಶ್ಶಾಸ್ತ್ರ" ವೆಂದರೇ, ಮನುಷ್ಯರಿಗೆ ನೌಕರಿಯು ಹೆಚ್ಚಾಗುವುದು, ಸಂಬಳವು ಹೆಚ್ಚುವುದು, ಮುಂತಾದ ದ್ರವ್ಯಾರ್ಜನೆಗಳನ್ನು ಸೂಚಿಸತಕ್ಕ "ಫಲಶಾಸ್ತ್ರ" ವಾಗಿ ಪರಿಣಮಿಸಿರುತ್ತದೆ. ಆದಾಗ್ಯೂ ಮಹನೀಯರಾದ ಪಂಡಿತರನೇಕರು ಈಗಲೂ ಜ್ಯೋತಿಶ್ಶಾಸ್ತ್ರ ವಿಶಾರದರಾದ ಪೂರ್ವಾಚಾರ್ಯರ "ಸಿದ್ಧಾಂತಪದ್ಧತಿ" ಗಳನ್ನೇ ಅನುಸರಿಸಿ ನಡೆಯುತಕ್ಕವರಾಗಿರುತ್ತಾರೆ.

ಈ ಶಾಸ್ತ್ರವು, ಅತೀಂದ್ರಿಯ ದೃಷ್ಟಿಯುಳ್ಳ (ಅಂದರೇ ಜ್ಞಾನದೃಷ್ಟಿಯುಳ್ಳ) ಮಹರ್ಷಿಗಳಿಂದ ವಿರಚಿಸಲ್ಪಟ್ಟದಾದಕಾರಣ, ತೇಜೋರಾಶಿಗ

ಳಾದ ಸೂರ್ಯ—ಚಂದ್ರ—ಗ್ರಹ—ನಕ್ಷತ್ರಾದಿ ಖಗೋಳ ವಿದ್ಯಮಾನಗಳೆಲ್ಲವೂ ಇದರಲ್ಲಿ ಚನ್ನಾಗಿ ವ್ಯಕ್ತಗೊಳಿಸಲ್ಪಟ್ಟಿರುತ್ತವೆ.

ಈ ಶಾಸ್ತ್ರವನ್ನಭಿವೃದ್ಧಿ ಗೊಳಿಸಿದವರಲ್ಲಿ, ಸೂರ್ಯ, ಅತ್ರಿ, ವಶಿಷ್ಠ, ಪರಾಶರ, ವ್ಯಾಸ, ಕಶ್ಯಪ, ನಾರದ, ಗರ್ಗ, ಮರೀಚಿ, ಅಂಗೀರಸ, ಮನು, ರೋಮಕ, ಪೌಲಿಶ, ಚ್ಯವನ, ಯವನ, ಭೃಗು, ಶೌನಕಾದಿಗಳು, ಮುಖ್ಯಸ್ಥರಾಗಿರುತ್ತಾರೆ.

ಪರಮ ತಪೋಧನರಾದ ಋಷಿಗಳು, ಆಕಾಶದಲ್ಲಿ ಕಾಣಿಸುವ, ತೇಜೋರೂಪಗಳಾದ ಗ್ರಹಗೋಳಗಳನ್ನು ಪರೀಕ್ಷಿಸಿ, ಅವುಗಳ, ಚಾರ—ಪ್ರಕೃತಿ—ವಿಕೃತಿ—ಪ್ರಮಾಣ—ವರ್ಣ—ಕಿರಣದ್ಯುತಿ—ಸಂಸ್ಥಾನ—ಅಸ್ತಮಯ—ಉದಯ—ಮಾರ್ಗ—ಮಾರ್ಗಾಂತರ—ವಕ್ರ—ಅನುವಕ್ರ—ಉಪಗ್ರಹ—ಸಮಾಗಮ—ಉಲ್ಕಾಪತನ — ಧೂಮಕೇತುಸಂಭವ — ನಕ್ಷತ್ರಪತನ—ಗ್ರಹಣ— ಪೂರ್ಣಿಮ—ಅಮಾವಾಸ್ಯ ಪರ್ವ ಕಾರಣ—ವರ್ಷಪತನ — ಮೇಘತಾಡನ — ಸೌದಾಮಿನೀಲತಾಸಂದರ್ಶನ—ವಿದ್ಯುತ್ಕಣ ಪತನ, ಇಂದ್ರ ಧನುರ್ಲಕ್ಷಣ ಮುಂತಾದ ಖಗೋಳ ವಿಚಿತ್ರಗಳನ್ನೆಲ್ಲವನ್ನೂ, ಸಾಂಗೋಪಾಂಗವಾಗಿ ಬೋಧಿಸತಕ್ಕ ಸೂರ್ಯಸಿದ್ಧಾಂತಾದಿ ಉದ್ಗ್ರಂಥಗಳನ್ನು ವಿರಚಿಸಿ, ಲೋಕೋಪಕಾರಾರ್ಥವಾಗಿ ಪ್ರಕಟಿಸಿರುತ್ತಾರೆ.

ಒಬ್ಬೊಬ್ಬ ಮಹರ್ಷಿಯೂ, ಒಂದೊಂದು "ಗೋಳ" ವನ್ನು ಪರೀಕ್ಷಿಸುವುದಕ್ಕಾಗಿ, ತನ್ನ ಜೀವಿತವನ್ನೇ ಧಾರೆಯೆರೆದು, ಆಯಾಗೋಳಗಳ ಸ್ಥಿತಿಗತಿಗಳನ್ನು ಕಂಡುಹಿಡಿದು ಅವುಗಳಿಗೆ ಹೆಸರುಗಳನ್ನು ನಿರ್ಧರಿಸಿರುತ್ತಾರೆ.

ದಿನಕ್ರಮವನ್ನೋ, ಅಥವಾ ಸಂವತ್ಸರ ಕ್ರಮವನ್ನೋ ಅನುಸರಿಸಿದ ಗತಿ (ಸಂಚಾರ) ಪದ್ಧತಿಯುಂಟಾಗಿರುವ ಗೋಳಗಳಿಗೆ "ಗ್ರಹಗೋಳಗಳೆಂತ" ಲೂ, ಅಂತಹ ಗತಿ ಕ್ರಮವಿಲ್ಲದ ಗೋಳಗಳಿಗೆ "ನಕ್ಷತ್ರ" ಗಳೆಂತಲೂ, ಹೆಸರಿಟ್ಟಿರುತ್ತಾರೆ.

ಗೋಳಗಳಲ್ಲಿ, ಸೂರ್ಯ— ಚಂದ್ರ—ಅಂಗಾರಕ—ಬುಧ—ಬೃಹ

ಸ್ಪತಿ—ಶುಕ್ರ—ಶನೈಶ್ಚರ— [ರಾಹು—ಕೇತು] ಗೋಳಗಳು ಮುಖ್ಯ ವಾದುವುಗಳಾಗಿರುತ್ತವೆ.

ಅಶ್ವಿನಿ—ಭರಣಿ— ಕೃತ್ತಿಕ, ರೋಹಿಣಿ— ಮೃಗಶಿರ—ಆರುದ್ರ ಪುನರ್ವಸು—ಪುಷ್ಯಮಿ, ಆಶ್ಲೇಷ, ಮಖ, ಪೂರ್ವ ಫಲ್ಗುನಿ — ಉತ್ತರ ಫಲ್ಗುನಿ — ಹಸ್ತ — ಚಿತ್ತ — ಸ್ವಾತಿ— ವಿಶಾಖ—ಅನೂರಾಧಾ—ಜ್ಯೇಷ್ಠ—ಮೂಲ—ಪೂರ್ವಾಷಾಢಾ— ಉತ್ತರಾಷಾಢಾ—ಶ್ರವಣಂ—ಧನಿಷ್ಠಾ ಶತಭಿಷಂ—ಪೂರ್ವಾಭಾದ್ರ—ಉತ್ತರಾಭಾದ್ರ— ರೇವತಿಗಳೆಂಬ ಹೆಸರುಗಳಿಂದೊಡಗೂಡಿರುವ ನಕ್ಷತ್ರಗೋಳಗಳು ಮುಖ್ಯವಾದುವುಗಳಾಗಿ ರುತ್ತವೆ.

ಇದಲ್ಲದೆ, ತಿಮಿಮಂಡಲ—ಬ್ರಹ್ಮಮಂಡಲ—ಸುವರ್ಣಾಶ್ರಮ ಮಂಡಲ— ಕಾಲಪುರುಷಮಂಡಲ— ಮೃಗವ್ಯಾಥಮಂಡಲ— ಅರ್ಣವಯಾನ ಮಂಡಲ—ಶುನೀಮಂಡಲ—ಹೃದಸರ್ಪಮಂಡಲ—ಸಪ್ತಋಷಿ ಮಂಡಲ, ಯುಗಮಂಡಲ— ತ್ರಿಶಂಕುಮಂಡಲ—ಶಿಂಶುಮಾರ ಮಂಡಲ— ತಕ್ಷಕ ಮಂಡಲ—ಮಯೂರಮಂಡಲ—ದಕ್ಷಿಣ ಮೀನಮಂಡಲ—ಕಾಶ್ಯಪೀಯ ಮಂಡಲ—ಧ್ರುವಮಾತೃಮಂಡಲ ಮುಂತಾದ ಅನೇಕ ಮಂಡಲಗಳನ್ನು ಸ ಹಾಕಲಡುಹಿಡಿದು, ಅವುಗಳ ಸ್ಥಿತಿಗತಿಗಳನ್ನು ವ್ಯಕ್ತವಾಗಿ ತಿಳಿಸಿರುತ್ತಾರೆ.

ಪೂರ್ವಾಚಾರ್ಯ ಪ್ರಣೀತವಾದ ಜ್ಯೋತಿರ್ಗಣಿತ ಶಾಸ್ತ್ರದಲ್ಲಿ ಅಂತ ರ್ಭೂತವಾಗಿರುವ, ಸಂಕಲನ—ವ್ಯವಕಲನ--ಗುಣಕಾರ--ಭಾಗಹಾರ—ವರ್ಗ—ವರ್ಗಮೂಲ— ಘನ—ಘನಮೂಲ— ವಕ್ರಗಣಿತ—ಉದ್ದೇಶಗ ಣಿತ—ತ್ರೈರಾಶಿಕ—ಪಂಚರಾಶಿಕ—ಛಾಯಾಗಣಿತಾದಿ ಮಹೋನ್ನತಗಣಿ ತವಿದ್ಯೆಗಳಲ್ಲಿ ಈಗಿನ ವಿಶ್ವವಿದ್ಯಾಲಯಗಳಲ್ಲಿ ಬೋಧಿಸಲ್ಪಡುವ ಗಣಿತವು, ತಿಲಾಂಶವಾಗಿರುತ್ತದೆ. ರೇಖಾಗಣಿತ (ಜಿಯಾಮಿಟ್ರಿ) ಬೀಜಗಣಿತ (ಆಲ್ಜಬ್ರಾ) ತ್ರಿಕೋಣಮಿತಿ ಗಣಿತ (ಟ್ರಿಗ್ನಾಮೆಟ್ರಿ) ಗೋಳೀಯ ತ್ರಿಕೋಣ ಮಿತಿ ಗಣಿತ, (ಸ್ಪಿಯರಿಕಲ್ ಟ್ರಿಗ್ನಾಮೆಟ್ರಿ) ಮುಂತಾದ ಗಣಿತ ಭಾಗಗಳ ನ್ನೆಲ್ಲಾ ಎಷ್ಟೋ ಕಾಲಕ್ಕೆ ಹಿಂದೆಯೇ ನಮ್ಮ ಪೂರ್ವಾಚಾರ್ಯರು ಪ್ರಕಾಶ ಪಡಿಸಿರುತ್ತಾರೆ.

[ ಆಕಾಶದಲ್ಲಿರುವ ಸೂರ್ಯಚಂದ್ರ ನಕ್ಷತ್ರಾದಿ ಗ್ರಹಗೋಳಗಳಿಗೆ

ಆಯಾ ಹೆಸರುಗಳು ಬರುವುದಕ್ಕೇನು ಕಾರಣ ? ಅವುಗಳನ್ನು ಕಂಡುಹಿಡಿದವರ್ಯಾರು ? ಆಯಾ ಗೋಳಗಳಲ್ಲಿರುವ ವಿಶೇಷಗಳೇನು ? ಎಂಬ ವಿವರಗಳನ್ನು ಸವಿಸ್ತಾರವಾಗಿ ತಿಳಿಸತಕ್ಕ "ಜ್ಯೋತಿಶ್ಶಾಸ್ತ್ರ ರಹಸ್ಯ" ವೆಂಬ ಗ್ರಂಥವು ಆನಂದಚಂದ್ರಿಕಾ ಗ್ರಂಥಮಾಲೆಯಲ್ಲಿ ಪ್ರತ್ಯೇಕವಾಗಿ ಪ್ರಕಟಿಸಲ್ಪಡುತ್ತದೆ. ]

ತರುವಾಯ, ಜಾತಕ ಸಂಬಂಧವಾದ ಗ್ರಂಥಗಳು ಮಿತಿಮೀರಿಹುಟ್ಟಿರುತ್ತವೆ. ಅವುಗಳಲ್ಲಿ ಕೆಲವು ಮಾತ್ರ ವಿಲ್ಲಿ ಸೂಚಿಸಲ್ಪಡುತ್ತವೆ.

ಜಾತಕಾಭರಣ, ಸಿದ್ಧಾಂತರಹಸ್ಯ, ಕೇರಳ, ಪಾರಾಶರ್ಯ, ಕಾರಿಕಾವಳಿ, ಜಾತಕ ಸಾರಾವಳಿ, ಜ್ಯೋತಿಷರತ್ನಾವಳಿ, ಕಾಲಾಮೃತ, ಗ್ರಹಲಾಘವ, ಕಾಶ್ಯಪ ಸಂಹಿತೆ, ಬೃಹಜ್ಜಾತಕ, ದೈವಜ್ಞವಿಲಾಸ, ವೃದ್ಧವಾಸಿಷ್ಠ, ಮುಹೂರ್ತದರ್ಪಣ, ಕಾಲಪ್ರಕಾಶಿಕೆ, ಮುಹೂರ್ತಮಾರ್ತಾಂಡ, ನಕ್ಷತ್ರಕಳಾವಿಲಾಸ, ಗಣಕಾನಂದ, ಮಲ್ಲಿನಾಥೀಯ, ಮಾಧವೀಯ, ಜ್ಯೋತಿಷಸಂಹಿತೆ, ಜ್ಯೋತಿಷಾರ್ಣವ, ಸಿದ್ಧಾಂತಶೇಖರ, ಪ್ರಭಾಕರೀಯ ಮುಂತಾದುವುಗಳು.

ಭೃಗು ಸಂಹಿತೆಯನ್ನು ಅನೇಕಮಂದಿ ಜ್ಯೋತಿಷ್ಕರು ಈಗಲೂ ವ್ಯವಹಾರದಲ್ಲಿಟ್ಟುಕೊಂಡಿರುತ್ತಾರೆ.

ಇನ್ನೂ ಈ ಆಧುನಿಕಕಾಲದ ಪಂಡಿತರಿಂದ ವಿರಚಿಸಲ್ಪಟ್ಟ ಗ್ರಂಥಗಳನೇಕವಾಗಿರುತ್ತವೆ.

ಪ್ರಪಂಚದಲ್ಲಿರುವ ಪ್ರಾಣಿಕೋಟಿಗಳಿಗೆ, ಪ್ರಕಾಶ(ಬೆಳಕು) ವುಂಟಾಗುವುದಕ್ಕಾಗಿ, ತೇಜೋಮಯವಾದ ಗ್ರಹಗೋಳಗಳು ಭಗವಂತನಿಂದ ನಿರ್ಮಿಸಲ್ಪಟ್ಟಿರುತ್ತವೆ. ಇವುಗಳಿಂದ, ಲಗ್ನ — ಮುಹೂರ್ತ — ಅಹೋರಾತ್ರ—ಪಕ್ಷ—ಮಾಸ—ಋತು— ಅಯನ—ಸಂವತ್ಸರಾದಿಗಳೇರ್ಪಟಿರುತ್ತವೆ.

ಈ ಕಾಲಕ್ರಮವು ಮನುಷ್ಯಕೋಟಿಯ ನಿತ್ಯನೈಮಿತ್ತಿಕಾದಿ ಕರ್ಮಗಳನ್ನು ನಿರ್ಣಯಿಸುವುದಕ್ಕಾಗಿ ಉಪಯೋಗಿಸುತ್ತದೆ.

ಈ ವಿಚಾರವೆಲ್ಲವೂ, ಜ್ಯೋತಿಶ್ಶಾಸ್ತ್ರದಲ್ಲಿ ವಿಶದವಾಗಿದೆ. ಆದುದ

ರಿಂದ ಜ್ಯೋತಿಶ್ಶಾಸ್ತ್ರವು ವೇದಾಂಗ ವಾಗಿ ಮಹರ್ಷಿಗಳಿಂದ ಪರಿಗಣಿಸಲ್ಪಟ್ಟಿದೆ.

ಈ ಶಾಸ್ತ್ರಕ್ಕೆ ಅನೇಕ ವ್ಯಾಖ್ಯಾನಗಳಿರುತ್ತವೆ. ಅವುಗಳಲ್ಲಿ, ಸೂರ್ಯ ಸಿದ್ಧಾಂತವೂ, ಆರ್ಯಭಟ—ಭಾಸ್ಕರಾಚಾರ್ಯರಾದಿಯಾಗಿ „ಸಿದ್ಧಾಂತಗಣಿತ ವಿಶಾರದರಿಂದ ವಿರಚಿಸಲ್ಪಟ್ಟಿರುವ ವ್ಯಾಖ್ಯಾನಗಳೂ ಪ್ರಾಮುಖ್ಯತೆಯನ್ನು ವಹಿಸಿರುತ್ತವೆ.

(೬) ಕಲ್ಪ:— ವೇದದಲ್ಲಿ ಹೇಳಲ್ಪಟ್ಟಿರುವ, ಯಜ್ಞಾದಿ ಕರ್ಮಗಳನ್ನು ಯಾವರೀತಿಯಾಗಿ ಆಚರಿಸಬೇಕೆಂಬ ವಿವರವನ್ನು ಬೋಧಿಸತಕ್ಕ ಶಾಸ್ತ್ರಕ್ಕೆ ಕಲ್ಪವೆಂದು ಹೆಸರು. ಇದನ್ನು ವಿರಚಿಸಿದವರು, ಆಶ್ವಲಾಯನ—ಆಪಸ್ತಂಭ— ಬೋಧಾಯನ— ಕಾತ್ಯಾಯನ— ಭಾರದ್ವಾಜ, ದ್ರಾಹ್ಯಾಯನ, ಹಿರಣ್ಯಕೇಶಿ ಮುಂತಾದವರು.

## —:ಶ್ರೌತ ಸ್ಮಾರ್ತ ಕರ್ಮ ಕರ್ಮಗಳ ವಿವರ:—

ಶ್ರುತಿ, ಯೆಂದರೇ ವೇದವು. ಶ್ರುತಿಯಲ್ಲಿ ಉಕ್ತವಾಗಿರುವ ಕರ್ಮಗಳಿಗೆ "ಶ್ರೌತಕರ್ಮಗಳೆಂದು" ಹೆಸರು. ಈ ಕರ್ಮಗಳನ್ನು ಆಚರಿಸತಕ್ಕ ವಿಧಾನಗಳು "ಕಲ್ಪಸೂತ್ರ" ಗಳಲ್ಲಿ ವಿವರಿಸಲ್ಪಟ್ಟಿರುತ್ತವೆ. ಕಲ್ಪಸೂತ್ರಗಳನ್ನು ಅಧ್ಯಯನಮಾಡಿ, ತದನುಸಾರವಾಗಿ ಕರ್ಮಗಳನ್ನುಮಾಡಿಸತಕ್ಕವರಿಗೆ "ಶ್ರೌತಿ" ರೆಂದುಹೆಸರು. ಈಸೂತ್ರಗಳಲ್ಲಿ "ಗೃಹ್ಯಸೂತ್ರ" ಗಳೆಂತಲೂ, "ಧರ್ಮಸೂತ್ರ" ಗಳೆಂತಲೂ, ಎರಡು ಭಾಗಗಳಾಗಿರುತ್ತವೆ. ಗೃಹ್ಯಸೂತ್ರಗಳಲ್ಲಿ, ವಿವಾಹೋಪ ನಯನಾದಿ ಷೋಡಶ (ಹದಿನಾರು) ಕರ್ಮಗಳ ವಿಧಿ ವಿಧಾನಗಳು ಉಕ್ತವಾಗಿರುತ್ತವೆ. ಈ ತೆರನಾದ ಕರ್ಮಗಳಿಗೆ „ಸ್ಮಾರ್ತಕರ್ಮ„ ಗಳೆಂದು ಹೆಸರು. ಋಗ್ವೇದಕಲ್ಪಸೂತ್ರಗಳಿಗೆ „ಆಶ್ವಲಾಯನ ಸೂತ್ರ„ ಗಳೆಂತಲೂ, ಯಜುರ್ವೇದ ಕಲ್ಪಸೂತ್ರಗಳಿಗೆ „ಆಪಸ್ತಂಬ ಸೂತ್ರ„ ಗಳೆಂತಲೂ, ಸಾಮವೇದ ಕಲ್ಪಸೂತ್ರಗಳಿಗೆ „ಛಾಂದೋಗ್ಯ ಸೂತ್ರ„ ಗಳೆಂತಲೂ, ಅಧರ್ವವೇದ

ಕಲ್ಪಸೂತ್ರಗಳಿಗೆ "ದೂರ್ವಾಸ ಸೂತ್ರ" ಗಳೆಂತಲೂ ಹೆಸರುಗಳುಂಟಾಗಿರುತ್ತವೆ. ಅಂದರೇ ಆಯಾ ಸೂತ್ರಗಳನ್ನು ವಿರಚಿಸಿದ ಋಷಿಗಳ ಹೆಸರುಗಳೇ ಆಯಾ ಸೂತ್ರಗಳಿಗೆ ಇಡಲ್ಪಟ್ಟಿರುತ್ತವೆ.

—:ಅಥರ್ವಣವೇದದ ಮಂತ್ರವಿಶೇಷ:—

ಈ ವೇದಕ್ಕೆ "ಅಥರ್ವವೇದ" ವೆಂಬುದೇ ಶಾಸ್ತ್ರೀಯವಾದ ಹೆಸರಾಗಿದ್ದಾಗ್ಯೂ, "ಅಥರ್ವಣವೇದ" ವೆಂಬ ಹೆಸರೇ ವಿಶೇಷವಾದ ಪ್ರಾಚುರ್ಯವನ್ನು ಹೊಂದಿರುತ್ತದೆ. ಆದ್ದರಿಂದ ಈ ವೇದದ ಹೆಸರನ್ನು ಪಂಡಿತರು ಎರಡು ವಿಧವಾಗಿಯೂ ಉಪಯೋಗಿಸಿರುತ್ತಾರೆ.

ಅಥರ್ವಣವೇದದಲ್ಲಿ, ಶತ್ರುಸಂಹಾರ ಮುಂತಾದ "ಮಾರಣಹೋಮ" ಗಳನ್ನಾಚರಿಸುವ ವಿಧಾನಗಳು ವಿಶೇಷವಾಗಿ ವಿಧಿಸಲ್ಪಟ್ಟಿರುತ್ತವೆ. ಶ್ಯೇನಯಾಗ, (ಅಂದರೇ, ಹದ್ದು ಗಳನ್ನು ಕೊಂದು ಮಾಡತಕ್ಕ ಯಾಗ) ಮುಂತಾದ ಅನೇಕ "ಅಭಿಚಾರ ಕರ್ಮಗಳಿಗೆ" ಸಂಬಂಧಿಸಿದ, ಜಪಹೋಮಾದಿಗಳನ್ನು ಈ ವೇದವು ಅನರ್ಗಳವಾಗಿ ತಿಳಿಸುತ್ತದೆ.

ಭದ್ರಕಾಳಿ, ಮಹೇಶ್ವರೀ ಮುಂತಾದ ದೇವತೆಗಳನ್ನು ಸಂಬೋಧಿಸಿ ಆಹ್ವಾನಮಾಡತಕ್ಕ ಸ್ತೋತ್ರಗಳು, ಪ್ರಾರ್ಥನೆಗಳು, ಅವುಗಳಿಗೆ ಸಂಬಂಧಿಸಿದ ಆಕರ್ಷಣ, ಸ್ತಂಭನ—ಮೋಹನ—ಮಾರಣ, ವಶೀಕರಣ, ಉಚ್ಚಾಟನಾದಿ ಮಂತ್ರತಂತ್ರಗಳೂ ಸಾವಿರಗಟ್ಟಳೆಯಾಗಿ ವಿರಚಿಸಲ್ಪಟ್ಟಿರುತ್ತವೆ. ಇದನ್ನೆಲ್ಲಾ ಕಲಿತವರಿಗೆ ಆಗಮಿಕ ರೆಂದು ಹೆಸರು. ಈ ಕಾಲದಲ್ಲಿ ದೇವಾಲಯಗಳಲ್ಲಿ ನಡೆಯತಕ್ಕ ರಥೋತ್ಸವ ಕಾಲದಲ್ಲಿ ಈತೆರನಾದ ಪಂಡಿತರೇ "ಆಗಮಿಕ" ರೆಂಬ ಹೆಸರಿನಿಂದ ಅಲ್ಲಿನಕಾರ್ಯ ಕಲಾಪಗಳನ್ನು ನಡೆಯಿಸುವರಾಗಿರುತ್ತಾರೆ. ಇವರು ಅಥರ್ವಣವೇದದ ಅಲ್ಪಸ್ವಲ್ಪಮಂತ್ರ ಸೂತ್ರಗಳನ್ನು ಸ್ವಯವಾಗಿ ತಿಳಿದೋ, ಅಥವಾ ಪರಂಪರಾಗತವಾದ "ಬಾಯಿಪಾಠ" ಮಾಡಿಯೋ "ಆಗಮಿಕ" ರೆಂಬ ಹೆಸರನ್ನು ಪಡೆದಿರುತ್ತಾರೆ.

ಪರಂತು, ಯಜುರ್ವೇದ— ಸಾಮವೇದ— ಅಥರ್ವಣವೇದಗಳೆಂಬ ಈ ಮೂರು ವೇದಗಳಲ್ಲಿಯೂ, ಋಗ್ವೇದ ಮಂತ್ರಗಳು ಯಥೇಷ್ಟವಾಗಿ ಸೇರಿರುತ್ತವೆ.

## —:ಸ್ತ್ರೀಯರು ವಿರಚಿಸಿದ ವೇದಮಂತ್ರಗಳ ವಿವರ:—

ವಿಶ್ವವಾರಾ:—ಅತ್ರಿಮುನಿ ವಂಶದಲ್ಲಿ ಜನಿಸಿದ ಈ ಸಾಧ್ವೀ ರತ್ನವು, ಋಗ್ವೇದದ, ಐದನೆಯ ಮಂಡಲದ, ಎರಡನೆಯ ಅನುವಾಕದ ಇಪ್ಪತ್ತೆಂಟನೆಯ ಸೂಕ್ತವನ್ನು ವಿರಚಿಸಿದಳು.

ವಾಗ್ದೇವಿ:—ಈಕೆ, ಋಗ್ವೇದ ಸಂಹಿತೆಯ, ಹತ್ತನೆಯ ಮಂಡಲದ, ನೂರ ಇಪ್ಪತ್ತೈದನೆಯ ಸೂಕ್ತದಲ್ಲಿನ ಎಂಟು ಋಕ್ಕುಗಳನ್ನು (ಮಂತ್ರಗಳನ್ನು) ವಿರಚಿಸಿದಳು.

ಅಪಾಲಾ:—ಈಕೆ, ಋಗ್ವೇದದ ಎಂಟನೆಯ ಮಂಡಲದ ತೊಂಬತ್ತೊಂದನೆಯ ಸೂಕ್ತದಲ್ಲಿನ ಎಂಟು ಋಕ್ಕುಗಳನ್ನು ವಿರಚಿಸಿದಳು.

ಲೋಪಾಮುದ್ರೆ:—ವಿದರ್ಭರಾಜನ ಪುತ್ರಿಯೂ, ಅಗಸ್ತ್ಯ ಮಹಾಮುನಿಯ ಪತ್ನಿಯೂ ಆದ ಈ ಸಾಧ್ವೀ ರತ್ನವು, ಋಗ್ವೇದದ, ಪ್ರಥಮ ಮಂಡಲದ, ನೂರ ಎಪ್ಪತ್ತೊಂಬತ್ತನೆಯ ಸೂಕ್ತದಲ್ಲಿನ ಎರಡು ಋಕ್ಕುಗಳನ್ನು ವಿರಚಿಸಿದಳು.

ಅದಿತಿ:—ಕಶ್ಯಪ ಮಹರ್ಷಿಯ ಪತ್ನಿಯಾದ ಈ ಕಾಂತಾರತ್ನವು, ಋಗ್ವೇದ ಸಂಹಿತೆಯ, ನಾಲ್ಕನೆಯ ಮಂಡಲದ, ಎಂಬತ್ತನೆಯ ಸೂಕ್ತದಲ್ಲಿನ ಮೂರು ಋಕ್ಕುಗಳನ್ನು ವಿರಚಿಸಿದಳು.

ರೋಮಶೀ:—ಈಕೆ, ಋಗ್ವೇದ ಸಂಹಿತೆಯ, ಹತ್ತನೆಯ ಮಂಡಲದ, ಹತ್ತನೆಯ ಸೂಕ್ತದಲ್ಲಿನ ಐದುಮಂತ್ರಗಳನ್ನು ವಿರಚಿಸಿದಳು.

ಊರ್ವಶಿ:— ಅಪ್ಸರ ಸ್ತ್ರೀಯರಲ್ಲಿ ಅಗ್ರಗಣ್ಯಳಾದ ಈಕೆ, ಋಗ್ವೇದ ಸಂಹಿತೆಯ ಹತ್ತನೆಯ ಮಂಡಲದ, ತೊಂಬತ್ತೈದನೆಯ ಸೂಕ್ತದಲ್ಲಿನ ಆರು ಮಂತ್ರಗಳನ್ನು ವಿರಚಿಸಿದಳು.

ಶಶ್ವತೀ:—ಅಂಗಿರನ ಪುತ್ರಿಯೂ, ಅಸಂಗರಾಜನ ಪತ್ನಿಯೂ

ಆದ ಈಕೆ, ಋಗ್ವೇದ ಸಂಹಿತೆಯ, ಎಂಟನೆಯ ಮಂಡಲದ, ಪ್ರಥಮ ಸೂಕ್ತದಲ್ಲಿನ ಮುವ್ವತ್ತುನಾಲ್ಕನೆಯ ಮಂತ್ರವನ್ನು ವಿರಚಿಸಿದಳು.

ಘೋಷಾ:—ಈ ನಾರೀ ಶಿರೋರತ್ನವು, ಋಗ್ವೇದದ ಹತ್ತನೆಯ ಮಂಡಲದ, ಮುವ್ವತ್ತೊಂಭತ್ತು ಮತ್ತು ನಲವತ್ತನೆಯ ಸೂಕ್ತಗಳನ್ನು ವಿರಚಿಸಿದಳು.

ಸೂರ್ಯೆ:—ಈ ವನಿತಾ ತಿಲಕವು, ಋಗ್ವೇದದ, ಹತ್ತನೆಯ ಮಂಡಲದ, ಎಂಬತ್ತೈದನೆಯ ಸೂಕ್ತವನ್ನು ವಿರಚಿಸಿದಳು.

ಶ್ರದ್ಧೆ:—ಈಕೆ, ಋಗ್ವೇದದ, ಹತ್ತನೆಯ ಮಂಡಲದ, ನೂರೈವತ್ತೊಂದನೆಯ ಸೂಕ್ತವನ್ನು ವಿರಚಿಸಿದಳು.

ಜುಹು:— ಇಂದ್ರಾಣೀ:— ಶಚೀ:—ಗೋಧಾ:— ಈ ವಿದುಷೀ ಮಣಿಯರು ಪರಸೆಕ್ರಮವಾಗಿ ಋಗ್ವೇದದ, ಹತ್ತನೆಯ ಮಂಡಲದ, ನೂರಐಂಭತ್ತನೆಯ—ನೂರನಲವತ್ತೈದನೆಯ—ನೂರಐವತ್ತೊಂಬತ್ತನೆಯ—ನೂರಮುವ್ವತ್ತುನಾಲ್ಕನೆಯ, ಸೂಕ್ತಗಳನ್ನು ವಿರಚಿಸಿದರು

ರೋಮಶೆ:— ಈಕ, ಋಗ್ವೇದ ಸಂಹಿತೆಯ, ಪ್ರಥಮ ಮಂಡಲದ, ನೂರಇಪ್ಪತ್ತಾರನೆಯ ಸೂಕ್ತದಲ್ಲಿನ ಏಳನೆಯ ಮಂತ್ರವನ್ನು ವಿರಚಿಸಿದಳು.

ವಾಗ್ದೇವಿ:— ತತ್ವವಿದ್ಯಾ ವಿಶಾರದೆಯಾದ ಈ ಸ್ತ್ರೀರತ್ನವು, ಋಗ್ವೇದ ಸಂಹಿತೆಯ, ಹತ್ತನೆಯ ಮಂಡಲದ, ನೂರಇಪ್ಪತ್ತೈದನೆಯ ಸೂಕ್ತವನ್ನು ವಿರಚಿಸಿದಳು.

ಇಂತು ಸ್ತ್ರೀಯರಿಂದ ವಿರಚಿಸಲ್ಪಟ್ಟ ವೇದ ಮಂತ್ರಗಳು ಅಸಂಖ್ಯಾತ ವಾಗಿರುತ್ತವೆ.

ಇವರಂತೆಯೇ ವಿಶ್ವವಿಖ್ಯಾತ ಚರಿತ್ರೆಯರಾದ, ಗಾರ್ಗೀ—ಮೈತ್ರೇಯಿ — ಕಾತ್ಯಾಯನೀ — ಸುಲಭೆ, ಮುಂತಾದ ಬ್ರಹ್ಮವಾದಿನಿಯರು ಉಪನಿಷತ್ತುಗಳಲ್ಲಿ ಪ್ರಖ್ಯಾತಿ ಪಡೆದಿರುತ್ತಾರೆ. ಅವರ ಚರಿತ್ರೆಗಳು, ಉಪನಿಷತ್ಪ್ರಕರಣದಲ್ಲಿ ವಿಸ್ತಾರವಾಗಿ ವರ್ಣಿಸಲ್ಪಡುತ್ತವೆ.

## ಉಪವೇದಗಳು. ೧

ಋಗ್ಯಜುಸ್ಸಾಮಾಥರ್ವಣಗಳೆಂಬ ನಾಲ್ಕು ವೇದಗಳಿಗೆ ಸಂಬಂಧಿಸಿದ, ಆಯುರ್ವೇದ—ಧನುರ್ವೇದ— ಗಾಂಧರ್ವವೇದ— ಅರ್ಥವೇದಗಳೆಂಬ ನಾಲ್ಕು ಉಪವೇದಗಳಿರುವುವು.

ಆಯುರ್ವೇದವು, ಋಗ್ವೇದದಿಂದ ಹುಟ್ಟಿದುದು. ಧನುರ್ವೇದವು ಯಜುರ್ವೇದದಿಂದ ಹುಟ್ಟಿದುದು. ಗಾಂಧರ್ವವೇದವು ಸಾಮವೇದದಿಂದ ಹುಟ್ಟಿದುದು. ಅರ್ಥವೇದವು ಅಥರ್ವಣ ವೇದದಿಂದ ಹುಟ್ಟಿದುದು.

ಇವುಗಳಲ್ಲಿ ಒಂದೊಂದೂ ಏನೇನು ವಿಷಯಗಳನ್ನು ಬೋಧಿಸುತ್ತವೆಯೋ ಆ ವಿವರವನ್ನಿಲ್ಲಿ ಸಂಗ್ರಹಿಸುತ್ತೇನೆ.

## (೧) ಆಯುರ್ವೇದ.

"ಶರೀರ ಮಾದ್ಯಂಖಲು ಧರ್ಮಸಾಧನಂ" ಎಂಬಂತೆ ಧರ್ಮ, ಅರ್ಥ, ಕಾಮ ಮೋಕ್ಷಗಳೆಂಬ ನಾಲ್ಕು ಬಗೆಯಾದ ಪುರುಷಾರ್ಥಗಳಲ್ಲಿ ಯಾವುದನ್ನು ಸಾಧಿಸಬೇಕಾದರೂ, ಶರೀರಾರೋಗ್ಯವು ಚನ್ನಾಗಿರಬೇಕು. ಶ್ರೀ ಮಹಾಭಾರತಾರಣ್ಯ ಪರ್ವದಲ್ಲಿ, ಯಕ್ಷನು ಧರ್ಮರಾಜನನ್ನು ಕುರಿತು „ಲಾಭಾನಾಮುತ್ತಮಂಕಿಂಸ್ಯಾತ್?„ ಎಲೈ ಧರ್ಮನಂದನನೇ! ಲಾಭಗಳೊಳಗೆ ಶ್ರೇಷ್ಟವಾದ ಲಾಭವಾವುದೆಂದು ಪ್ರಶ್ನಿಸಲು „ಲಾಭಾನಾಂ ಶ್ರೇಷ್ಠಮಾರೋಗ್ಯಂ„ ಲಾಭಗಳಲ್ಲಿ ಆರೋಗ್ಯವೇ ಶ್ರೇಷ್ಠವಾದ ಲಾಭವೆಂದು ಧರ್ಮನಂದನನು ಪ್ರತ್ಯುತ್ತರವಿತ್ತನು. ಯುಕ್ತಾಹಾರ, ಯುಕ್ತವಿಹಾರಗಳೆಂಬ ಆರೋಗ್ಯ ನಿಯಮಗಳನ್ನು ಮೀರಿ ನಡೆಯುವುದರಿಂದ ಪ್ರಾಣಿಗಳಿಗೆ ಬಗೆಬಗೆಯಾದ ವ್ಯಾಧಿಗಳುಂಟಾಗುತ್ತವೆ. ಭಗವದಾಜ್ಞಾರೂಪವಾದ ಅಹಿಂಸಾದಿ ಧರ್ಮಮಾರ್ಗಗಳನ್ನು ಲಕ್ಷ್ಯಮಾಡದೇ ಸ್ವೇಚ್ಛಾನುಸಾರವಾಗಿ ನಡೆಯುವುದರಿಂದ ಶರೀರಾರೋಗ್ಯವು ಕೆಟ್ಟು, ಸಹಿಸಲಶಕ್ಯವಾದ ಅನೇಕಾನೇಕ ರೋಗಜಾಲಗಳು ಪ್ರಾಪ್ತಿಸುತ್ತವೆ.

"ಪೂರ್ವಜನ್ಮಕೃತಂಪಾಪಂ ವ್ಯಾಧಿರೂಪೇಣಬಾಧತೇ" ಎಂಬಂತೆ ಈಜನ್ಮದಲ್ಲಿ ಮಾಡಿದ ಪಾಪದಿಂದಲೂ, ಪೂರ್ವಜನ್ಮದಲ್ಲಿ ಮಾಡಿದ ಪಾಪಶೇಷದಿಂದಲೂ, ಪ್ರಾಣಿಕೋಟಿಗೆ ಚಿತ್ರವಿಚಿತ್ರವಾದ ವ್ಯಾಧಿಗಳುಂಟಾಗುತ್ತವೆ.

ಇಂತು ಪಾಪಪ್ರಾಚುರ್ಯದಿಂದ ವ್ಯಾಧಿಗ್ರಸ್ತರಾಗಿ ಪರಿತಪಿಸುತ್ತಲಿರುವ ಪ್ರಾಣಿಕೋಟಿಗಳನ್ನು, ಅನುಗ್ರಹಿಸಲೆಳಸಿ, ಅಕಾರಣ ಕರುಣಾಪರಾಯಣನಾದ ಭಗವಂತನು, ಪರಮ ವಿಜ್ಞಾನಸಂಪನ್ನರಾದ ಋಷಿಮುನಿಗಳ ಮೂಲಕವಾಗಿ "ಆಯುರ್ವೇದ" ವೆಂಬ ಆರೋಗ್ಯಶಾಸ್ತ್ರವನ್ನು ಪ್ರಚಾರಗೊಳಿಸಿದನು.

ಆಯುರ್ವೇದವನ್ನು ಮೊದಲು, ಶತಾನಂದನಾದ ಬ್ರಹ್ಮನು, ದಕ್ಷಬ್ರಹ್ಮನಿಗುಪದೇಶಮಾಡಿದನು. ದಕ್ಷಬ್ರಹ್ಮನು ಸೂರ್ಯಪುತ್ರರಾದ ಅಶ್ವಿನೀದೇವತೆಗಳಿಗೆ ಬೋಧಿಸಿದನು. ಅಶ್ವಿನೀದೇವತೆಗಳು ಸಹಸ್ರಾಕ್ಷನಾದ ಇಂದ್ರನಿಗುಪದೇಶಮಾಡಿದರು. ಆತನಿಂದ ಕ್ರಮಕ್ರಮವಾಗಿ, ಆತ್ರೇಯ, ಅಗ್ನಿವೇಶ, ಭೇಡ, ಜಾತುಕರ್ಣ, ಪರಾಶರ, ಧನ್ವಂತರಿ, ಚರಕ, ಸುಶ್ರುತಾದಿ ಋಷಿಶ್ರೇಷ್ಠರಲ್ಲಿಯೂ, ಅವರ ಶಿಷ್ಯಪ್ರಶಿಷ್ಯರಲ್ಲಿಯೂ, ಮಿತ್ರರಲ್ಲಿಯೂ ಆಯುರ್ವೇದವು ಪ್ರಚಾರಕ್ಕೆ ಬಂದಿತು. ಇಂತು ದೇಹಾರೋಗ್ಯವನ್ನುಂಟುಮಾಡತಕ್ಕ ಆಯುರ್ವೇದವು, ಶಲ್ಯತಂತ್ರ-ಶಾಲಾಕ್ಯತಂತ್ರ-ಕಾಯಚಿಕಿತ್ಸೆ, ಭೂತವಿದ್ಯೆ-ಕೌಮಾರಭೃತ್ಯ-ಅಗದತಂತ್ರ-ರಸಾಯನತಂತ್ರ ವಾಜೀಕರಣ ತಂತ್ರಗಳೆಂಬ ಎಂಟು ಭಾಗಗಳುಳ್ಳದ್ದಾಗಿದೆ. ಮತ್ತು ವೇದಾಂಗಗಳಲ್ಲೊಂದಾಗಿ ಪ್ರಾಣಿಕೋಟಿಗೆ ಅತಿ ಮುಖ್ಯವಾದುದಾಗಿದೆ.

ಎಂಟು ಭಾಗಗಳನ್ನು ಕುರಿತು ವಿಚಾರಿಸೋಣ.

(೧) ಶಲ್ಯತಂತ್ರ:—ಲೋಹಸಂಬಂಧವಾದ ಕತ್ತಿ ಮುಂತಾದುವುಗಳಿಂದಲೂ, ವೃಕ್ಷಸಂಬಂಧವಾದ ಕೋಲು ಮುಂತಾದವುಗಳಿಂದಲೂ, ಕಲ್ಲು, ಮಣ್ಣು, ಗಾಜು ಮುಂತಾದ ಬಗೆಬಗೆಯಾದ ಪದಾರ್ಥಗಳಿಂದಲೂ ಶರೀರಕ್ಕುಂಟಾಗುವ ವ್ರಣಗಳನ್ನು, ಶಸ್ತ್ರ, ಕ್ಷಾರ, ಅಗ್ನಿ, ಸಹಾಯಗಳಿಂದ ಚಿಕಿತ್ಸೆಮಾಡಿ ಬಾಧೆಯನ್ನು ಪರಿಹರಿಸತಕ್ಕ ವಿಧಾನವನ್ನು ತಿಳಿಸುವ ಭಾಗವು.

(೨) ಶಾಲಾಕ್ಯತಂತ್ರ:—ಕಣ್ಣು, ಮೂಗು, ಕಿವಿಮುಂತಾದ ಅವಯವಗಳಲ್ಲಿ ಹುಟ್ಟುವ ವ್ಯಾಧಿಗಳಿಗೆ, ಚಿಕಿತ್ಸೆಗಳನ್ನು ಬೋಧಿಸುವ ಭಾಗವು.

(೩) ಕಾಯಚಿಕಿತ್ಸೆ:— ವಾತ, ಪಿತ್ತ, ಶ್ಲೇಷ್ಮಗಳ ಪ್ರಾಬಲ್ಯದಿಂದ ಶರೀರದ ಎಲ್ಲಾ ಭಾಗಗಳಲ್ಲಿಯೂ ಉಂಟಾಗತಕ್ಕ, ಜ್ವರ, ಛಳಿ, ಅತಿಸಾರ,

ವಾತ, ಕ್ಷಯಾದಿ ಸಮಸ್ತ ವ್ಯಾಧಿಗಳಿಗೂ ಚಿಕಿತ್ಸೆಗಳನ್ನು ಬೋಧಿಸುವ ಭಾಗವು.

(೪) ಭೂತವಿದ್ಯೆ:—ದೇವ, ಗಂಧರ್ವ, ಯಕ್ಷ, ರಾಕ್ಷಸ, ಪಿತೃ, ಪಿಶಾಚ, ನಾಗ ನರಕಾದಿ ದುಷ್ಟಗ್ರಹ ರೋಗಗಳಿಗೆ ಪರಿಹಾರಗಳನ್ನು ಬೋಧಿಸುವ ಭಾಗವು.

(೫) ಕೌಮಾರಭೃತ್ಯ:—ಮಕ್ಕಳನ್ನು ಕಾಪಾಡುವ ವಿಧಾನವನ್ನೂ, ತಾಯಿಯ ಸ್ತನ್ಯಪಾನವನ್ನು ವೃದ್ಧಿಗೊಳಿಸುವ ವಿಧಾನವನ್ನೂ, ಮಕ್ಕಳಿಗೆ ಸಂಭವಿಸತಕ್ಕ ಸಮಸ್ತ ರೋಗಗಳನ್ನೂ ಪರಿಹಾರಮಾಡತಕ್ಕ ವಿಧಾನಗಳನ್ನೂ ಚನ್ನಾಗಿ ತಿಳಿಸುವ ಭಾಗವು.

(೬) ಅಗದತಂತ್ರ:—ಹಾವು ಚೇಳು ಮುಂತಾದ ವಿಷಜಂತುಗಳಿಂದಲೂ, ನಾಭಿ, ಪಾಷಾಣ, ಮುಂತಾದ ವಿಷಪದಾರ್ಥಗಳಿಂದಲೂ ಉಂಟಾಗತಕ್ಕ ಪ್ರಾಣೋಪದ್ರವಗಳನ್ನು ಪರಿಹಾರಮಾಡತಕ್ಕ ವಿಧಾನಗಳನ್ನು ಬೋಧಿಸುವ ಭಾಗವು.

(೭) ರಸಾಯನತಂತ್ರ:—ವೃದ್ಧತ್ವಾದಿ ಅನೇಕ ಕಾರಣಗಳಿಂದುಂಟಾಗುವ ಬಲಹೀನತೆಯನ್ನೂ, ವ್ಯಾಧಿಬಾಧೆಗಳನ್ನೂ ಪರಿಹರಿಸಿ, ಆಯುಷ್ಯವನ್ನೂ, ಬುದ್ಧಿಯನ್ನೂ, ಬಲವನ್ನೂ ವೃದ್ಧಿಪಡಿಸಿ ಶರೀರಾರೋಗ್ಯವನ್ನುಂಟುಮಾಡುವ ವಿಧಾನಗಳನ್ನು ಬೋಧಿಸುವ ಭಾಗವು.

(೮) ವಾಜೀಕರಣತಂತ್ರ:—ಅನೇಕ ಕಾರಣಗಳಿಂದ ಸಂಭವಿಸತಕ್ಕ ನಪುಂಸಕತ್ವಾದಿ ವೀರ್ಯ ನಷ್ಟಗಳನ್ನು ಪರಿಹರಿಸಿ, ಧಾತುವೃದ್ಧಿಯನ್ನುಂಟುಮಾಡತಕ್ಕ, ಮದನಕಾಮೇಶ್ವರೀ ಮುಂತಾದ ಔಷಧಗಳನ್ನೂ, ಇತರವಿಧವಾದ ಉಪಚಾರಗಳನ್ನೂ ತಿಳಿಸುವ ಭಾಗವು.

ಇಂತು ಎಂಟು ವಿಧಗಳಿಂದ ಆರೋಗ್ಯಮಾರ್ಗವನ್ನು ಬೋಧಿಸುತ್ತಿರುವ "ಆಯುರ್ವೇದ" ರಹಸ್ಯವನ್ನು ಸ್ತ್ರೀಪುರುಷರಾದಿಯಾಗಿ ಎಲ್ಲರೂ ತಿಳಿದಿರಬೇಕಾದುದು ಮುಖ್ಯ ಕರ್ತವ್ಯವು.

"ಧನ್ವಂತರಿ" ಮುಂತಾದ ವೈದ್ಯವಿದ್ಯಾ ವಿಶಾರದರಿಂದ ಪ್ರಚಾರಕ್ಕೆ ತರಲ್ಪಟ್ಟಿರುವ ಆಯುರ್ವೇದ ಸಮ್ಮತವಾದ, ಔಷಧಗಳಲ್ಲಿ ಕೆಲವನ್ನಿಲ್ಲಿ ಸೂಚಿಸುತ್ತೇನೆ.

(೧) ಭಸ್ಮಗಳು, (೨) ಚೂರ್ಣಗಳು, (೩) ಲೇಹ್ಯಗಳು, (೪) ರಸಾಯನಗಳು, (೫) ಘೃತಗಳು, (೬) ತೈಲಗಳು (೭) ದ್ರಾವಕಗಳು, (೮) ಘುಟಿಕೌಷಧಗಳು, (೯) ಅಂಜನಗಳು (೧೦) ಕಷಾಯಗಳು (೧೧) ಆಸವಗಳು.

ಭಸ್ಮಗಳು:—ರಸಭಸ್ಮ—ಸ್ವರ್ಣಭಸ್ಮ—ರಜತಭಸ್ಮ, ನಾಗಭಸ್ಮ, ತಾಮ್ರಭಸ್ಮ, ವಂಗಭಸ್ಮ, ಶೃಂಗಭಸ್ಮ, ಅಭ್ರಕಭಸ್ಮ, ಸೌವೀರಭಸ್ಮ—ತಾಳಕಭಸ್ಮ—ಶಿಲಾಜಿತ್‌ಭಸ್ಮ— ಇಂಗಿಲೀಕಭಸ್ಮ, ಪಾಷಾಣಭಸ್ಮ—ಲೋಹಭಸ್ಮ, ಮುಂತಾದ ಭಸ್ಮಗಳು.

"ಚೂರ್ಣಗಳು:—" ಮಹಾಲವಂಗಾದಿ ಚೂರ್ಣ, ಅಗ್ನಿಕುಮಾರ ಚೂರ್ಣ, ಚಿತ್ರಕಾದಿ ಚೂರ್ಣ, ಏಲಾದಿಚೂರ್ಣ, ತಾಳೀಶಾದಿ ಚೂರ್ಣ, ಕರ್ಪೂರಾದಿ ಚೂರ್ಣ, ಅಶ್ವಗಂಧಾದಿ ಚೂರ್ಣ, ಪಂಚಬಾಣ ಚೂರ್ಣ, ನಾಗರಾದಿ ಚೂರ್ಣ, ಭಲ್ಲಾತಕೀ ಚೂರ್ಣ, ಅಮೃತವಲ್ಲೀ ಚೂರ್ಣ, ಮುಂತಾದುವುಗಳು.

"ಲೇಹ್ಯಗಳು:—" ಬಿಲ್ವಾದಿಲೇಹ್ಯ, ಫರಂಗ್ಯಾದಿಲೇಹ್ಯ, ಅಶ್ವಗಂಧಾದಿಲೇಹ್ಯ, ಮದನಕಾಮೇಶ್ವರೀ ಲೇಹ್ಯ, ಮರೀಚ್ಯಾದಿಲೇಹ್ಯ, ಖಂಡಾರ್ದ್ರಿತ ಲೇಹ್ಯ, ಕುಸುಮಾಕರ ಲೇಹ್ಯ, ತ್ರಿಕಟುಕಲೇಹ್ಯ, ಬಿಬಾರ್ದ್ಧಕಲೇಹ್ಯ, ಮುಂತಾದಲೇಹ್ಯಗಳು.

"ರಸಾಯನಗಳು:—" ಜಾಬೀರ ರಸಾಯನ, ನಾರಿಕೇಳರಸಾಯನ, ಸುದರ್ಶನ ರಸಾಯನ, ವಿಡಂಗಾದಿ ರಸಾಯನ, ಅಮೃತ ರಸಾಯನ, ಲೋಹ ರಸಾಯನ, ನವಲೋಹ ರಸಾಯನ, ಮುಂತಾಧ ರಸಾಯನಗಳು.

"ಘೃತಗಳು:—ಅರವಿಂದಘೃತ, ಪಟ್ಫಲಘೃತ, ತಂಡುಲೀಯಕಘೃತ, ಕದಳೀಕಂದಘೃತ, ದೂರ್ವಾದಿಘೃತ, ಕಲ್ಯಾಣಘೃತ, ಮುಂತಾದ ಘೃತಗಳು.

"ತೈಲಗಳು:—" ಬಿಲ್ವಾದಿತೈಲ, ಪಂಚಾರ್ಕತೈಲ, ಭೃಂಗರಾಜತೈಲ, ಭೃಂಗಾಮಲಕತೈಲ, ಲಾಕ್ಷಾದಿತೈಲ, ವಿಷಮುಷ್ಟಿತೈಲ, ಕೇತಕೀತೈಲ, ಸ್ನೇಹಾರ್ಕತೈಲ, ಭೂನಿಂಬಾದಿತೈಲ, ಕರ್ಪೂರತೈಲ, ಜ್ಯೋತಿಷ್ಮತೀತೈಲ, ಮುಂತಾದತೈಲಗಳು.

"ದ್ರಾವಕಗಳು:—" ಚಿತ್ರಮೂಲಾದಿ ದ್ರಾವಕ, ಏಲಾದಿದ್ರಾವಕ, ಜೀರಕಾದಿದ್ರಾವಕ, ಶಂಖದ್ರಾವಕ, ಮಹಾದ್ರಾವಕ ಮುಂತಾದುವುಗಳು.

"ಘುಟಿಕಾ೦ಷಧಗಳು:—" ವಸಂತ ಕುಸುಮಾಕರ, ಪೂರ್ಣಚಂದ್ರೋದಯ, ಬಾಲಚಂದ್ರೋದಯ, ಮಹಾ ವಾತರಾಕ್ಷಸ, ವಾತರಾಕ್ಷಸ, ವಿಷ್ಣುಚಕ್ರರಸ, ಕಾಲಕೂಟರಸ, ಸೂತಿಕಾಭರಣ, ಪ್ರಚಂಡಭೈರವಿ, ಸನ್ನಿಪಾತಭೈರವಿ, ವಾತಾಗ್ನಿಕುಮಾರ, ಬಾಲಸೂರ್ಯೋದಯ, ರಾಜಮೃಗಾಂಕರಸ, ಪುಷ್ಪಧನ್ವಂತ್ರಿರಸ, ಕ್ಷಯಕುಠಾರರಸ, ಮಹಾಜ್ವರಾಂಕುಶ, ಅಜೀರ್ಣಪಂಚಾನನ, ಲಕ್ಷ್ಮೀವಿಲಾಸರಸ, ಆನಂದಭೈರವೀರಸ, ರಸಭೂಪತಿ, ಸೂರ್ಯಾವರ್ತಿ, ಜೋಗಸೀರಸ, ಶ್ವಾಸಕುಠಾರರಸ, ಗುಲ್ಮರೋಗಾಂತಕರಸ, ವೀರಭದ್ರರಸ, ಜಯಮಂಗಳರಸ, ನಾರಾಯಣರಸ, ಸಂಜೀವನೀರಸ, ಮುಂತಾದ ಘುಟಿಕಾ೦ಷಧ (ಮಾತ್ರೆ) ಗಳು.

"ಅಂಜನಗಳು:—" ಸೌವೀರಾಂಜನ, ನಾರಿಕೇಳಾಂಜನ, ನೀಲಾಂಜನ, ಗರುಡಾಂಜನ, ಕರ್ಪೂರಾಂಜನ, ಬಾಲಸೂರ್ಯೋದಯಾಂಜನ, ಕಲ್ಲೋತಾಂಜನ, ಭೈರವಾಂಜನ, ವಿಜ್ಞಾನಾಂಜನ, ಪ್ರಕಾಶಾಂಜನ, ಸುಧಾಂಜನ, ಲಲಿತಾಂಜನ, ಅಮೃತರಸಾಂಜನ, ಹರಿದ್ರಾಂಜನ, ಮಾಯಾಂಜನ, ನೇತ್ರಾಮೃತಾಂಜನ, ಮುಂತಾದ ಅಂಜನಗಳು.

"ಕಷಾಯಗಳು:—" ದಶಮೂಲಕಷಾಯ, ಗುಡೂಚ್ಯಾದಿ ಕಷಾಯ, ಕಟ್ಫಲಾದಿಕಷಾಯ, ಪಟೋಲಾದಿ ಕಷಾಯ, ಭೂನಿಂಬಾದಿ ಕಷಾಯ, ತ್ರಿಫಲಾಕಷಾಯ ಏರಂಡಾದಿಕಷಾಯ, ಕುಳೀರಾದಿಕಷಾಯ, ಹರೀತಕೀಕಷಾಯ, ಅಮೃತವಲ್ಲೀ ಕಷಾಯ, ಸುಗಂಧರಾಜ ಕಷಾಯ ಮುಂತಾದ ಕಷಾಯಗಳು.

"ಆಸವಗಳು:—" ಗೋಕ್ಷುರಾಸವ, ದ್ರಾಕ್ಷಾಸವ. ಪದ್ಮಾಸನ, ಮಲ್ಲಿಕಾಸವ, ಸುನಾಮುಖೀಪತ್ರಾಸವ, ತಿಂತ್ರಿಣ್ಯಾಸವ, ಶರ್ಕರಾಸವ, ಮಹಾಸವ ಮುಂತಾದ ಆಸವಗಳು.

ಈ ಔಷಧಗಳನ್ನು ಉಪಯೋಗಿಸುವಪದ್ಧತಿ, ಇವುಗಳನ್ನು ತಯಾರಿಸುವಪದ್ಧತಿ, ಗುಣಾಗುಣಗಳು, ಮತ್ತು ಆಯುರ್ವೇದಕ್ಕೆ ಸಂಬಂಧಿಸಿದ

" ಪಾಕಶಾಸ್ತ್ರ ವಿಧಾನಗಳು ,, ಮುಂತಾದ ವಿಷಯಗಳೆಲ್ಲವೂ ಈ ಗ್ರಂಥದ ಹದಿನಾರನೇ ಕಳಾಭಾಗದಲ್ಲಿ ವಿವರಿಸಲ್ಪಟ್ಟಿರುತ್ತವೆ.

## —: ಧನುರ್ವೇದ :—

ಈ ವೇದದಲ್ಲಿ, ರಾಜ್ಯಪಾಲನೆ ಮಾಡುವುದಕ್ಕೆ ಸಹಾಯೋಪಕರಣಗಳಾದ " ಶಸ್ತ್ರಾಸ್ತ್ರಗಳ ನಿರ್ಮಾಣ, ಪ್ರಯೋಗ, ಉಪಸಂಹಾರ ಮುಂತಾದ ರಹಸ್ಯಗಳೆಲ್ಲವೂ ಚನ್ನಾಗಿ ವಿವರಿಸಲ್ಪಟ್ಟಿರುತ್ತವೆ. ಇದನ್ನು ವಿರಚಿಸಿದವರು, "ವಿಶ್ವಾಮಿತ್ರರು,, ಮುಂತಾದವರು. ಶತಘ್ನಿ (ಫಿರಂಗಿ)ಖಡ್ಗ (ಕತ್ತಿ) ಶೂಲ, ತುಪಾಕಿ ಮುಂತಾದ ಆಯುಧಗಳ ವಿವರವೂ ರಥ, ಗಜ, ತುರಗ ಪದಾತಿಗಳೆಂಬ, ಚತುರಂಗ ಬಲಗಳನ್ನು ನಡೆಯಿಸುವ ವಿಧಾನವೂ ಮಂತ್ರಬಲದಿಂದ,ಆಗ್ನೇಯಾಸ್ತ್ರ, ವಾರುಣಾಸ್ತ್ರ, ಸೂರ್ಯಾಸ್ತ್ರ ಮುಂತಾದುವುಗಳನ್ನು ಪ್ರಯೋಗಿಸುವ ವಿಧಾನವೂ, ಸವಿಸ್ತಾರವಾಗಿ, ಹೇಳಲ್ಪಟ್ಟಿದೆ. ಇದು ರಾಜ್ಯಪಾಲನ ಧುರೀಣರಾದ ಕ್ಷತ್ರಿಯರಿಗೆ ಅತ್ಯಂತೋಪಯುಕ್ತವಾದದು.

## —: ಗಾಂಧರ್ವವೇದ :—

ಈ ವೇದದಲ್ಲಿ ಪರಮಾತ್ಮನ "ನಾದಬ್ರಹ್ಮಾತ್ಮಕ ವೈಭವ,, ವನ್ನು ಸ—ರಿ—ಗ—ಮ—ಪ—ದ—ನಿ,, ಎಂಬ ಸಪ್ತಸ್ವರಗಳ ಮೂಲಕವಾಗಿ ತಿಳಿಸುವುದಲ್ಲದೆ, ರಾಗ ಪ್ರಸ್ತಾರ, ತಾಳಪ್ರಸ್ತಾರ, ಮೇಳಪ್ರಸ್ತಾರ ಗಮಕ, ಮುಂತಾದುವುಗಳೊಂದೊಡಗೂಡಿದ ಸಂಗೀತ ವಿದ್ಯೆಯನ್ನು ಪರಿಷ್ಕಾರವಾಗಿ ಬೋಧಿಸುತ್ತದೆ. ಇದಕ್ಕೆ ಸಂಬಂಧಿಸಿದ ಮಿಕ್ಕ ವಿಷಯಗಳೆಲ್ಲವೂ, ಈ ಗ್ರಂಥದ ಹತ್ತನೇ ಕಳಾಭಾಗದಲ್ಲಿ "ಗಾನವಿದ್ಯೆ,, ಎಂಬ ಪ್ರಕರಣದಲ್ಲಿ ಸವಿಸ್ತಾರವಾಗಿ ವಿವರಿಸಲ್ಪಟ್ಟಿರುತ್ತದೆ.

## —: ಅರ್ಥವೇದ :—

ಈ ವೇದದಲ್ಲಿ, ಧನಸಂಪಾದನೆಗೆ ಬೇಕಾದ ವಿಷಯಗಳೆಲ್ಲವೂ ತಿಳಿಸಲ್ಪಟ್ಟಿದೆ. ಇದನ್ನು ಸಾಮಾನ್ಯವಾಗಿ "ಅರ್ಥಶಾಸ್ತ್ರ,, ವೆಂದು ಕರೆಯ...

ತ್ತಾರೆ. ಶಿಲ್ಪಿಶಾಸ್ತ್ರವು ಇವರಿಂದ ಹುಟ್ಟಿದ ಒಂದಾನೊಂದು ಶಾಖೆಯಾಗಿರುತ್ತದೆ. ಈ ವೇದವನ್ನೇ ಆಧಾರವಾಗಿಟ್ಟುಕೊಂಡು, ಅನೇಕ ನೂತನಾಂಶಗಳನ್ನು ಸೇರಿಸಿ, ಕಾಮಂದಕ. ಕೌಟಿಲ್ಯ, ಚಾಣಕ್ಯಾದಿ ರಾಜ್ಯಶಾಸ್ತ್ರ ಧುರಂಧರರನೇಕರು ತಮ್ಮ ತಮ್ಮ ಹೆಸರುಗಳಿಂದೊಡಗೂಡಿದ ಅರ್ಥಶಾಸ್ತ್ರಗಳನ್ನು ಅನೇಕವಾಗಿ ವಿರಚಿಸಿರುತ್ತಾರೆ, "ಚತುಷ್ಷಷ್ಠಿ ಕಳಾರಹಸ್ಯ," ಅಂದರೇ ಅರವತ್ತುನಾಲ್ಕು ವಿದ್ಯೆಗಳರಹಸ್ಯವೆಲ್ಲವೂ, ಅರ್ಥಶಾಸ್ತ್ರದಲ್ಲಿ ಅಂತರ್ಭೂತವಾಗಿರುತ್ತವೆ. ಆ ವಿವರವನ್ನಿಲ್ಲಿ ಸೂಚಿಸುತ್ತೇನೆ.

## ೬೪ ವಿದ್ಯೆಗಳು—ಅರ್ಥಶಾಸ್ತ್ರ.

ಶ್ಲೋ॥ ನೀತಿಶಾಸ್ತ್ರಾಮೃತಂಧೀಮಾನ್ ಅರ್ಥಶಾಸ್ತ್ರ ಮಹೋದಧೇಃ ।
ಸಮುದ್ದಧ್ರೇ ನಮಸ್ತಸ್ಮೈ ವಿಷ್ಣುಗುಪ್ತಾಯ ವೇಧಸೇ ॥
(ಕಾಮಂದಕ ನೀತಿಸಾರ.)

ಅರ್ಥಶಾಸ್ತ್ರಜ್ಞಾನವು ಪ್ರಪಂಚ ವ್ಯವಹಾರಕ್ಕೆ ಅತ್ಯಂತಾವಶ್ಯಕವಾದುದು. ಮನುಷ್ಯರಿಗೆ ಹಸಿವು ಬಾಯಾರಿಕೆಗಳು ಇರುವವರೆಗೂ ಅರ್ಥಶಾಸ್ತ್ರಜ್ಞಾನವು ಇದ್ದೇತೀರಬೇಕು. ಅರ್ಥಶಾಸ್ತ್ರವನ್ನು ಕುರಿತ ಪ್ರಾಥನ್ಯಾಸಗಳನ್ನು ಬರೆಯುವದಕ್ಕೆ ಮೊದಲು, "ಅರ್ಥಶಾಸ್ತ್ರ" ದ ಉಪಯೋಗವನ್ನು ಕೊಂಚಮಟ್ಟಿಗೆ ಬರೆಯುತ್ತೇನೆ. ಏಕೆಂದರೆ, ಅರ್ಥಶಾಸ್ತ್ರವೆಂದರೇನೋ ಅದರ ಪರಿಚಯುನೇ ಇಲ್ಲದವರು ಅನೇಕರಿರುತ್ತಾರೆ. ಮತ್ತು ಕೆಲವರು:—

ಅರ್ಥಾನಾಮಾರ್ಜನೇದುಃಖಂ ಆರ್ಜಿತಾನಾಂಚರಕ್ಷಣೇ ।
ನಾಶೇದುಃಖಂ ವ್ಯಯೇದುಃಖಂ ಧಿಗರ್ಥಂದುಃಖಭಾಜನಂ ॥

ಎಂಬೀ ಶ್ಲೋಕದ ಸತ್ಯಾರ್ಥವನ್ನರಿಯದೆ ಅನೇಕರು ಅರ್ಥಶಾಸ್ತ್ರವನ್ನು ವಿಚಾರಮಾಡುವುದೇ ನಿಷೇಧವಾಗಿ ಭಾವಿಸಿರುತ್ತಾರೆ. ಸನಾತನರಾದ ನಮ್ಮ ಪೂರ್ವಿಕರು ಪುರುಷಾರ್ಥಗಳನ್ನು ಧರ್ಮಶಾಸ್ತ್ರಗಳು, ಅರ್ಥಶಾಸ್ತ್ರಗಳು, ಕಾಮಶಾಸ್ತ್ರಗಳು, ಮೋಕ್ಷಶಾಸ್ತ್ರಗಳೆಂದು ನಾಲ್ಕು ವಿಧಗಳಾಗ ವಿಭಾಗಿಸಿದರು.

ಸುಯುಕ್ತ್ಯಾರ್ಥಾರ್ಜನಂಯತ್ರ ಅರ್ಥಶಾಸ್ತ್ರಂತದುಚ್ಯತೇ ॥
(ಶುಕ್ರನೀತಿಸಾರ.)

ಎಂದು, ನ್ಯಾಯಮಾರ್ಗದಲ್ಲಿ ಅರ್ಥಾರ್ಜನೆ ಮಾಡುವುದು (ಬದ್ಧಸಂಸಾರಿಗಳಾಗಿರುವ) ಮನುಷ್ಯಮಾತ್ರರಿಗೆಲ್ಲಾ ಅತ್ಯಂತಾವಶ್ಯಕವಾದದ್ದು. ಬ್ರಹ್ಮಾಂಡ ಕಟಾಹವಲ್ಲಿ ಪರಮಾತ್ಮನಿಂದ ಸೃಜಿಸಲ್ಪಟ್ಟಿರುವ ಜೀವರಾಸಿಗಳೆಲ್ಲಲ್ಲಾ ಮಾನವ ಜಾತಿಯು ಬುದ್ಧಿಚೈತನ್ಯವುಳ್ಳದ್ದಾಗಿರುವವರಿಂದ, ಇತರ ಜಂತುಗಳಂತಲ್ಲದೆ ಮನುಷ್ಯವರ್ಗಕ್ಕೆ ಎಷ್ಟೋ-ಸೌಕರ್ಯಗಳು ಬೇಕಾಗಿರುತ್ತವೆ. ಪಶ್ವಾದಿಗಳಿಗೆ ಭಗತ್ಕೃತವಾದ "ಸಿದ್ಧಾನ್ನವು" ಎಲ್ಲೆಲ್ಲಿಯೂ ನಿಬಿಡವಾಗಿರುವುದು. ಅವುಗಳಿಗೆ ಚಿಂತೆಯಿಲ್ಲ. ಅಂದರೆ, ಹುಲ್ಲಿದ್ದಕಡೆ ಮೇಯುವವು, ನೀರಿದ್ದಕಡೆ ಕುಡಿಯುವವು, ನೆರಳಿದ್ದಕಡೆ ಮಲಗುವವು. ಆದರೆ ಮನುಷ್ಯವರ್ಗದ ಸೌಕರ್ಯಗಳು ಹಾಗಿಲ್ಲ. ಮಾನವರಿಗೆ, ವಾಸಮಾಡುವದಕ್ಕೆ ಊರು, ಉಪ್ಪರಿಗೆ, ಮನೆ, ಮಠ, ಕೋಟೆ, ಪೇಟೆಗಳೂ; ಆಹಾರಕ್ಕೆ ಧಾನ್ಯ, ಹಾಲು, ತುಪ್ಪ ಮುಂತಾದ ರಸವರ್ಗಗಳೂ; ಉಡುವುದಕ್ಕೆ ನಾನಾವಿಧವಸ್ತ್ರಗಳೂ; ವಿಹಾರಕ್ಕೆ ಬಗೆಬಗೆಯಾದ ಯಾನಗಳೂ; ಅಲಂಕರಿಸುವುದಕ್ಕೆ ರತ್ನಖಚಿತವಾದ ಚಿತ್ರವಿಚಿತ್ರಸ್ವರ್ಣಾಭರಣಗಳೂ; ಮತ್ತು ವರ್ಣಿಸಲಳವಲ್ಲದ ಎಷ್ಟೋ ಸೌಕರ್ಯಗಳೂ ಬೇಕಾಗಿರುವುವು. ಇವೆಲ್ಲವೂ ಸಿದ್ಧಿಸುವದಕ್ಕೆ ಅರ್ಥಾರ್ಜನೆಯು ಅತ್ಯಾವಶ್ಯಕವು. "ಅರ್ಥವಿಲ್ಲದವನ ಬಾಳು ವ್ಯರ್ಥ,, ಎಂದು ಲೋಕೋಕ್ತಿ. ಧನಹೀನರನ್ನು ಯಾರೂ ಲಕ್ಷ್ಯಮಾಡುವುದಿಲ್ಲ. ಈ ವಿಷಯವನ್ನೊಬ್ಬ ಮಹಾ ಕವಿಯು ಹೀಗೆಂದು ಬಣ್ಣಿಸಿರುತ್ತಾನೆ:—

ಮಾತಾನಿಂದತಿ ನಾಭಿನಂದತಿ ಪಿತಾಭ್ರಾತಾನಸಂಭಾಷತೇ ।
ಭೃತ್ಯಃಕುಪ್ಯತಿನಾನುಗಚ್ಛತಿಸುತಃ ಕಾಂತಾಚನಾಲಿಂಗತಿ ॥
ಅರ್ಥಪ್ರಾರ್ಥನಶಂಕಯಾನಕುರುತೇ ಹ್ಯಾಲಾಪಮಾತ್ರಂಸುಹೃತ್ ।
ತಸ್ಮಾದರ್ಥಮುಪಾರ್ಜಯೇಚ್ಛೃಣುಸಖೇಹ್ಯರ್ಥೇನ ಸರ್ವೇವಶಾಃ ॥

ಧನಹೀನನನ್ನು ತಾಯಿ ನಿಂದಿಸುವಳು. ತಂದೆಯು ಪ್ರೀತಿಸನು ಸಹೋದರನು ಮಾತನ್ನಾಡನು. ಭೃತ್ಯರು ಕುಪಿತರಾಗುವರು. ಮಕ್ಕಳ್ ಹತ್ತಿರಕ್ಕೆ ಬಾರರು. ಕಾಂತೆಯು ಆಲಿಂಗನಮಾಡಲೊಲ್ಲಳು. ಧನವನ್ನು

ಕೇಳುವನೆಂಬ ಶಂಕೆಯಿಂದ ಮಿತ್ರರು ನಿಂತು ಮಾತಾಡರು. ಆದ್ದರಿಂದ ಸಖನೇ! ಅರ್ಥವನ್ನಾರ್ಜಿಸು. ಏಕೆಂದರೆ "ಸರ್ವೆಗುಣಾಃ (ಜನಾಃ) ಕಾಂಚನ ಮಾಶ್ರಯಂತಿ,, ಎಲ್ಲರೂ ಧನಕ್ಕೆ ವಶವರ್ತಿಗಳಾಗಿರುವರೆಂದು ತಾತ್ಪರ್ಯವು. ಆದುದರಿಂವಲೇ ಬ್ರಹ್ಮರ್ಷಿಯಾದ ವಸಿಷ್ಠನು "ಧನಮಾರ್ಜಯಕಾಕುತ್ಸ್ಥ ಧನಮೂಲಮಿದಂಜಗತ್" ಎಲೈ ಶ್ರೀರಾಮನೆ! ಧನಾರ್ಜನೆಮಾಡು. ನಿಜವಾದಧನವು ಚೇರೊಂದಿದಾಗ್ಯೂ ಈ ಲೋಕವೆಲ್ಲವೂ ಧನಮೂಲ ವಾಗಿರುತ್ತದೆ, ಎಂದು ಹೇಳಿದನು. ಇಹಪರಗಳಲ್ಲಿ ಯಾವುಗಳನ್ನು ಸಾಧಿಸಬೇಕಾದರೂ ಶರೀರಪಟುತ್ವವತ್ಯಾವಶ್ಯಕವು. ಶರೀರಪಟುತ್ವಕ್ಕೆ ಆಹಾರವು ಮೂಲಾಧಾರವು. ಆಹಾರವು ಬೇಕಾದರೆ ಧನವಿರ ಬೇಕು. ಧನಾರ್ಜನೆಗೆ ವಿದ್ಯಾಬಲವಿರಬೇಕು. ಸ್ಥೂಲಶರೀರವನ್ನು ಪೋಷಿಸುವುದಕ್ಕೆ ಅನ್ನವೂ, ಸೂಕ್ಷ್ಮಶರೀರವನ್ನು ಪೋಷಿಸುವದಕ್ಕೆ ಜ್ಞಾನವೂ ಮುಖ್ಯವಾದುದು. ಪಾಂಚಭೌತಿಕ ಶರೀರದ ಹಸಿವನ್ನು ಅನ್ನ ರೂಪವಾದ ಆಹಾರವು ತೀರಿಸಿ, ಆ ಶರೀರವನ್ನು ವೃದ್ಧಿಗೊಳಿಸುತ್ತದೆ. ಸೂಕ್ಷ್ಮಶರೀರದ ಹಸಿವನ್ನು ಜ್ಞಾನರೂಪವಾದ ಆಹಾರವು ತೀರಿಸಿ ಆ ಶರೀ ರವನ್ನು ವೃದ್ಧಿಗೊಳಿಸುತ್ತದೆ. ವಿದ್ಯೆಯು ಲೌಕಿಕ, ಪಾರಲೌಕಿಕಗಳೆಂದು ಎರಡು ಬಗೆಯಾಗಿದೆ. ಮೇಲೆ ಹೇಳಿದಂತೆ ಲೌಕಿಕ ವಿದ್ಯೆಯು ೬೪ ಬಗೆ ಗಳನ್ನೊಳಗೊಂಡಿದೆ. ಅವಾವುವೆಂದರೆ:—

ಶ್ಲೋ ॥ ಇತಿಹಾಸಾಗಮಾಶ್ಚೈವ ಕಾವ್ಯಾಲಂಕಾರನಾಟಕಂ ।
ಗಾಯಕತ್ವಂ ಕವಿತ್ವಂ ಚ ಕಾಮಶಾಸ್ತ್ರಂ ದುರೋದರಂ ॥

(೨) ದೇಶಭಾಷಾಲಿಪಿಜ್ಞಾನಂ ಲಿಪಿಕರ್ಮಚ ವಾಚಕಂ ।
ಸರ್ವಾಣಿ ಚಾಪಧಾನಾಸಿಸ್ಸ್ವರಶಾಸ್ತ್ರಂಚ ಶಾಕುನಂ ॥

(೩) ಸಾಮುದ್ರಿಕಂ ರತ್ನಶಾಸ್ತ್ರಂ ರಥಾಶ್ವಗಜಕೌಶಲಂ ।
ಮಲ್ಲಶಾಸ್ತ್ರಂ ಸೂದಕರ್ಮಂ ಭೂರುಹಾಣಾಂ ಚ ದೋಹದಂ ॥

(೪) ಗಂಧವಾದೋ ಧಾತುವಾದೋಖನಿವಾದೋರಸಸ್ಯಚ ।
ಜಾಲವಾದೋಗ್ನಿಸಂಸ್ತಂಭೋವಶ್ಯಾಕರ್ಷಣಮೋಹನಂ ॥

(೫) ವಿದ್ವೇಷಣೋಚ್ಚಾಟನಂಚ ಮಾರಣಂಕಾಲವಂಚನಂ ।
ಪರಕಾಯಪ್ರವೇಶಶ್ಚ ಪಾದುಕಾಸಿದ್ಧಿರೇವ ಚ ॥

(೬) ವಾಕ್ಸಿದ್ಧಿರ್ಘುಟಿಕಾಸಿದ್ಧಿ ರೈಂದ್ರಜಾಲಿಕಮೇವಚ ।
ಅಂಜನಂ ಪರದೃಷ್ಟೇಶ್ಚ ವಂಚನಂ ಸ್ವರವಂಚನಂ ॥
(೭) ಮಣಿಮಂತ್ರೌಷಧಾದೀನಾಂ ಸಿದ್ಧಯಶ್ಚೋರಕರ್ಮಚ ।
ಚಿತ್ರಾಶ್ಮಲೋಹಮೃದ್ದಾರು ವೇಣುಚರ್ಮಾಂಬರಕ್ರಿಯಾಃ ॥
(೮) ಅದೃಶ್ಯಕರಣಂ ದಂಡಕರಣಂ ಮೃಗಯಾವಿಧಿಃ ।
ವಾಣಿಜ್ಯಂಪಾಶುಪಾಲ್ಯಂಚ ಕೃಷಿರಾಹವಕರ್ಮ ಚ ॥
(೯) ಲಾವಕುಕ್ಕುಟಮೇಷಾದಿಯುದ್ಧಕಾರಕಕೌಶಲಂ ।
ಚತುಷ್ಷಷ್ಟಿಕಲಾಸ್ತ್ವೇತಾಃಕಲಾವಿದ್ಭಿಃಪ್ರಕೀರ್ತಿತಾಃ ॥
(ಚತುಷ್ಷಷ್ಠಿಕಲಾವಿಲಾಸ.)

೧ ಇತಿಹಾಸಗಳು:— ರಾಜಾಧಿರಾಜರ, ಚಕ್ರವರ್ತಿಗಳ ಕಾಲಸ್ಥಿತಿ ಗತಿಗಳನ್ನು ಬೋಧಿಸುವ ಭಾರತ, ರಾಮಾಯಣ, ಹರಿವಂಶ ಮುಂತಾದು ವುಗಳು (ಭಾರತವನ್ನು ಪಂಚಮ ವೇದವೆಂದೂ, ರಾಮಾಯಣವನ್ನು ಆದಿ ಕಾವ್ಯವೆಂದೂ ಹೇಳುವುದುಂಟು.)

೨ ಆಗಮಗಳು. ಶೈವವೈಷ್ಣವಾಗಮಗಳು.

೩ ಕಾವ್ಯಗಳು. ರಘುವಂಶ ನೈಷಧಾದಿಗಳು.

೪ ಅಲಂಕಾರಗಳು. ಉಪಮಾ, ಉತ್ಪ್ರೇಕ್ಷಾದಿ ಶತಾಲಂಕಾರ ಗಳು. ಕಾವ್ಯಾದರ್ಶ, ಕುವಲಯಾನಂದ ಮುಂತಾದವುಗಳು.

೫ ನಾಟಕಗಳು. ದೃಶ್ಯ ಪ್ರಬಂಧಗಳಾದ ಶಾಕುಂತಲಾದಿಗಳು.

೬ ಗಾಯಕತ್ವ. ಶ್ರುತಿ ಲಯ ಸ್ವರ ಸಹಿತವಾದ ಸಂಗೀತವಿದ್ಯೆ. ಭರತ [ನೃತ್ಯ] ಶಾಸ್ತ್ರವಿದ್ಯೆಗೆ ಸೇರಿದ ಒಂದು ಅಂತರ್ಭಾಗವಾಗಿದೆ. ಗಾಂಧ ರ್ವವೇದೋಕ್ತಪದ್ಧತಿ ಇದಕ್ಕೆ ಮೂಲಾಧಾರ.

೭ ಕವಿತ್ವ. ಛಂದಶ್ಶಾಸ್ತ್ರರೀತ್ಯಾ ಗ್ರಂಥನಿರ್ಮಾಣಮಾಡುವುದು. [ವೃತ್ತರತ್ನಾಕರ ಮುಂತಾದುವುಗಳು ಛಂದಶ್ಶಾಸ್ತ್ರಗಳು.]

೮ ಕಾಮಶಾಸ್ತ್ರ. ಪದ್ಮಿನಿ, ಹಸ್ತಿನಿ, ಚಿತ್ರಿಣಿ, ಶಂಖಿನಿ ಎಂಬ ಸ್ತ್ರೀಜಾತಿಗಳನ್ನೂ; ಶಶ ಮೃಗ ವೃಷಾದಿಪುರುಷ ಜಾತಿಗಳನ್ನೂ; ಕಳಾ ಕಾಲನಿರ್ಣಯಾದಿ ಕಾಮುಕಪ್ರಿಯವಾದ ವಿಷಯಗಳನ್ನೂ ಬೋಧಿಸುವ ರತಿಮಂಜರೀ ವಾತ್ಸ್ಯಾಯನ ಸೂತ್ರಗಳು ಮುಂತಾದವುಗಳು.

೯ ದುರೋದರ. ಚತುರಂಗ, ಪಗಡೆ, ಮುಂತಾದ ದ್ಯೂತ ವಿದ್ಯೆಗಳನ್ನು ಬೋಧಿಸುವ ಚತುರಂಗದರ್ಪಣ ಮುಂತಾದುವುಗಳು.

೧೦ ದೇಶಭಾಷಾಲಿಪಿಜ್ಞಾನ. ನಾನಾದೇಶಭಾಷೆಗಳನ್ನೂ ಬರವಣಿಗೆಗಳನ್ನೂ ಓದಿ ತಿಳಿದುಕೊಳ್ಳುವಿಕೆ.

೧೧ ಲಿಪಿಕರ್ಮ. ಬಗೆಬಗೆಯ ಭಾಷೆಗಳೊಳಪಟ್ಟಿರುವ ಬರವಣಿಗೆಗಳನ್ನು ಬರೆಯುವ ಕೆಲಸ.

೧೨ ವಾಚಕ. ಓದುವಿಕೆ.

೧೩ ಅವಧಾನ. ಅಂದರೆ, ಎಂಟು ಮಂದಿ ಅಥವಾ ನೂರುಮಂದಿ, ಸುತ್ತಲೂ ಕುಳಿತುಕೊಂಡು, ವಿವಿಧ ಪ್ರಶ್ನೆಗಳು ಮಾಡುತ್ತಿರಲು ಅವುಗಳಿಗೆಲ್ಲಕ್ಕೂ ತಾನೊಬ್ಬನೇ ಉತ್ತರವನ್ನು ಕೊಡುತ್ತ, ತನ್ಮಧ್ಯೆ ಬಾರಿಸಲ್ಪಡುವ ಘಂಟಾಶಬ್ದಗಳನ್ನು ಲೆಕ್ಕವಿಟ್ಟುಕೊಳ್ಳುತ್ತಾ, ತನ್ನ ಬೆನ್ನಿನಮೇಲೆ ಹಾಕಲ್ಪಡುವ ಪುಷ್ಪಗಳನ್ನು ಲೆಕ್ಕವಿಡುತ್ತಾ, ಎಲ್ಲಕ್ಕೂ ಸರಿಯಾದುತ್ತರಗಳನ್ನು ಕೊಡತಕ್ಕ ಪ್ರತಿಭೆಯುಳ್ಳ ವಿದ್ಯೆ. [ಅಷ್ಟಾವಧಾನ, ಶತಾವಧಾನ ಮುಂತಾದುವುಗಳು.]

೧೪ ಸ್ವರಶಾಸ್ತ್ರ. ಇಡಾ, ಪಿಂಗಳಾ, ಸುಷುಮ್ನಾ ನಾಡಿಗಳಲ್ಲಾಡುವ ಸೂರ್ಯಚಂದ್ರಾದಿ ಸ್ವರಗಳನ್ನು ಗ್ರಹಿಸಿ ಅವುಗಳ ಫಲಗಳನ್ನರಿತುಕೊಳ್ಳುವುದು.

೧೫ ಶಕುನ. ನಾಯಿ, ನರಿ, ಕಾಗೆ, ಬೆಕ್ಕು ಮುಂತಾದವುಗಳನ್ನು ನೋಡುವಿಕೆ, ಅವುಗಳ ಶಬ್ದಗಳನ್ನು ಕೇಳುವಿಕೆ, ಎಂದು ಕೆಲವರ ಅಭಿಮತವು ಮನಸ್ಸಾಕ್ಷಿಯನ್ನರಿತು ನಿರ್ಧರಿಸತಕ್ಕ ಭಾವಿಗತಿಗಳೆಂದು ಮಹನೀಯರ ನಿಶ್ಚಯವು. [ಮಾಂಡವ್ಯ ವಚನಾದಿಗಳು.]

೧೬ ಸಾಮುದ್ರಿಕ. ಅಂಗಾಂಗರೇಖಾಲಾಂಛನಗಳನ್ನು ಪರೀಕ್ಷಿಸುವುದರ ಮೂಲಕ ಭಾಗ್ಯಾಭಾಗ್ಯಗಳನ್ನು ನಿರ್ಧರಿಸುವ ಲಕ್ಷಣವಿದ್ಯೆ. [ಪ್ರಹ್ಲಾದಸಾಮುದ್ರಿಕ ಮುಂತಾದುವುಗಳು.]

೧೭ ರಥಾಶ್ವಗಜಕೌಶಲ. ರಥ, ಅಶ್ವ, ಗಜಾದಿಗಳ ಗಮನಾಗಮನ ಆರೋಹಣಾವರೋಹಣಾದಿ ಪರಿಸ್ಥಿತಿ ಲಕ್ಷಣಗಳನ್ನರಿಯುವಿಕೆ. [ಅಶ್ವಶಾಸ್ತ್ರ ಮುಂತಾದುವುಗಳು.]

೧೮ ಮಲ್ಲಶಾಸ್ತ್ರ. (ಗರಡೀ) ಶರೀರವ್ಯಾಯಾಮ ವಿದ್ಯೆ. ವ್ಯಾಯಾಮ ದೀಪಿಕೆ ಮುಂತಾದುವುಗಳು (ಈ ಕಾಲದಲ್ಲಿ ಜಗಜಟ್ಟಿ ರಾಮಮೂರ್ತಿ ಮುಂತಾದವರು ಇದಕ್ಕೆ ನಿದರ್ಶನ.)

೧೯ ಸೂದಕರ್ಮ. ಪಾಕಶಾಸ್ತ್ರವನ್ನರಿತು ರುಚಿಕರವಾಗಿರುವಂತೆ ಅಡಿಗೆ ಮಾಡುವುದು.

೨೦ ಭೂರುಹದೋಹದ. ವೃಕ್ಷಗಳನ್ನು ಅಕಾಲದಲ್ಲಿ ಪುಷ್ಪಿಸಿ ಫಲಿಸುವಹಾಗೆ ಮಾಡುವುದು, ಗಿಡಗಳನ್ನು ಅಂಟುಕಟ್ಟುವವಿದ್ಯೆ. ದೋಹದ ದೀಪಿಕೆ, ಪುಷ್ಪತರುಲತಾಭಿವೃದ್ಧಿ ಮುಂತಾದುವುಗಳು.

೨೧ ಗಂಧವಾದ. ದೂರದಲ್ಲಿರುವ ಜಂತುಜಾಲಗಳನ್ನು ವಾಸನೆಯಿಂದ ಕಂಡುಹಿಡಿಯುವಿಕೆ. ಸುಗಂಧಗಳನ್ನು ತಯಾರಿಸುವಿಕೆ ಮುಂತಾದ ವಿದ್ಯೆ.

೨೨ ಧಾತುವಾದ. ಗೈರಿಕ, ಅಭ್ರಕಾದಿ ಧಾತುಗಳ ಮರ್ಮಗಳನ್ನರಿಯುವಿಕೆ ಅವುಗಳನ್ನುಪಯೋಗಿಸುವಿಕೆ.

೨೩ ಖನಿವಾದ. ಭಂಗಾರ ಮುಂತಾದ ಲೋಹಗಳನ್ನು ಗಣಿಗಳಿಂದ ತೆಗೆಯುವ ವಿಧಾನವನ್ನು ಬೋಧಿಸುವ ಶಾಸ್ತ್ರವು.

೨೪ ರಸವಾದ. ರಸ, ಗಂಧಕ, ಪಾಷಾಣಾದಿಗಳಲ್ಲಿರುವ ವಿಷವನ್ನು ತೆಗೆದುಹಾಕಿ ಅವುಗಳನ್ನು ಉಪಯೋಗಿಸುವುದು. ಮೂಲಿಕೆಗಳ ಸಹಾಯದಿಂದ ಲೋಹವೀರ್ಯವುಳ್ಳ ಪದಾರ್ಥಗಳನ್ನು ಸಿದ್ಧಪಡಿಸುವ ವಿಧಾನವನ್ನು ಬೋಧಿಸುವವಿದ್ಯೆ.

೨೫ ಜಾಲವಿದ್ಯೆ. ಬಲೆಗಳನ್ನೊಡ್ಡಿ ಮೃಗಮತ್ಸ್ಯಾದಿಗಳನ್ನು ಹಿಡಿಯುವ ವಿಧಾನವನ್ನು ತಿಳಿಸುವ ವಿದ್ಯೆ.

೨೬ ಅಗ್ನಿಸ್ತಂಭನ. ಬೆಂಕಿಯನ್ನು ಮುಟ್ಟಿದರೂ, ಸುಡದಂತೆ ಕಟ್ಟು ಕಟ್ಟುವ ತಂತ್ರ ವಿದ್ಯೆ.

೨೭—೨೮. ಖಡ್ಗ ಜಲ ವಾಗ್ವಯಸ್ತಂಭನಗಳು. ಆಯುಧಗಳನ್ನು, ನೀರನ್ನು, ಪ್ರಾಣಿಗಳ ಬಾಯನ್ನು, ಪಕ್ಷಿಗಳನ್ನು ಹೇಗೆ ಇದ್ದರೆ ಹಾಗೆಯೇ ಇರುವಂತೆ ಕಟ್ಟುವಿಕೆ.

೩೧—೩೫. ವಶ್ಯ ಆಕರ್ಷಣ ಮೋಹನ ವಿದ್ವೇಷಣ ಉಚ್ಚಾಟನಗಳು. ನರ ಮೃಗಾದಿಗಳನ್ನು ವಶಮಾಡಿಕೊಳ್ಳುವಿಕೆ, ಸಮೀಪಕ್ಕೆ ಬರಮಾಡಿ

ಕೊಳ್ಳುವಿಕೆ, ಮೋಹಗೊಳಿಸುವಿಕೆ, ವಿರೋಧಹುಟ್ಟಿಸುವಿಕೆ, ಓಡಿಸುವಿಕೆ, ದೂರದಲ್ಲಾಗುವ ಶಬ್ದಗಳನ್ನರಿಯುವಿಕೆ, ದೂರದೃಷ್ಟಿ ಮುಂತಾದವುಗಳು. ಮತ್ತು ಈಗಿನಕಾಲದ ಮೆಸ್ಮರಿಜಂ ವಿದ್ಯೆಯನ್ನು ಹೋಲುವ ಕೃತ್ರಿಮ ತಂತ್ರಗಳನ್ನು ಸಹ ಬೋಧಿಸುವುದು.

೩೬ ಮಾರಣಂ. ಮಂತ್ರೌಷಧಾದಿಗಳಿಂದ ಪ್ರಾಣಿಗಳನ್ನು ಕೊಲ್ಲುವಿಕೆ.

೩೭ ಕಾಲವಂಚನೆ. ಕಾಲವನ್ನು ವಂಚಿಸುವಿಕೆ. ಅಂದರೆ, ಯೋಗ ಸಾಧನೆಯ ಬಲದಿಂದ ಆಯುಷ್ಯವನ್ನು ವೃದ್ಧಿಗೊಳಿಸುವಿಕೆ.

೩೮ ಪರಕಾಯ ಪ್ರವೇಶ. ತನ್ನ ದೇಹದಲ್ಲಿರುವ ಜೀವವನ್ನು ಅನ್ಯ ದೇಹಗಳಲ್ಲಿ ಪ್ರವೇಶಗೊಳಿಸುವಿಕೆ.

೩೯ ಪಾದುಕಾಸಿದ್ಧಿ. ಮಣಿಮಂತ್ರೌಷಧಾದಿಗಳಿಂದ ಕೋರಿದ ಸ್ಥಳಕ್ಕೆ ಬೇಗ ಹೋಗಿಸೇರುವ ಸಾಧನ.

೪೦ ವಾಕ್ಸಿದ್ಧಿ. ಸಭೆಯಲ್ಲಿ ತಾನು ಪ್ರಸಂಗಿಸಬೇಕಾದ ವಿಷಯಗಳು ಮೊದಲು ತಿಳಿಯದಿದ್ದರೂ ಸಭೆಯಲ್ಲಿಯೇ ಅದನ್ನು ಸಿದ್ಧಪಡಿಸಿಕೊಳ್ಳುವಿಕೆ.

೪೧ ಘುಟಿಕಾಸಿದ್ಧಿ. ಮೂಲಿಕಾವಿಶೇಷಗಳಿಂದ ಗುಳಿಗೆಗಳನ್ನು ಸಿದ್ಧಗೊಳಿಸಿಕೊಂಡು ಅವುಗಳಿಂದ ಬೇಕಾದುವುಗಳನ್ನು ಪಡೆಯುವಿಕೆ.

೪೨ ಇಂದ್ರಜಾಲ. ಹಸ್ತಲಾಘವಾದಿಗಳಿಂದ ಪ್ರತ್ಯಕ್ಷದಲ್ಲಿರುವುದನ್ನು ಕಾಣದಂತೆಯೂ, ಪರೋಕ್ಷದಲ್ಲಿರುವುದನ್ನು ಕಾಣುವಂತೆಯೂ ಮಾಡುವಿಕೆ

೪೩ ಅಂಜನ, ಪದದೃಷ್ಟಿ. ಕಪ್ಪುಗಳು ಮುಂತಾದವುಗಳ ಸಹಾಯದಿಂದ ಭೂಮಿಯಲ್ಲಿರುವ ಧನ ಮುಂತಾದುವುಗಳನ್ನು ತಿಳಿದುಕೊಳ್ಳುವಿಕೆ.

೪೪ ವಂಚನೆ, ಅನ್ಯರನ್ನು ಮೋಸಗೊಳಿಸುವಿಕೆ.

೪೫ ಸ್ವರವಂಚನೆ. ಮೃಗಪಕ್ಷ್ಯಾದಿಗಳಂತೆ ನಾನಾವಿಧ ಸ್ವರಭೇದದಿಂದ ಕೂಗುತ ಇತರರನ್ನೂ, ಇತರಜಂತುಗಳನ್ನೂ ಮೋಸಗೊಳಿಸುವಿಕೆ.

೪೬ ಮಣಿಸಿದ್ಧಿ. ಮಣಿಗಳ ಸಹಾಯದಿಂದ ವಿಷಜಾತಿಗಳ ದರ್ಪವನ್ನು ಕಟ್ಟುವಿಕೆ.

೪೭ ಮಂತ್ರಸಿದ್ಧಿ. ನಾನಾವಿಧ ಮಂತ್ರಗಳನ್ನು ಕಲಿತು ವಶಗೊಳಿಸಿಕೊಂಡಿರುವಿಕೆ.

೪೮ ಔಷಧಸಿದ್ಧಿ. ಲೋಹ, ಮೂಲಿಕಾದಿಗಳ ಸಹಾಯದಿಂದ ಮದ್ದು

ಗಳನ್ನು ಮಾಡಿ, ರೋಗಗಳನ್ನು ಪರಿಹರಿಸುವಿಕೆ.

೪೯ ಚೋರಕರ್ಮ. ಲೋಕದಲ್ಲಿ ಯಾರಿಗೂ ಯಾವ ವಿಧದಲ್ಲಿಯೂ ಗೋಚರಿಸದಂತೆ, ಕದಿಯುವಿಕೆ.

೫೦—೫೬ ಚಿತ್ರಾಶ್ಮ ಮೃದ್ದಾರು, ವೇಣುಚರ್ಮಾಂಬರಕ್ರಿಯೆಗಳು. ಮಣ್ಣು, ಮರ, ಬಿದಿರು, ವಸ್ತ್ರ ಇವುಗಳ ಕೆಲಸಗಳು.

೫೭ ಅದೃಶ್ಯಕರಣಂ. ಅನ್ಯರಿಗೆ ಕಾಣಬಾರದಂತೆ ಇರುವಿಕೆ.

೫೮ ದಂಡಕರಣಂ. ದಂಡಸಾಧನದಿಂದ ಕಾರ್ಯಗಳನ್ನು ಕೈಗೂಡಿಸಿ ಕೊಳ್ಳುವಿಕೆ.

೫೯ ಮೃಗಯಾವಿಧಿ. ಬೇಟೆಯಾಡುವಿಕೆ.

೬೦ ವಾಣಿಜ್ಯ. ವ್ಯಾಪಾರ ಮಾರ್ಗವನ್ನು ಬೋಧಿಸುವ ವಿದ್ಯೆ.

೬೧ ಪಶುಪಾಲನ. ಪಶ್ವಾದಿಗಳನ್ನು ರಕ್ಷಿಸುವಿಕೆ.

೬೨ ಕೃಷಿ. ವ್ಯವಸಾಯ ಮಾರ್ಗಗಳನ್ನು ಬೋಧಿಸುವ ವಿದ್ಯೆ.

೬೩ ಆಹವಕರ್ಮ. ಯುದ್ಧದ ಮಾರ್ಗವನ್ನು ಬೋಧಿಸುವ ವಿದ್ಯೆ.

೬೪ ಲಾವಕುಕ್ಕುಟಾದಿಯುದ್ಧ. ಕೋಳಿಗಳು ಪಕ್ಷಿಗಳು ಮುಂತಾದವುಗಳನ್ನು ಜಗಳಕ್ಕೆ ಬಿಡುವಿಕೆ.

ಹೀಗೆ ೬೪ ವಿದ್ಯೆಗಳಿವೆ. ಇವುಗಳಲ್ಲಿ "ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ" ಎಂಬ ವ್ಯಾಸಮಹರ್ಷಿಗಳ ವಚನಾನುಸಾರ ಪರಹಿಂಸಾಸ್ವರೂಪವಾದ ದುರ್ವಿದ್ಯೆಗಳನ್ನು ವರ್ಜನೆಮಾಡಿ ಸದ್ವಿದ್ಯೆಗಳನ್ನು ಮಾತ್ರವೇ ಅಭ್ಯಾಸಮಾಡಬೇಕು.

## —:ಉಪನಿಷತ್ತುಗಳು:—

ಶ್ಲೋ॥ ಉಪನೀಯಮಹಾತ್ಮಾನಾಂ ಬ್ರಹ್ಮೋಪಾಸ್ತ್ಯದ್ವಯಂತತಃ ।
ನಿಹಂತ್ಯವಿದ್ಯಾಂತಜ್ಜಾಂಚತಸ್ಮಾದುಪನಿಷನ್ಮತಂ ॥

ಜನನಮರಣ, ಜರಾಭಾರ, ಶೋಕಮೋಹ, ದಾರಿದ್ರ್ಯ ದುಃಖದೋಷಾದಿ ಕರ್ಮಬಂಧನಗಳನ್ನು ಪರಿಹರಿಸಿ, ಅಜ್ಞಾನ ಬೀಜರೂಪವಾದ ಸಂಸಾರ ವೃಕ್ಷವನ್ನು ನಿರ್ಮೂಲಮಾಡಿ, ಭವಸಾಗರವನ್ನುತ್ತರಿಸಿ, ಸಂತತ ಬ್ರಹ್ಮಾನಂದವನ್ನು ಪಡೆಯುವುದಕ್ಕೆ ಸಾಧನಭೂತವಾದ "ಆತ್ಮವಿಚಾರ" ವನ್ನು

ತಿಳಿಸತಕ್ಕ, ಮೋಕ್ಷಶಾಸ್ತ್ರವಾದುದರಿಂದ, ಉಪನಿಷತ್ತೆಂಬ ಹೆಸರೂ ಉಂಟಾಯಿತು.

ನಿತ್ಯಮುಕ್ತರಾದ, ವ್ಯಾಸ, ವಾಲ್ಮೀಕಿ, ವಸಿಷ್ಠ, ನಾರದ, ಪರಾಶರ, ಶುಕ, ಶೌನಕ, ಯಾಜ್ಞವಲ್ಕ್ಯಾದಿ ಮಹಾತ್ಮರು ಯಾವ ಪರಬ್ರಹ್ಮ ಸಂದರ್ಶನದಿಂದ, ನಿತ್ಯಾನಂದ, ವೈಭವವನ್ನು ಹೊಂದಿದರೋ, ಅಂತಹ ಪರಬ್ರಹ್ಮವು ಜೀವಕೋಟಿಗಳ ಹೃದಯಾರವಿಂದಗಳಲ್ಲಿಯೇ ನೆಲೆಯಾಗಿರುವುದನ್ನರಿಯದೆ, ಪರಮಾತ್ಮನಲ್ಲಿಯೋ ದೂರದೇಶದಲ್ಲಿರುವಂತೆ ಭ್ರಾಂತಿಹೊಂದಿ, ಮರುಳಾಗಿರುವ ಮನುಷ್ಯರ ಅಜ್ಞಾನದಶೆಯನ್ನು ಪರಿಹರಿಸಿ, ಸುಜ್ಞಾನ ಸೂರ್ಯೋದಯವನ್ನುಂಟುಮಾಡತಕ್ಕ ಪರಮಾರ್ಥ ವಿದ್ಯೆಯಾದುದರಿಂದ, ಉಪನಿಷತ್ತೆಂಬ ಹೆಸರುಂಟಾಯಿತು.

"ಉಪ = ಸಮೀಪೇ, ನಿಷೀದತ್ಯಸ್ಮಿನ್ನಿತ್ಯುಪನಿಷತ್" ಅಂದರೇ ಪರಬ್ರಹ್ಮವು, ಚೇತನಾ ಚೇತನ ಪ್ರಪಂಚವೆಂಬ ಸಮಸ್ತಕ್ಕೂ ಅತಿಸಮೀಪದಲ್ಲಿರುವುದೆಂಬ ತತ್ವಾರ್ಥವನ್ನು ತಿಳಿಸುತ್ತದೆಂದಭಿಪ್ರಾಯವು.

"ತಿಲೇಷು ತೈಲವದ್ವೇದೇ ವೇದಾಂತಸ್ಸುಪ್ರತಿಷ್ಠಿತಃ" (ಮುಕ್ತಿಕೋಪನಿಷತ್ತು) ಎಳ್ಳಿನಲ್ಲಿ ಎಣ್ಣೆ ಇರುವಂತೆ, ವೇದದಲ್ಲುಕ್ತವಾಗಿರುವ, ಕರ್ಮಮಾರ್ಗ ಮೊದಲಾದುವುಗಳೆಲ್ಲಕ್ಕಿಂತಲೂ ಶ್ರೇಷ್ಠವಾದ, "ಜ್ಞಾನಮಾರ್ಗವನ್ನು" ದೃಢವಾಗಿ ಬೋಧಿಸತಕ್ಕ ವಾಕ್ಯಗಳೇ "ವೇದಾಂತ" ಗಳೆಂತಲೂ, ಉಪನಿಷತ್ತುಗಳೆಂತಲೂ ಹೆಸರು ಪಡೆದಿರುತ್ತವೆ. ಸಂಸ್ಕೃತಭಾಷೆಯಲ್ಲಿ "ಷದ್ಲ್" ಎಂಬ ಧಾತುವಿನಿಂದ, ಉಪನಿಷತ್ತೆಂಬ ಶಬ್ದವು ಹುಟ್ಟಿತು. "ಷದ್ಲ್ವಿಶರಣಗತ್ಯವಸಾದನೇಷು" ಎಂಬಂತೆ, ಅವಿದ್ಯಾರೂಪವಾದ ಸಂಸಾರದುಃಖವನ್ನು ನಿರ್ಮೂಲಮಾಡುವುದರ ಮೂಲಕ, ಜನನ ಮರಣಾದಿಗಳಿಲ್ಲದ, ಮೋಕ್ಷಮಾರ್ಗವನ್ನು ತಿಳಿಸತಕ್ಕದೆಂದಭಿಪ್ರಾಯವು.

ಇಂತಹ ಉಪನಿಷತ್ತುಗಳು, ಋಗ್ಯಜುಸ್ಸಾಮಾಥರ್ವಣಗಳೆಂಬ ನಾಲ್ಕು ವೇದಗಳಲ್ಲಿಯೂ ಅನೇಕವಾಗಿರುವುವು. ಅವುಗಳಲ್ಲಿ ನೂರೆಂಟು (೧೦೮) ಉಪನಿಷತ್ತುಗಳು, ಅಷ್ಟೋತ್ತರ ಶತೋಪನಿಷತ್ತುಗಳೆಂಬ ಹೆಸರಿನಿಂದ ವಿಶೇಷವಾಗಿ ಪ್ರಚಾರದಲ್ಲಿರುತ್ತವೆ. ಆವಿವರವನ್ನಿಲ್ಲಿ ಸೂಚಿಸುತ್ತೇನೆ.

ಋಗ್ವೇದಕ್ಕೆ ಸೇರಿದ, ಉಪನಿಷತ್ತುಗಳು:—ಐತರೇಯೋಪನಿಷತ್ತು,

ಕೌಶೀತಕೀ ಬ್ರಾಹ್ಮಣೋಪನಿಷತ್ತು, ನಾದಬಿಂದೂಪನಿಷತ್ತು, ಆತ್ಮಬೋಧೋಪನಿಷತ್ತು, ನಿರ್ವಾಣೋಪನಿಷತ್ತು, ಮುದ್ಗಲೋಪನಿಷತ್ತು, ಅಕ್ಷಮಾಲಿಕೋಪನಿಷತ್ತು, ತ್ರಿಪುರಸಾರೋಪನಿಷತ್ತು, ಸೌಭಾಗ್ಯಲಕ್ಷ್ಮ್ಯುಪನಿಷತ್ತು, ಬಹ್ವೃಚೋಪನಿಷತ್ತುಗಳೆಂಬ ೧೦ ಉಪನಿಷತ್ತುಗಳು.

ಯಜುರ್ವೇದಕ್ಕೆ ಸೇರಿದ ಉಪನಿಷತ್ತುಗಳು:— (ಶುಕ್ಲಯಜುರ್ವೇದಕ್ಕೆ) ಈಶಾವಾಸ್ಯೋಪನಿಷತ್ತು, ಬೃಹದಾರಣ್ಯಕೋಪನಿಷತ್ತು, ಜಾಬಾಲೋಪನಿಷತ್ತು, ಹಂಸೋಪನಿಷತ್ತು, ಪರಮಹಂಸೋಪನಿಷತ್ತು, ಸುಬಾಲೋಪನಿಷತ್ತು, ಮಾಂತ್ರಿಕೋಪನಿಷತ್ತು, ನಿರಾಲಂಬೋಪನಿಷತ್ತು, ತ್ರಿಶಿಖೀಬ್ರಾಹ್ಮಣೋಪನಿಷತ್ತು, ಮಂಡಲಬ್ರಾಹ್ಮಣೋಪನಿಷತ್ತು, ಅದ್ವಯತಾರಕೋಪನಿಷತ್ತು, ಪೈಂಗಲೋಪನಿಷತ್ತು, ಭಿಕ್ಷುಕೋಪ ನಿಷತ್ತು, ತುರೀಯಾತೀತ ಅವಧೂತೋಪನಿಷತ್ತು, ಅಧ್ಯಾತ್ಮೋಪನಿಷತ್ತು, ತಾರಸಾರೋಪನಿಷತ್ತು, ಯಾಜ್ಞವಲ್ಕ್ಯೋಪನಿಷತ್ತು, ಶಾಟ್ಯಾಯನೀ ಯೋಪನಿಷತ್ತು, ಮುಕ್ತಿಕೋಪನಿಷತ್ತು, ಎಂಬೀ ೧೯ ಉಪನಿಷತ್ತುಗಳು ಶುಕ್ಲಯಜುರ್ವೇದಕ್ಕೆ ಸೇರಿದುವುಗಳು.

(ಕೃಷ್ಣಯಜುರ್ವೇದಕ್ಕೆ) ಕಠವಲ್ಲ್ಯುಪನಿಷತ್ತು, ತೈತ್ತಿರೀಯೋಪನಿಷತ್ತು, ಬ್ರಹ್ಮೋಪನಿಷತ್ತು, ಕೈವಲ್ಯೋಪನಿಷತ್ತು, ಶ್ವೇತಾಶ್ವತರೋಪನಿಷತ್ತು, ಗರ್ಭೋಪನಿಷತ್ತು, ನಾರಾಯಣೋಪನಿಷತ್ತು, ಅಮೃತಬಿಂದೂಪನಿಷತ್ತು, ಅಮೃತನಾದೋಪನಿಷತ್ತು, ಕಾಲಾಗ್ನಿರುದ್ರೋಪನಿಷತ್ತು, ಕ್ಷುರಿಕೋಪನಿಷತ್ತು, ಸರ್ವಸಾರೋಪನಿಷತ್ತು, ಶುಕರಹಸ್ಯೋಪನಿಷತ್ತು, ತೇಜೋಪನಿಷತ್ತು, ಬ್ರಹ್ಮವಿದ್ಯೋಪನಿಷತ್ತು, ಯೋಗತತ್ತ್ವೋಪನಿಷತ್ತು, ದಕ್ಷಿಣಾಮೂರ್ತ್ಯುಪನಿಷತ್ತು, ಸ್ಕಂದೋಪನಿಷತ್ತು, ಶಾರೀರಕೋಪನಿಷತ್ತು, ಯೋಗಶಿಖೋಪನಿಷತ್ತು, ಏಕಾಕ್ಷರೋಪನಿಷತ್ತು, ಅಕ್ಷ್ಯುಪನಿಷತ್ತು, ಅವಧೂತೋಪನಿಷತ್ತು, ಕಠೋಪನಿಷತ್ತು, ರುದ್ರಹೃದಯೋಪನಿಷತ್ತು, ಯೋಗಕುಂಡಲ್ಯುಪನಿಷತ್ತು, ಪಂಚಬ್ರಹ್ಮೋಪನಿಷತ್ತು, ಪ್ರಾಣಾಗ್ನಿಹೋತ್ರೋಪನಿಷತ್ತು, ವರಾಹೋಪನಿಷತ್ತು, ಕಲಿಸಂತಾರಣೋಪನಿಷತ್ತು, ಧ್ಯಾನಬಿಂದೂಪನಿಷತ್ತು, ಸರಸ್ವತೀರಹಸ್ಯೋಪನಿಷತ್ತು, ಎಂಬೀ ೩೨ ಉಪನಿಷತ್ತುಗಳು ಕೃಷ್ಣಯಜುರ್ವೇದಕ್ಕೆ ಸೇರಿದುವುಗಳು.

ಸಾಮವೇದಕ್ಕೆ ಸೇರಿದ ಉಪನಿಷತ್ತುಗಳು:— ಕೆನೋಪನಿಷತ್ತು, ಛಾಂದೋಗ್ಯೋಪನಿಷತ್ತು, ಗೂಢಾರುಣಿಕೋಪನಿಷತ್ತು, ಮೈತ್ರಾಯಣ್ಯುಪನಿಷತ್ತು, ಮೈತ್ರೇಯೋಪನಿಷತ್ತು, ವಜ್ರಸೂಚಿಕೋಪನಿಷತ್ತು, ವಾಸುದೇವೋಪನಿಷತ್ತು, ಮಹೋಪನಿಷತ್ತು, ಯೋಗಚೂಡಾಮಣ್ಯುಪನಿಷತ್ತು, ಸನ್ಯಾಸೋಪನಿಷತ್ತು, ಅವ್ಯಕ್ತೋಪನಿಷತ್ತು, ಕುಂಡಿಕೋಪನಿಷತ್ತು, ಸಾವಿತ್ರ್ಯುಪನಿಷತ್ತು, ರುದ್ರಾಕ್ಷಜಾಬಾಲೋಪನಿಷತ್ತು, ದರ್ಶನೋಪನಿಷತ್ತು, ಜಾಬಾಲ್ಯುಪನಿಷತ್ತು, ಎಂಬೀ ೧೬ ಉಪನಿಷತ್ತುಗಳು ಸಾಮವೇದಕ್ಕೆ ಸೇರಿದುವುಗಳು.

ಅಥರ್ವಣ ವೇದಕ್ಕೆ ಸೇರಿದ ಉಪನಿಷತ್ತುಗಳು:—ಪ್ರಶ್ನೋಪನಿಷತ್ತು, ಮುಂಡಕೋಪನಿಷತ್ತು, ಮಾಂಡೂಕ್ಯೋಪನಿಷತ್ತು, ಅಥರ್ವಶಿರೋಪನಿಷತ್ತು, ಅಥರ್ವಶಿಖೋಪನಿಷತ್ತು, ಬೃಹಜ್ಜಾಬಾಲೋಪನಿಷತ್ತು, ನೃಸಿಂಹತಾಪಿನ್ಯುಪನಿಷತ್ತು, ನಾರದಪರಿವ್ರಾಜಕೋಪನಿಷತ್ತು, ಸೀತೋಪನಿಷತ್ತು, ಶರಭೋಪನಿಷತ್ತು, ಮಹಾನಾರಾಯಣೋಪನಿಷತ್ತು, ರಾಮರಹಸ್ಯೋಪನಿಷತ್ತು, ರಾಮತಾಪಿನ್ಯುಪನಿಷತ್ತು, ಶಾಂಡಿಲ್ಯೋಪನಿಷತ್ತು, ಪರಮಹಂಸಪರಿವ್ರಾಜಕೋಪನಿಷತ್ತು, ಅನ್ನಪೂರ್ಣೋಪನಿಷತ್ತು, ಸೂರ್ಯೋಪನಿಷತ್ತು, ಆತ್ಮೋಪನಿಷತ್ತು, ಪಾಶುಪತಬ್ರಹ್ಮೋಪನಿಷತ್ತು, ಪರಬ್ರಹ್ಮೋಪನಿಷತ್ತು, ತ್ರಿಪುರತಾಪಿನ್ಯುಪನಿಷತ್ತು, ದೇವ್ಯುಪನಿಷತ್ತು, ಭಾವನೋಪನಿಷತ್ತು, ಭಸ್ಮಜಾಬಾಲೋಪನಿಷತ್ತು, ಗಣಪತ್ಯುಪನಿಷತ್ತು, ಮಹಾವಾಕ್ಯೋಪನಿಷತ್ತು, ಗೋಪಾಲತಾಪನ್ಯುಪನಿಷತ್ತು, ಕೃಷ್ಣೋಪನಿಷತ್ತು, ಹಯಗ್ರೀವೋಪನಿಷತ್ತು, ದತ್ತಾತ್ರೇಯೋಪನಿಷತ್ತು, ಗಾರುಡೋಪನಿಷತ್ತು, ಎಂಬೀ ೩೧ ಉಪನಿಷತ್ತುಗಳು, ಅಥರ್ವಣವೇದಕ್ಕೆ ಸೇರಿದುವುಗಳು.

ಭವಸಾಗರವನ್ನುತ್ತರಿಸಿ, ಸಂತತ ಬ್ರಹ್ಮಾನಂದವನ್ನು ಪಡೆಯುವುದಕ್ಕೆ ಯಾವುದು ಸಾಧನಭೂತವಾದ ಅಂತರಂಗವಿದ್ಯೆಯೋ, ಅಂತಹ ಉಪನಿಷದ್ವಿದ್ಯೆಯನ್ನು ಸಾಂಗವಾಗಿ ಅಭ್ಯಾಸಮಾಡಿ ಕ್ರಿಯಾರೂಪವಾಗಿ ಅನುಷ್ಠಾನಕ್ಕೆತಂದು, ಬ್ರಹ್ಮಾದಿದೇವತೆಗಳಿಂದಲೂ ಗೌರವಿಸಲ್ಪಟ್ಟ "ಶ್ರುಮಾವತಿ" ಎಂಬ ಪರಮಸಾಧ್ವಿಯ ಚರಿತ್ರೆಯನ್ನಿಲ್ಲಿ ವಿವರಿಸುತ್ತೇನೆ.

## —: ಶುಭ್ರಾವತಿ :—

ಅಮರನಗರಿ. ಬೃಂದಾರಕವೃಂದದಿಂದ ಕೂಡಿರುವ ಮಂದಾಕಿನಿಯು
ಗಂಭೀರವಾಗಿ ಪ್ರವಹಿಸುತ್ತಿದೆ. ಸುರನದಿಯುಸಹಸ್ರಾರು ಅಲೆಗಳು ಕಮ
ಲಂಗಳಂ ಕುಣಿಸುತ್ತಿದೆ. ಉಚ್ಚಸ್ವರದಿಂದ ಹೇಳುವ ಚತುರ್ವೇದಘೋಷ
ವು ಕಿವಿಗಳಿಗೆ ಆನಂದವಂಕೊಡುತ್ತಿದೆ. ಭಾವ-ರಾಗ-ತಾಳ- ಗಾನಂಗಳಿಂದ
ಕೂಡಿ ಅಭಿನಯಿಸಿ ನರ್ತನ ಮಾಡುತ್ತಿರುವ ಅಪ್ಸರೆಯರ ಗಾನವು ಕಣ್ಮನ
ನಂಗಳಂ ಸೆಳೆಯುತ್ತಿದೆ. ಅಷ್ಟದಿಕ್ಪಾಲಕರು, ಸಪ್ತಮರುತ್ತುಗಳು
ಗರುಡ, ಕಿನ್ನರ, ಕಿಂಪುರುಷ, ಯಕ್ಷ, ಸಿದ್ಧ ಚಾರಣ ಗಂಧರ್ವರೆಲ್ಲರೂ
ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತು ದೇವನಗರಿಯ ಸಂತೋಷ ಸೌಖ್ಯ
ಗಳಂ ಬಗೆಬಗೆಯಾಗಿ ವರ್ಣಿಸುತ್ತಿದಾರೆ. ಕವಿ, ಗಮಕಿ, ವಾದಿ, ವಾಗ್ಮಿ
ನಾಟಕ, ಪರಿಹಾಸ, ನೃತ್ಯ, ಗೀತ, ವಾದ್ಯ, ಚಮತ್ಕಾರಂಗಳಿಂದ ಕೂಡಿ
ಆ——ನಿರ್ಜರ ಲೋಕಮಂ ನೋಡಲಾಶಿಸದವರು ಯಾರು ? ದೇವತೆ
ಳೇ ಹಾಗೆ ಆಶಿಸುತ್ತಿರುವಾಗ ಹುಲ್ಲುಮಾನವರದೇನು ಗಣನೆ ? ಹೇಗಾದರೂ
ಆಗಲಿ. ನಾನೂ ಹೋಗಬೇಕೆಂದು ಸಂಕಲ್ಪಿಸಿದೆ. ಸಂಕಲ್ಪಿಸಿದಂತೆ ಆ....
........ಅಮರಪತ್ತನಮಂ ನೋಡಿದೆ. ಅಹಹ ! ಎಂತಹ ಮಹಾಸಭೆ
ಮಾಪದಕಣ್ಣುಗಳಿಂದ ನೋಡತೀರದು. ನೀಲದಭಿತ್ತಿ, ವಜ್ರದಕಂಭ, ಪ
ಳದ ಬೋದಿಗೆ, ಮರಕತದ ತೊಲೆ, ಕುರುವಿಂದದ ಮುಚ್ಚುವಲಗೆ, ನವ
ತ್ನದಲಂಬಣ ಕಸೂತ್ತುರಿಯ ಸಾರಣ, ಅಹಹ ! ಇಂತಹ ಸಭೆಯಂ ನಾನೆ
ದಿಗೂ ನೋಡಿದುದಿಲ್ಲ. ಮಹಾತ್ಮನಾದ ಶಚೀಂದ್ರನು ನವರತ್ನಖಚಿ
ಸಿಂಹಾಸನಾಸೀನನಾಗಿದಾನೆ. ಸಂಗೀತವಾಗುತ್ತಿದೆ. ಗಂಧರ್ವನೊಬ್ಬ
ಎತ್ತಿದ ಶ್ರುತಿಯುನ್ನಿಳಿಸದೆ ಭೀತ, ಭಿನ್ನ, ಗದ್ಗದ, ಜರ್ಝರ, ಮುಕುಲಿ
ಚ್ಯುತ, ಕಂಪಿತ, ಮುದ್ಧ್ರಷ್ಟಂಗಳೆಂಬ ದೋಷಂಗಳು ಪೊದ್ದದಹಾ
ಷಡ್ಜ, ವೃಷಭ, ಗಾಂಧಾರ ಮಧ್ಯಮ, ಪಂಚಮ, ದೈವತ, ನಿಷಾದಗಳೆಂ
ಸಪ್ತಸ್ವರಾಲಾಪಂಗಳಿಂ ಮಲಹರಿ, ಗುಜ್ಜರಿ, ಗೌಳ, ಬಂಗಾಳಿ, ಗುಂ
ಕ್ರಿಯೆ ತೋಡಿ, ದೇಶಾಕ್ಷಿ, ಧನ್ಯಾಸಿ, ಮಾಳವ, ಶ್ರೀ, ವರಾಳಿ, ವಾ
ಕಾಮೋದರಿ,ವಸಂತವಜ್ರ, ಪಂಚದೀಪ, ಘಂಟಾರಾವಾದ್ಯನೇಕವಿಧಂ

ಳಾದ ಕ್ರಿಯಾಂಗ, ರಾಗಾಂಗ, ರಾಗದೇಶೀಯುಮಾಗಂಬ ಭೇದಂಗಳಂ ಕೂಡಿ ಧ್ರುವ, ಮಟ್ಟೆಯ, ಅಟ, ರೂಪಕ, ರಜಾದಿ ಸಪ್ತತಾಳಕ್ರಮದಿಂ ಪಾಡಿ, ಲಾಗು, ಮೋಡಿ, ಚಮತ್ಕಾರ, ರಿಘ್ಘಣಿ, ಪಹರಣೆಗಳೆಂಬ ನಾನಾ ಶಬ್ದಂಗಳಂಬಾರಿಸಿ ಸಭಿಕರಂ ವಿಸ್ಮಯಗೊಳಿಸುತ್ತಿದ್ದನು. ನರ್ತನಕ್ಕಾರಂ ಭವಾಯಿತು. ಸುರಸುಂದರಿಯರು ನಾಟ್ಯವಾಡಲಾರಂಭಿಸಿದರು. ಒಬ್ಬಳು ಸುರಂಗಿ, ಮತ್ತೊಬ್ಬಳು ಕುರಂಗಿ, ಮಗದೊಬ್ಬಳು ಮೃದ್ವಂಗಿ. ಸುಂದರಿ ಯೋರ್ವಳುವದನದೊಳು ಹಾವವಂತೋರಿ,ಚಿತ್ತದೊಳು ಭಾವಂಕಾಣಿಸಿ, ವಿಲಾಸಮಂ ಅಕ್ಷಿಗಳೊಳುಹೂಡಿ ಭ್ರೂಯುಗ್ಮದೊಳ್ ವಿಭ್ರಮಮಂ ನಿ ಲ್ಲಿಸಿ, ತಡ, ವಿತ್ತಡ, ನಯನವಿಶೇಷ, ಡಿಳ್ಳಾಯಿ, ತಿರಿಂಪು, ಪಯ, ಪಾಡು, ಮುಲಾಸೇತ್ಯಾದಿ ಕರಣಂಗಳೊಡನೆ ನರ್ತಿಸಿದಳು. ಮತ್ತೊಬ್ಬ ಚತುರೆಯು ಹೊಳಪು, ತಿರುಪು, ಸಮಸೂಚಿ, ವಿಷಮಸೂಚಿ, ಕೂರ್ಮ, ನಾಗಬಂಧೇ ತ್ಯಾದಿ ಕರಣಾಗಳೊಂದಿಗೆ ಲಾಸ್ಯ, ತಾಂಡವವೆಂಬೆರಡು ನೃತ್ಯಭೇದಂಗಳಂ ತೋರಿಸಿ ಸಭ್ಯರಂ ಬೆರಗುಮಾಡಿದಳು. ಮಗದೋರ್ವಬಿಂಬಾಧರೆ ನಾಟ್ಯಂ ಗಳಲ್ಲಿ ಬಲುಪಿನೊಳು ಮುಖ್ಯವಾದ ಜಯಶಯನ, ಮತ್ಸ್ಯಪುಟ, ಲಂಕಾ ದಹನ ವೇತ್ರಾದಿ ಪ್ರಭೇದಂಗಳಂ ನಾಟ್ಯರೂಪದಿಂತೋರಿ ಪುರಹೂತನಿ ಚ್ಛೆಯಂ ನೆರವೇರಿಸಿದಳು. ಇಂದ್ರನು ಇವರ ಚಮತ್ಕಾರಂಗಳಂ ನೋಡಿ ತಲೆದೂಗಿ ಅವರಿಗೆ ಬೇಕಾದುದಂ ಸಾಕಾದಷ್ಟುಕೊಟ್ಟು ಮನ್ನಿಸಿ ಕಳುಹಿಸಿ ದನು. ನಾಟ್ಯವಾಯಿತು. ಸಂಗೀತವು ನಿಂತಿತು. ನ್ಯಾಯ, ತರ್ಕ, ವೇದ, ವೇದಾಂತಗಳ ವಿಚಾರವು ನಡೆಯಿತು. ಇತ್ಯಾದಿ ಇತ್ಯಾದಿ ಸಕಲರಂ ತೃಪ್ತಿ ಗೊಳಿಸಿ ಅವರವರ ಕೆಲಸಗಳಿಗೆ ಕಳುಹಿಸಿಕೊಟ್ಟು ಮಿತಪರಿವಾರದೊಡನೆ ತಾಪಸವೃಂದಮಂ ದೃಷ್ಟಿಸಿದನು. ಸಮಸ್ತ ಮುನಿಗಳೂ ಇಂದ್ರನಂ ಕೊಂಡಾಡಿ ಆ........ಆನಂದ ಸಮುದ್ರದಲ್ಲಿ ತಡಿಯಂ ಕಾಣದಿದ್ದಾಗ ಅತ್ಯಂತ ಖಿನ್ನನಾಗಿಯೂ ಯೋಚನಾಪರನಾಗಿಯೂ ಕುಳಿತುಕೊಂಡಿರುವ "ಪುಣ್ಯಕ" ಮುನೀಶ್ವರನಂನೋಡಿ ಎಲೈ ಮಹಾತ್ಮನೆ! ಅಪಾರಸಂತೋಷ ದಿಂದೀ ನಾಕಲೋಕವೇ ಅಲ್ಲೋಲಕಲ್ಲೋಲವಾಗಿರುವಾಗ ನೀನು ಮಾತ್ರವೇ ಹೀಗೆ ಖಿನ್ನನಾಗಿರುವುದೇಕೆ? ಎಂದು ಕೇಳುವ ದೇವನಾಥನಂ ನೋಡಿ ಪುಣ್ಯಕನು ಎಲೈ ಸತ್ಯಾಶ್ರಯನೆ ! ಈದೃಶ ನಶ್ವರವಾದೀ ಕಲಾವಿ

ಲಾಸಂಗಳಂ ನೋಡಿ ನೋಡಿ ಈ ವಿಲಾಸ ಭವನದಲ್ಲಿ ವಿಲಾಸದಿಂದಿರುವೆ. ಸಚ್ಚರಿತ್ರಮನೊಲ್ಲದೆ ಚಚ್ಚರದಿಂದಮೆಚ್ಚಿ ಬರುವ ಸೊಕ್ಕುಜವ್ವನೆಯರಾದ ಈ ವಚ್ಚಲೆಯರಂನೋಡಿ ಹೃಷ್ಟಾಂತರಂಗನಾಗಿರುವೆ. ಆ ಭಾವಜನಯ್ಯನ ಭಾವವನ್ನರಿಯದೆ ಅಹಂಭಾವದಿಂ ಪರಿಪರಿಯಾಗಿ ಭಾವಿಸಿ ಉನ್ಮತ್ತರಂತೆ ಇರುವ ಹತಭಾಗ್ಯರಾದೀ ಕಿನ್ನರೆಯರಂ ಮನ್ನಿಸುತ್ತಿರುವೆ. ಲೋಕೋತ್ತರವಾದ ಸುರತರು-ಕಾಮಧೇನು, ಉಚ್ಚೈಶ್ರವ, ಐರಾವತಂಗಳಂ ಆರಾಮನಿಧಿಗಳಂ ಸಾರತರ ನೃತ್ಯಗೀತಂಗಳಂ ನೋಡಿ—ಕೇಳಿ ಬಾರಿಬಾರಿಗೂ ಕುಣಿಯುತ್ತಿರುವೆ. ಕಲ್ಯಾಣಶೀಲನೂ, ಪರಂಧಾಮನೂ ಆದ ಶೇಷಶಯನನಂ ಮರೆಯಿಸುವ ಈ ಭೋಗಭಾಗ್ಯಂಗಳಂ ನಂಬಿನಂಬಿ ಆಶಿಸುತ್ತಿರುವೆ. ಇದಂತಿರಲಿ. ನಾಕೇಶನೆ ! ಅಸತೀತ್ವಮಂನೋಡಿ ನೀನು ಇಷ್ಟು ಆನಂದಿಸುವಾಗ ನೈಜ ಸತೀತ್ವಮಂನೋಡಿ.... ...ಕೇಳಿ........ತಿಳಿಯುವೆ ಯಾದರೆ ನಿನ್ನಾನಂದಕ್ಕೆಪಾರವಿರದು ! ಅಸತ್ತನ್ನು ಸತ್ತಾಗಿಭಾವಿಸುವವನಿಗೆ ಪುಣ್ಯಪರಿಪಾಕದಿಂದ ಸತ್ತೆಂಬುವದೇ ಗೋಚರಿಸಿದರೆ ಅವನ ಸಂತೋಷಕ್ಕೆ ಣೆಯುಂಟೆ ? ದೂರದಲ್ಲಿರುವ ಮರುಮರೀಚಿಕೆಯಂ ನೋಡಿ ಜಲವೆಂದೆಣಿಸಿ ದಾಹಗೊಂಡೋಡಿ ಬರುತ್ತಿರುವ ಮಾರ್ಗಸ್ಥನಿಗೆ ನಿಜವಾಗಿಯೂ ನಿರ್ಮಲೋದಕವು ದೊರೆಯುವುದಾದರೆ ಅವನ ಆತ್ಮಸಂತುಷ್ಟಿಯ ಭಾಗ್ಯವನ್ನು ವರ್ಣಿಸುವದಕ್ಕಾಗುವದೆ ? ಎಂದಿಗೂ ಇಲ್ಲ. ಎಲೈ ಶಚೀಂದ್ರನೆ ! ಈ ಲೋಕದಮಾತು ಹಾಗಿರಲಿ. ಸುದತಿಯರ ಸಚ್ಛೀಲಮಂ ಪರೀಕ್ಷಿಸಲು ಬಂದ ತ್ರಿಮೂರ್ತಿಗಳನ್ನೇ ಶಿಶುಗಳನ್ನಾಗಿಮಾಡಿ ತೊಟ್ಟಿಲಿನಲ್ಲಿಹಾಕಿ ಜೋಗುಳಮಂ ಪಾಡಿದ ಆ ಸಾಧ್ವೀಮಣಿಯ ಜನ್ಮಕ್ಷೇತ್ರವಾದ ಭೂತಲಲೋಕಮಂ ಹೊಂದಿ ಪರೀಕ್ಷಿಸುವನಾಗು. ಅಂತಹ ರಮಣಿಯರು ಒಬ್ಬರಲ್ಲ ಇಬ್ಬರಲ್ಲ. ನೂರಾರುಜನರು ಆಗಿಹೋಗಿರುವರು. ಭೂತಲಲೋಕದ ರಮಣಿಯರ ವಿಚಾರವು ನಿನಗೆ ತಿಳಿದಿಲ್ಲವಾಗಿ ನಂಬುತ್ತೇನೆ.

ವನಜನೇತ್ರೆಯರು ಕೈರವ ಸುನೇತ್ರೆಯರು ಕಾಂ ।
ಚನ ಕರ್ಣಪತ್ರೆಯರು ಮಾಂಗಲ್ಯ ಸೂತ್ರೆಯರು ।
ವಿನುತಗುಣಗಾತ್ರೆಯರು ಪಾವನಚರಿತ್ರೆಯರು...........॥
ನಾರಿಯರು ಸುಪತಿ ವ್ರತಾಗುಣದ ಸಹಜ ಶ್ರೈಂ ।

ಗಾರೆಯುರು ಲಾವಣ್ಯ ರಸಭರಿತ ಮೋಹನಾ ।
ಕಾರೆಯುರು ಶುಭಲಕ್ಷಣಂದಳೆದ ಕೀರ್ತಿವಿಸ್ತಾರೆಯುರು ಕಂಗೊಳಿಸುವಾ॥
ನಾರಿಯುರು ಸತ್ಪಥವಿಹಾರೆಯುರು ನಿರ್ಮಲ ಶ ।
ರೀರೆಯುರು ನಿತ್ಯಸುವಿಚಾರೆಯುರು ನೆರೆಸದಾ ।
ಚಾರೆಯುರು ಪರಮ ಸಂಸ್ಕಾರೆಯುರು........................॥

(ಭಿಕ್ಷಾಟನಚರಿತೆ.)

ಇಂತಹವರೆಲ್ಲರೂ ಇರುವರು. ಇದಕ್ಕಿಂತಲೂ ನಿನಗೇನುಬೇಕು? ಅವರ ಸಚೀಭಲಪ್ರಭಾವಮಂನೋಡಿ ನೀನು ಬೆರಗಾಗಿಹೋಗುವೆ ಎಂದು ಹೇಳಿ ರಾಗಧಾಮನಂ ಸೇವಿಸಲು ವೈಕುಂಠಧಾಮಕ್ಕೆ ಹೊರಟನು. ಇಂದ್ರನು ಅತ್ಯಂತ ಕೌತೂಹಲಾವಿಷ್ಟನಾಗಿ ಭೂಲೋಕ ಸೌಂದರ್ಯಮಂ ಸೌಶೀಲ್ಯ ಸಾರಮಂ - ತಿಳಿಯಲೆಳಸಿ ಸಭೆಯಂಮುಗಿಸಿ ತನ್ನಾಪ್ತರೊಡಗೂಡಿ ಭೂಲೋಕತಿಲಕವಾದ ಭಾರತಮಂ ನೋಡಲಾಶಿಸಿ ಪ್ರಯಾಣಮಾಡಿದನು. ಭೂಲೋಕ ಚಿತ್ರವಿಚಿತ್ರಂಗಳಂ ನೋಡಿನೋಡಿ ಹಿಗ್ಗುತ್ತ ಬರುತ್ತಿದ್ದ ಅಮರನಾಯಕನಿಗೆ ಕಾಲಭೇದವಿಲ್ಲದೆ ಸದಾಕಾಲದಲ್ಲಿಯೂ ಚಿಗುರು ಹೀಚು ಕಾಯಿಹಣ್ಣುಗಳಿಂದಕೂಡಿರುವ ಫಲವೃಕ್ಷಂಗಳಿಂದಲೂ, ಕಂದಮೂಲಸಮೃದ್ಧಿಯಿಂದಲೂ, ಅರವಿಂದ, ಅಶೋಕ, ಚೂತ, ನೀಲೋತ್ಪಲ, ಸುರಹೊನ್ನೆ, ಹೊನ್ನೆ ಜಾಜಿ ಮಲ್ಲಿಕಾ ಮೊದಲಾದಪೂಗಳ ಸಮೃದ್ಧಿಯಿಂದಲೂ, ಪರಸ್ಪರ ಮೈತ್ರಿಯಿಂದಾನಂದಿಸುತ್ತಿದ್ದ ಮೃಗಪಕ್ಷಿಗಳಿಂದಲೂ, ಚಿತ್ರವಿಚಿತ್ರವಾದ ಲತೆಗಳಿಂದಲೂ, ಪುಷ್ಪಿಸಿರುವ ಲತೆಗಳೊಡನೆ ಕೂಡಿಕೊಂಡಿರುವ ವೃಕ್ಷಂಗಳಿಂದಲೂ, ಘಮಘಮಿಸುವ ಪೂಗಳ ಮಧುವಂ ಕುಡಿದು ಮುದದಿಂ ಕೂಡಿದ ಗಾನದಿಂ ಮತ್ತತೆಯನ್ನುಂಟುಮಾಡುವ ಮಧುಪಾಳಿಗಳಿಂದಲೂ, ಹರಿಯೊಡನೆ ನೆಗದಾಡುವ ಮೃಗಶಾಬನ ಸವಿನೋಟನಿಂದಲೂ, ನಿರ್ಮಲೋದಕಮುಳ್ಳ ಕಾಸಾರಗಳಿಂದಲೂ, ಸಮಿತ್ಕುಶಂಗಳಿಗಾಗಾರಪಾಗಿರುವ ನದಿಯಿಂದ ಕೂಡಿರುವ ವಿಸ್ತಾರವಾದೊಂದು ತೋಟದಲ್ಲಿ ವಿಧಾತನ ಯೋಗಮುದ್ರಾಶಾಲೆಯೋ (ಚಿತ್ತಶಾಂತಾಗಾರವೋ) ಶಾಂತಿಯ ತೌರುಮನೆಯೋ ಎಂಬಂತಿರುವ ಪರ್ಣಕುಟೀರವು ದೃಗ್ಗೋಚರವಾಯಿತು. ಸಹಸ್ರಾಕ್ಷನು ಮುದಿತಹೃದಯನಾಗಿ ತನ್ನ ಗೆಳೆಯನಂ ಕುರಿತು ಗೆಳೆಯ! ಈ ತೆರನಾದ ಗಹನಾರಣ್ಯದಲ್ಲಿರುವ ಈ ತೋಟದಲ್ಲಿ ಯಾರಿರುವರು? ಗೆಳೆಯ:—ತಾಪಸೋತ್ತಮನ ಮಗಳೊಬ್ಬಳು. ತಾಪಸಿ. (ಸ) ಇನ್ನಾರಾದರೂ ಆರುವರೆ? (ಗೆ) ಇಲ್ಲ. ಅವಳು ಏಕಾಕಿನಿ (ಸ) ಅವಳಿಗೆ ಮಗಳೊಬ್ಬಳು....ಸಂಸಾರ ಮತ್ತು ಮಕ್ಕಳೂ ಇರುವರೆ? ಹಾಗೆ ಇಲ್ಲವಾ

ದರೆ ಏಕಾಕಿನಿಯಾಗಿರುವ ಕಾರಣವು ಯಾವುದು ? (ಗೆ) ಮಹಾಶಯ ! ಆ ವಿಚಾರವು ಯಾರಿಗೂ ತಿಳಿಯದು. ಅವಳ ಸೌಂದರ್ಯಕ್ಕಾಶಿಸಿ ಅನೇಕ ರಾಜಾಧಿರಾಜರುಗಳು ಪಾಣಿಗ್ರಹಣವಂ ಮಾಡಿಕೊಳ್ಳಲೆಳಸಿ ಭಗ್ನಮನೋರಥರಾಗಿರುವರು. ಅವಳು ತೇಜೋರೂಪಿ, ಬ್ರಹ್ಮಚಾರಿಣಿ. ಕೆಲಹೊತ್ತು ತನ್ನಿಂದ ಲಾಲಿತ ಪಾಲಿತವಾದ ಹಕ್ಕಿ ಪಕ್ಕಿಗಳೊಡನೆ ಆಟವಾಡುವಳು. ಮಿಕ್ಕಕಾಲವನ್ನು ಈಶ್ವರಧ್ಯಾನದಲ್ಲಿ ಕಳೆಯುವಳು, ಎಂದು ಹೇಳಿದುದಂ ಕೇಳಿ ಇಂದ್ರನು ಸಾಶ್ಚರ್ಯದೊಡನೆ ಗೆಳೆಯ ! ನೀನೊಂದುಕಡೆ ವಿಹರಿಸುತ್ತಿರು. ಪರಿವಾರವು ಬೇರೊಂದುಕಡೆ ಇರಲೆಂದಾಜ್ಞಾಪಿಸಿ ತಾನೊಬ್ಬಭಿಕ್ಷುಕನ ವೇಷವಂಧರಿಸಿ ಪರ್ಣಶಾಲೆಯ ಬಾಗಿಲಿನಲ್ಲಿ ನಿಂತುಕೊಂಡನು.



ಶ್ರುವಾವತಿ.

ಆಗತಾನೇ ಧ್ಯಾನದಿಂದ ಬಹಿರ್ಮುಖಳಾದ ಯೋಗಿನಿಯು ಮಯೂರ ಕಂದನಿಗೆ ಪಾಲಂನೀಂಟ ತನ್ನ ಭುಜದಮೇಲೆ ಕೂರಿಸಿಕೊಂಡು ಎಳೆಬಿಸಿಲಂ ನೋಡಿ ತನ್ನ ಕೇಕಾರವದಿಂ ಗೆಳೆಯರಂ ಕರೆದು ನರ್ತಿಸಲೆತ್ನಿಸುತ್ತಿರುವ ಸಹಸ್ರಾಕ್ಷನಂ ಮುದ್ದಿಸುತ್ತಾ ಕೈಮೇಲೆ ಕುಳಿತುಕೊಂಡು ಕಲಕಲಾರವದಿಂ ಕಾಲಮಂ ಕಳೆಯಿಸುವ ಕಲಕಂಠನೊಡನೆ ಕಲಾವಿಶೇಷಂಗಳಂ ಪೇಳುತ್ತ ಹೊರಗೆಬಂದು ಕ್ಷುತ್ಪಿಪಾಸಾದಿಗಳಿಂದ ಕಡುಬಳಲಿರುವಂತೆ ತೋರುತ್ತಿರುವ ಭಿಕ್ಷುಕನಂ ನೋಡಿ ಅರ್ಘ್ಯಪಾದ್ಯಾಚಮನಂಗಳಿಂದ ಸತ್ಕರಿಸಿ ನಮಸ್ಕರಿಸಿ ಎಲೈ ಮಹಾಮಹಿಮನೆ! ನೀನು ಬಂದುದರಿಂದ ಈಕುಟೀರವು ಪವಿತ್ರವಾಯಿತು. ನಾನು ಧನ್ಯಳು ಈ ವ್ಯಾಘ್ರಾಸನಮಂ ಸ್ವೀಕರಿಸಿ ಈ ವ್ಯಜನಮಂ ಕೈಕೊಂಡು ವಿಶ್ರಮಿಸಿಕೊಂಡು ಈ ದಿವಸದ ಆತಿಥ್ಯಮಂ ಸ್ವೀಕರಿಸಿ ನನ್ನಂ ಕೃತಕೃತ್ಯಳನ್ನಾಗಿ ಮಾಡಬೇಕೆಂದು ಅಂಗಲಾಚುತ್ತಿರುವ ಸುದತಿಯಂ ನೋಡಿ ಇಂದ್ರನು ಎಲೌ ಸ್ತ್ರೀಯೆ ! ನೀನುಯಾರು ? ನಿನ್ನ ಮಾತಾಪಿತೃಗಳೆಲ್ಲಿರುವರು ? ನನ್ನಂ ಸತ್ಕರಿಸುತ್ತಿರುವ ನಿನ್ನ ವಿಚಾರಮಂ ಸವಿಸ್ತಾರವಾಗಿ ತಿಳಿಸು. ಏಕೆಂದರೆ ಕುಲಗೋತ್ರಂಗಳಂ ವಿಚಾರಿಸದೆ ಅಪರಿಚಿತಳಾದ ನಿನ್ನಲ್ಲಿ ಆತಿಥ್ಯಮಂ ಸ್ವೀಕರಿಸೆನು. ಕ್ಷುಧಾತುರವು ಬಹು ಶೋಚನೀಯವಾದುದು.

ಶ್ಲೋಕ॥ ಆದಾರೂಪವಿನಾಶಿನೀ ಕೃಶಕರೀ ಕಾಮಾಂಕುರಛ್ಛೇದಿನೀ ।
ಪುತ್ರಾಮಿತ್ರ ಕಳತ್ರ ಭೇದನಕರೀ ಗರ್ವಾಂಕುರಛ್ಛೇದಿನೀ ।
ಕಾಮಂ ಮಂದಕರೀತಪಃಕ್ಷಯಕರೀಧರ್ಮಸ್ಯ ನಿರ್ಮೂಲಿನೀ।
ಸಾಮಾಂಸಂಪ್ರತಿಸರ್ವರೋಗಜನನೀಪ್ರಾಣಾಪಹಾರೀಕ್ಷುಧಾ ॥

ಎಂಬಂತೆ ಹಸಿವಿನಿಂದ ಪ್ರಾಣವು ಕಂಠಗತವಾಗುತ್ತಿರುವುದು (ಯೋಗಿನಿ)—ಎಲೈ ಸತ್ಯಾಶ್ರಯನೆ ! ನನ್ನ ವಿದ್ಯಮಾನಗಳನ್ನೂ ಪೂರ್ವಚರಿತ್ರಗಳನ್ನೂ ನಿನ್ನ ತಪೋಮಹಿಮೆಯಿಂದಲೇ ತಿಳಿದುಕೊಳ್ಳಬಹುದಾಗಿ ನಿನ್ನ ಸೇವೆಯಂ ಮಾಡುವದಕ್ಕೆ ಅಯೋಗ್ಯಳಾದ ನಾನು ನಿನ್ನಂ ಹೇಗೆ ಸತ್ಕರಿಸಬಲ್ಲೆನು ? (ಇಂ) ಸುಂದರಿ ! ಪ್ರಕೃತಸ್ಥಿತಿಯಲ್ಲಿ ಯಾವುದನ್ನೂ ತಿಳಿಯಲಾರೆನು. ಕ್ಷುಧೆಯಿಂ ಬಳಲಿ ಕಂಗಾಲಾಗಿ ಬಿದ್ದುಹೋಗುತ್ತಿರುವ ನನ್ನಲ್ಲಿ ನೀನು ಯಾರೆಂಬುದನ್ನು ಕೃಪೆಮಾಡಿ ಹೇಳುವಳಾಗು (ಯೋ)

ಎಲೈ ಮಹಾನುಭಾವನೆ! ನಾನು ಮಹಾತ್ಮನೂ, ಜ್ಞಾನಸಮುದ್ರನೂ, ಆದ ಮಹಾ ತಪಸ್ವಿಯಾದ ಭರದ್ವಾಜನಮಗಳು. ನನ್ನನ್ನು "ಶ್ರುವಾವತಿ" ಎಂದು ಕರೆಯುವರು. (ಇಂದ್ರನು) (ಗುಡಿಬಿದ್ದ ನೆಲವಂ ನೋಡು ತ್ತಿದ್ದ ತನ್ನ ಕಣ್ಣುಗಳನ್ನು ಮೇಲಕ್ಕೆತ್ತಿ ಸಂದೇಹವಂ ಸೂಚಿಸುತ್ತಾ) ಎಲೈ ಯೋಗಿನಿಯೇ! ನೀನು ಆ ಮಹಾತಪಸ್ವಿಯಾದ ಭರದ್ವಾಜ ಋಷಿ ಯುಮಗಳೇ? ನಿನ್ನ ತಂದೆ ಎಲ್ಲಿರುವನು? (ಯೋ) ಎಲೈ ಅತಿಥಿಯೇ ನನ್ನ ಜನ್ಮದಾತನು ನನ್ನ ಇಷ್ಟದಂತೆ ನನ್ನ ಜೀವನಕ್ಕೆ ಸಾಕಾದಷ್ಟನ್ನೇ ಪಡಿಸಿ....ಸತ್ಪಥವಂತೋರಿಸಿ....ಹಿಮವತ್ಪರ್ವತದಲ್ಲಿ ತಪೋನಿಷ್ಟನಾಗಿರು ವನು. (ಇಂ) ಮಹಾಭಾಗಳೇ! ಇದೊಂದು ದೊಡ್ಡದಾದ ಆಶ್ಚರ್ಯ ವೇಸರಿ! ಮುನಿಪುಂಗವನಾದ ಭರದ್ವಾಜನಿಗೆ ನೀನು ಮಗಳಾದರೆ........ ನಿನ್ನ ತಾಯಿಯು ಯಾರು? ಏಕಾಂಗಿಯಾಗಿ ನಿನ್ನನ್ನು ಇಲ್ಲಿ ಬಿಟ್ಟು ಹೋಗಲು ಕಾರಣವೇನು? ತಾಪಸೋತ್ತಮರ ಹೃದಯವು ಅಷ್ಟು ಕಠಿ ಣವಾದುದೆ? (ಯೋ) ಮಹಾತ್ಮನೆ! ನನ್ನ ತಾಯಿಯು ಅಪ್ಸರಾಂಗನೆ ಯರಲ್ಲೊಬ್ಬಳು. ಅವಳ ಹೆಸರು "ಘೃತಾಚಿ" ಎನ್ನುವರು-ಆಕೆಯನ್ನು ನಾನು ನೋಡಿಲ್ಲ-ನನ್ನ ಜನ್ಮಧಾರಿಣಿಯನ್ನು ನೋಡುವಸಲುವಾಗಿ ಎಷ್ಟು ಪ್ರಾರ್ಥಿಸಿಕೊಂಡಾಗ್ಯೂ ಮದಾಂಧನಾದ ಧನಿಕನ ಹತ್ತಿರ ಹೇಳಿಕೊಳ್ಳುವ- ನಿರ್ಧನನ ಪ್ರಾರ್ಥನೆಯಂತಾಯಿತು. ನನ್ನ ತಾಯಿಯು ಹತಭಾಗ್ಯಳಾದ ನನಗೆ ಸಂದರ್ಶನವಂ ಕೊಡಲೇ ಇಲ್ಲ. ನನ್ನ ತಂದೆಯು ನನ್ನ ಜೊತೆ ಯಲ್ಲಿರಲು ಇಷ್ಟಪಡದೆ ನನ್ನ ಕೋರಿಕೆಯಂತೆ ಅನೇಕಶಾಸ್ತ್ರಗಳಂ ಕಲಿಸಿ ಈ ಮನೋಹರವಾದ ತೋಟದಲ್ಲಿ ಬಿಟ್ಟು ಹೊರಟುಹೋದನು. ನಾನು ಪುನಃ ಅವನನ್ನು ನೋಡಲಿಲ್ಲ. ಸಾಧ್ಯವಾದಷ್ಟು ಕಾಲವನ್ನು ಪರಮಾತ್ಮನ ಧ್ಯಾನದಲ್ಲಿ ಕಳೆಯುತ್ತಾ ಈರೀತಿ ದಿವಸಗಳಂ ಕಳೆಯುತ್ತಿರುವೆನು. ಎಂದು ಖೇದದಿಂದ ಹೇಳಿದಳು. (ಇಂದ್ರ) ಎಲೈ ರಮಣಿಯೇ! ನಿನ್ನ ಚರಿ ತ್ರವಂ ಕೇಳಿ ನನ್ನ ಮನವು ಪಶ್ಚಾತ್ತಾಪಹೊಂದಿರುವುದು-ಆದರೂ ನಿರ್ಲ ಜ್ಜೆಯಾದ ಕ್ಷುಧೆಯು ನಿನ್ನನ್ನು ಅಡಿಗೆಯಂಮಾಡಿ ಕೊಂಚ ನೀಡುವಂತೆ ಕೇಳಲು ಪ್ರೇರಿಸುತ್ತಿರುವುದು. ಹಾಯ್! ಎಲೌ ಸುದತಿ! ಅಸಮಾನ ಸೌಂದರ್ಯವುಳ್ಳ ನಿನ್ನಂತಹ ಸುಭಗೆಯರು ಅವಿವಾಹಿತರಾಗಿ ಈರೀತಿ ಇರು

ವ್ರದು ಶೋಚನೀಯವು (ಯೋ) ಎಲೈ ವೇದವಿದನೆ! ದಯಪಿಟ್ಟು ವಿಶ್ರ ಮಿಸಿಕೊಳ್ಳುವವನಾಗು. ಹಸಿದುಬಂದಿರತಕ್ಕ ಅತಿಥಿಯಂ ಗೃಹದ್ವಾರದಲ್ಲಿ ನಿಲ್ಲಿಸಿ ಇಂತಹ ಅನುಪಯುಕ್ತ ವಿಷಯಗಳಿಂದ ಕಾಲಯಾಪನವಂ ಮಾಡು ವುದು ಧರ್ಮ ವಿರುದ್ಧವು. ಭಾರತ ರಮಣಿಯರು ಸರಳಹೃದಯರು— ಆದುದರಿಂದ ಮೊದಲು—ಅಡಿಗೆಯಂ ಮಾಡಿ ನಿಸ್ನಂ ಸಂತುಷ್ಟಿಗೊಳಿಸಿದ ನಂತರ ಮಿಕ್ಕ ನನ್ನ ವಿಚಾರಗಳಂ ಹೇಳಲಾಶಿಸುತ್ತೇನೆ. ಕೃಪೆಮಾಡಿ ಅಪ್ಪಣೆಯಂ ಕೊಡು, ಎಂದು ಹೇಳಿ ಅವಸರವಸರದಿಂದ ಭೋಜನ ಸಾಮಗ್ರಿಯಂಗಳಂ ಸಜ್ಜೆಗೊಳಿಸಲು ಹೊರಟುಹೋದಳು. ವಾಚಕ! ಈಗತಾನೇ ಹೊರಟುಹೋದ ಸುಂದರಿಯಂ ನೋಡಿದಿರಾ! ನಿಮ್ಮಿಷ್ಟ ದಂತೆ ವರ್ಣಿಸಬೇಕೆನ್ನುವಿರಾದರೆ ಆ ಶಾಂತಮೂರ್ತಿಯಂ ವರ್ಣಿಸಲು ನಾನೆ ಷ್ಟರವನು? ಲತಾಂಗಿ, ಕೃಶಾಂಗಿ, ತನ್ವಂಗಿ ಎಂದು ವರ್ಣಿಸೋಣವೆ? ಅನೂ ಸರಿಯಲ್ಲ. ಅಥವಾ ನಮ್ಮ ಸೊಬಗಿನಕಣಿಯಂ ವರ್ಣಿಸಬೇಕೆಂ ದಾಶಿಸುವರಿಗೆ ಆ ಮಹದ್ವೀಪಿನದಲ್ಲೇನುತಾನೇ ಸಿಗುವವು? ಸಹೃದಯರೆ! ಆ ಕಾಡಿನಲ್ಲಿರುವ ಪುಷ್ಪಂಗಳಂನೋಡಿ ವರ್ಣಿಸಬಹುದೆಂದರೆ.......... ಸಾಧ್ಯವಾದರೆ ಸರಿ. ನನ್ನದೂ ಒಪ್ಪಿಗೆ. ಸುಂದರಿಗೆ ಹೆಚ್ಚು ವಯಸಿಲ್ಲ. ಸುಮಾರು ೧೮—೨೦ ಸಂವತ್ಸರಂಗಳಿರಬಹುದು. ಧವಳಾಂಗಿ ಎಂದರೆ ಸಲ್ಲುವದು. ಅಲ್ಲಿನೋಡಿ! ಮಲ್ಲಿಗೆಯಂತಿರುವ ಹಲ್ಲುಗಳು. ಜಪಾಕು ಸುಮದಂತಿರುವ ತುಟಿ. ಗುಂಡುಮಲ್ಲಿಗೆಯಂತೆ ಮಂದಹಾಸ, ಕನ್ನೈದಿಲೆ ಯಂತಿರುವ ಕಣ್ಣುಗಳು, ಶಿರೀಷಕುಸುಮದಂತಿರುವ ಮೃದು ತೋಳ್ಗಳು, ಕೇದಿಗೆಯಪ್ರೂವಂತಿರುವ ಉಗುರುಗಳು, ಕಮಲದಂತಿರುವ ಮುಖ, ಸಂಪಿ ಗೆಯ ಪೂವಿನಂತೆ ನಸು ನೀಟಾದ ಮೂಗು, ಎತ್ತಿ ಕಟ್ಟಿರುವಾದೀರ್ಘವೇ ಣಿಯ ಭಾರಕ್ಕೆ ಕೊರಗಿ ಸೊರಗಿತೆಂಬಂತಿರುವ ಕಟಿ, ಅಶೋಕದತಳಿರಂತೆ ಸೆವ ಪಾದದ್ವಯ, ವಿವೇಕಮಾರ್ಗವಂ ತೋರಿಸುವುದೋ ಎಂಬಂತಿರುವ ನೊಸಲಿನತಿಲಕ, ಅನೂಚಾಗಿತಾಪಸವೃತ್ತಿಯಂ ತೋರಿಸುವ ಆ ಶುಭ್ರವ ಲ್ಕಲ, ಇಷ್ಟು ಸಾಕು. ಮುಂದಾಗೋಣ. ಇಂದ್ರನು ಆಶ್ಚರ್ಯಾನ್ವಿತನಾಗಿ ಅಹಹ! ಈಕೆಯ ಸೌಂದರ್ಯದ ಜತೆಗೆ ಎಂತಹ ಸದ್ಗುಣಂಗಳು ಸೇರಿರು ವವು! ಶಾಂತಮಯಳಾದ ಭದ್ರೆಯ ಭಾಷಣವಂ ಕೇಳಿದುದಾಯಿತು.

ಶಮದಮಾನ್ವಿತಳಾದ ಈ ಸುಂದರಿಯ ಮನಸ್ಥೈರ್ಯವಂ ಪರೀಕ್ಷಿಸುವದ ಕ್ಕಾಗಿ ಬೇಕಾದಷ್ಟು ತೊಂದರೆಯಂ ಕಲ್ಪಿಸಬೇಕೆಂದಾಲೋಚಿಸಿ ಇಂದ್ರನು ವಾಸುಕಿಯವೇಷವಂ ಧರಿಸಿ ನದಿಗೆ ಹೋಗಿ ನೀರನ್ನು ತರುವ ಕಾಮಾ ಕ್ಷಿಯು ಬರುವನ್ನೇ ಕಾದು ತನ್ನ ವಿಶಾಲವಾದ ಹೆಡೆಯಂ ತಿರುಗಿಸುತ್ತಾ ಭಯಂಕರವಾದ ಬಾಯಿಯಂತೆರೆದು ಕ್ರೂರವಾಗಿರುವ ವಿಷಪಲ್ಗಳಂ ತೋರಿಸುತ್ತಾ ದಾರಿಯನ್ನಡ್ಡಗಟ್ಟಿದನು. ಇದನ್ನು ನೋಡಿದಾ ಶ್ರುವಾವ ತಿಯು ಹೆದರದೆ, ಎಲೈ ಸರ್ಪರಾಜನೆ! ಕೃಪೆಮಾಡಿ ನನ್ನಂ ಬಿಡುವವನಾಗು. ಅತಿಥಿಸತ್ಕಾರವಂಮಾಡಿ ಧನ್ಯತೆಯಂ ಹೊಂದಬೇಕೆಂದಾಶಿಸುತ್ತಿರುವ ನನಗೆ ತೊಂದರೆಯಂ ಕೊಡದಿರು. ಕ್ಷುಧಾತುರದಿಂ ಪ್ರಾಣಾವಸಾನ ನಿರೀಕ್ಷಣೆ ಯಲ್ಲಿರುವ ಭಿಕ್ಷುವಂ ಸಂತೋಷಪಡಿಸಿದ ನಂತರ ನಿನ್ನ ಬಳಗೆ ಬರುವೆನು. ನಾನು ಸಾವಿಗೆ ಹೆದರುವಳಲ್ಲ. ಯಾವಾಗಲೋ ಬಿದ್ದುಹೋಗುವ ಈನ ಶ್ವರ ದೇಹವಂ ಆಶಿಸುವಳಲ್ಲ. ಫಣೀಂದ್ರನೆ! ಶುಷ್ಕವಾದೀನಶ್ವರ ಕಳೇಬರವಂ ದಂಶನಮಾಡುವುದರಿಂದ ನಿನ್ನ ಹಲ್ಲುಗಳು ಎಷ್ಟುನೋಯು ವುವೊ! ಪರ್ಣಶಾಲೆಯಲ್ಲಿರುವ ಆ ಮಹಾತ್ಮನು ಕ್ಷುದ್ಬಾಧೆಯಿಂದ ಪ್ರಾಣ ವಿಸರ್ಜನವಂ ಮಾಡಿದುದಾದರೆ ಮಹಾಪಾಪವೆಂಬುವದು ಮಹಾತ್ಮನಾದ ನಿನಿಗೆ ತಿಳಿಯದ ವಿಚಾರವಲ್ಲ. ಭಾರತರಮಣಿಯರು ಶಾಂತಿಪ್ರಿಯರು ಮತ್ತು ಸರಳಹೃದಯರೆಂಬುದಕ್ಕೆ ಕಳಂಕವಂ ತರಬೇಡ. ನನ್ನಂ ಬಿಡುವ ನಾಗು. ಈರೇಳುಲೋಕಂಗಳಂ ನಿನ್ನ ತಲೆಯಮೇಲೆ ಹೊತ್ತುಕೊಂಡಿ ರುವೆ. ನೀಲಾಂಬರನೊಡನೆ ಲೀಲೆಯಂತೋರಿ ಆ ಬಾಲಗೋಪಾಲಗ ನ್ನೋವಿ ನೀಳಾಲೋಲನಾದ ನೀಲಮೇಘಶ್ಯಾಮನಂ ಪರ್ಯಂಕ ರೂಪದಿಂ ಸೇವಿಸುತ್ತಲಿರುವ ನಿನಗೆ ಈ ತಾಮಸಪ್ರಕೃತಿ ಯೆತ್ತಣದು? ಅಜಗರನೇ! ಮನೆಯಬಾಗಲಿಗೆ ಬಂದ ಅತಿಥಿಯಂ ಸತ್ಕರಿಸುವ ಭಾಗ್ಯವಿಲ್ಲದೆ ಮಾರ್ಗ ಮಧ್ಯದಲ್ಲಿ ಸರ್ಪದಷ್ಟಳಾಗಬೇಕೆಂಬುದೇ ಈಶ್ವರೇಛ್ಛೆಯಾಗಿರುವದಾ ದರೆ ಹಾಗೆಯೇ ಆಗಲಿ. ಎಂದು ಮುಂದುಮುಂದಾಗುತ್ತಿರುವ ಸೌಂದರ್ಯ ನಿಧಿಯಂನೋಡಿ ಕೋಪಾತಿರೇಕದಿಂದ ಜಲಕುಂಭವಂ ಪಿಡಿದುಕೊಂಡಿ ರುವ ಬಾಹುಯುಗ್ಮದೋಳ್ಗುರಿಯಾಗಿರುವ ತನ್ನ ದಂತಂಗಳಂ ಸವಣಿಸಿ ದನು. ಯೋಗಿನಿಯು ಲಕ್ಷಿಸದೆ ಜಾಗ್ರತೆ ಜಾಗ್ರತೆಯಾಗಿ ಒಂದು ಸಂತೋ

ಷದಿಂದ ವೈಶ್ವಾನರನಂ ಪ್ರಾರ್ಥಿಸಿ ನೀರಂಕಾಯಿಸತೊಡಗಿ ಅತಿಥಿಗುಪ ಭೋಗ್ಯವಾದ ಫಲಂಗಳಂ ತಗಲು ಆರಾಮುವನ್ನೈದಿದಳು. ವಿಷಪರಿಹಾರ ಕ್ಕಾಗಿ ಗರುತ್ಮಂತನಂ ಸ್ತುತಿಸಿದಳು. ಯಾವುದೋ ಕಾಡುಮೂಲಿಕೆಗಳ ರಸಮಂ ಘಾಯಕ್ಕೆ ಸವರಿದಳು, ಇಂದ್ರನು ಇದೆಲ್ಲಮಂ ನೋಡಿ ಹೇಗಾ ದರೂಮಾಡಿ ಫಲಂಗಳಂ ದೊರಕಿಸಿಕೊಡಕೂಡದೆಂದಾಲೋಚಿಸಿ, ರಮ ಣಿಯು ಕುಯ್ಯುಬೇಕೆಂಬ ಫಲಂಗಳಂ ಕೈಗೆ ಶಿಲುಕದಂತೆ ವೃಕ್ಷಾಗ್ರಮಂ ಪೊರ್ದಿಸಿದನು. ಕಮಲಮುಖಿಯು ಹತಾಶಳಾಗದೆ, ಕಷ್ಟಮಂ ಲೆಕ್ಕಿಸದೆ, ಅಸಮಾಧಾನಮಂಪೊರ್ದದೆ, ಕಣ್ಣೀರಂತುಂಬದೆ, ಕಲ್ಲುಮುಳ್ಳುಗಳ ತಗಲು ವಿಕೆಗಳಿಂದ ರಕ್ತಸೋರುತ್ತಿರುವ ಗಾಯುಗಳಂ ನೋಡದೆ, ವೃಕ್ಷದ ತುದಿ ಯನ್ನೇರಿ ಅತ್ಯಂತ ಸಾಹಸದಿಂದ ಫಲಂಗಳಂ ಕುಯಿದುತಂದು ಬೇಯಿಸಿ ಪಕ್ವಮಂಮಾಡಿ ಭಿಕ್ಷುವಂಪ್ರಾರ್ಥಿಸಿ ಉಣಬಡಿಸಿದಳು. ಇಂದ್ರನು ಈಕೆಯ ಮನೋಧೈರ್ಯಕ್ಕೆ ತಲೆದೂಗುತ್ತಾ ಎಲೈ ಸುಭಗೆ! ನಿನ್ನ ತೋಳಿನ ಮೇಲೆ ಘಾಯಂಗಳೆಂತಾದುವು? ಶರೀರಾದ್ಯಂತವೆಲ್ಲವೂ ಘಾಯಗಳಿಂದಲೂ ಮುಳ್ಳು ಗೀಚುಗಳಿಂದಲೂ ರಕ್ತವು ಸುರಯುತ್ತಿರುವುದೇಕೆ ? ಎಂದು ಕೇಳಿದ ದೇವೇಂದ್ರನಂನೋಡಿ ಬಹುಕಷ್ಟದಿಂದ ನೋವಂ ಸೈರಿಸಿಕೊಂಡು ಭಗವದ್ರೂಪಿಯೇ ! ಕಾಡಿನಲ್ಲಿ ವಾಸಿಸುತ್ತಿರಾವ ನಮಗೆ ಇಂತಹ ವಿಷ ಯಗಳು ಅಪರಿಚಯುವಾದುವುಗಳಲ್ಲ. ಮಾಡುವಕೆಲಸದಲ್ಲಿ ಕೊಂಚ ಅಜಾಗ ರೂಕಳಾಗಿದ್ದುದರಿಂದ ಇವುಗಳಂ ದೊರಕಿಸಿಕೊಂಡೆನು. ಅಷ್ಟೇ! ಅವು ಗಳು ಈಗ ನೋಯುವುದಿಲ್ಲ. (ಇಂ) ಎಲೈ ಭಾಮೆ ! ಈರೀತಿಯಾದ ಘಾಯಂಗಳು ಪದೇಪದೇ ನಿನಗಾಗುವುದೇ ? (ಶ್ರು) ಯಾವಾಗಲಾದರೂ ಹಾಗೆ ಆಗುವುದಾದರೆ ನಾನು ದುಃಖಿಸುವುದಿಲ್ಲ. (ಇಂ) ಏಕೆ ? ಅದು ಹೇಗೆ ? ಈ ಮಿಥ್ಯಾಪ್ರಪಂಚದಲ್ಲಿ ಜನ್ಮಧಾರಣಮಂ ಮಾಡಿರುವ ಮಾನವ ರಾದ ನಮಗೆ ಇವು ಕ್ಲೇಶ ಸಹಿಷ್ಣುತೆಯುನ್ನೂ ಸೈರಣೆಯುನ್ನೂ ಕಲಿಸಿ ಕೊಡುವುವು. (ಇಂ) ಸುಂದರಿ ! ಈ ಘೋರಾರಣ್ಯದಲ್ಲಿ ಒಬ್ಬಳೇ ಒಬ್ಬ ಳಾದ ನಿನಗೆ ಹೆದರಿಕೆಯಾಗುವುದಿಲ್ಲವೆ ? (ಶ್ರು) ಮಹಾತ್ಮ ! "ಆನಂದಂ ಬ್ರಹ್ಮಣೋವಿದ್ವಾನ್ನಬಿಭೇತಿಕದಾಚನ" ಎಂಬಂತೆ ನನಗೆ ಹೆದರಿಕೆಯೆಂಬ ದೇನೆಂಬುದೇ ತಿಳಿಯದು. ಯಾರೂ ನನ್ನನ್ನು ತೊಂದರೆಪಡಿಸರು.

ಇಂದ್ರನು ಆಕೆಯ ಮನಸ್ಥೈರ್ಯ ಧೈರ್ಯ ಕ್ಲೇಶ ಸಹಿಷ್ಣುತೆಗಳಂ ನೋ
ಬೆರಗಾಗಿ ಎನ್ನಂ ಸತ್ಕರಿಸಿದ ಈಕೆಯಲ್ಲೇನಾದರೂಸಂಭಾವನೆಯಂ ಕೇ
ವುದರಮೂಲಕ ಇನ್ನೂ ಪರೀಕ್ಷಿಸಬೇಕೆಂದಾಲೋಚಿಸಿ, ಎಲೈ ದಯ
ಶೀಲಳೆ ! ಸತ್ಕಾರವಂ ಮಾಡಿದ ಅತಿಥಿಗೆ ಏನಾದರೂ ಸಂಭಾವನೆಯ
ಕೊಡು ? (ಶ್ರು) ಇಂತಹ ಪೂತಚರಿತನಿಗೆಂತಹ ಸಂಭಾವನೆಯಂ ಕೊ
ಲೆಂದು ಯೋಚಿಸುತ್ತಾ ಎಲೈ ಭಿಕ್ಷುವೆ! ನನ್ನಲ್ಲಿರುವ ಯಾವುದನ್ನು ಕೇ
ದರೂ ಕೊಡುವೆನು. ನನ್ನಿಂದ ಸಾಧ್ಯವಾದುದನ್ನು ಮಾಡುವೆನು. ಹೆಂ
ಸಾದವಳು ಪುರುಷನಿಗೆ ಮಾಡಬಹುದಾದುದನ್ನೆಲ್ಲಾ ಮಾಡುವೆನು. ಆದ
............ಒಂದು ವಿಚಾರದಲ್ಲಿ ಮಾತ್ರ............ಪರಾಙ್ಮುಖಳಾಗಿರುವೆನ
(ಇಂ) (ಆತುರದಿಂದ) ಆ ವಿಚಾರವು ಯಾವುದೆಂಬುದಂ ತಿಳಿಸುವೆಯಾ
(ಶ್ರು) ನಾನು ಅಪೇಕ್ಷಿಸುವ............ನನಗೆ ತಕ್ಕವರನನ್ನು ವಿನಹ......
ಯಾರನ್ನೂ- - - (ಇಂ)ನೀನಪೇಕ್ಷಿಸುವ ಆ - - - ನಿನ್ನವರನು ಯಾರು
(ಶ್ರು) ಎಲೈ ಸನ್ಯಾಸಿಯೇ ! ಯಾರಾದರೂ - - - ಹಾಗಿರಲಿ. ನಿನ
ಬೇಕಾದುದನ್ನು ಮೊದಲುಹೇಳು ? ನಂತರ ನನ್ನ ವಿಚಾರವಂ ಹೇಳ
ವೆನು (ಇಂ) (ಮುಗುಳುನಗೆಯುಂಸೂಚಿಸಿ) ಸುಂದರಿ ! ನಿನ್ನ ಮನಸ್ಸಿನಲ್ಲಿ
ರುವ ವರನು - - - ನನಗೆ - - - ಗೊತ್ತಾಯಿತು. ಇಂದ್ರನಂ ವರಿಸ
ಬೇಕೆಂದು - - ಊ (ಶ್ರು) (ಶಾಂತಭಾವದಿಂದ) ಮಹಾತ್ಮನೆ ! ನನ್ನ
ಮನಸ್ಸಿನಲ್ಲಿರುವದು ನಿನಗೆ ಹೇಗೆ ಗೊತ್ತಾಯಿತು ? ಈಗ ತಿಳಿದುಕೊಳ್ಳ
ವಂತಹ ನೀನು ಮೊದಲೇಕೆ ತಿಳಿಯಬಾರದೇ ಹೋದೆ ? ಅವಿಚಾರಪ
ವಾದ ಇಂತಹ ಕ್ಷುಲ್ಲಕವಿಷಯಂಗಳನ್ನು ನಿನ್ನಂತಹ ಮಹಾತ್ಮನು ಹೇಳ
ಬಹುದೆ ? ನೀನು ಹೀಗೆ ಮಾತನಾಡುವದಾಗಿ ನಾನು ಮೊದಲೇಯೋಚಿ
ಸಿದ್ದರೆ ನನ್ನ ವಿಷಯವಾದ ಯಾವವಿಚಾರವನ್ನೂ ನಿನ್ನಲ್ಲಿ ಹೇಳುತ್ತಿರಲಿಲ್ಲ
(ಇ) (ತಾನಾಗಿ ಸುಂದರೀಮಣಿಯಂ ಕುರಿತು) ಎಲೈ ಕೋಮಲೆಯೇ
ನೀನು ನಾಕಾಧಿಪನಂ ವರಿಸುವೆಯಾದರೆ - - - - ಜನ್ಮ - - - ಸಾಫಲ್ಯ
ವಲ್ಲವೆ? (ಶ್ರು) ಹಾಯ್ ! ಹಾಯ್ !! ಇಂದ್ರ - - ಇಂದ್ರ - -
ನಾಕಾಧಿಪ-ಜನ್ಮಸಾಫಲ್ಯ-ಧಿಕ್ ಧಿಕ್-ಎಲೈ ಪುಣ್ಯರೂಪನೆ ! ವಿವಾಹವ
ಯಾರಿಗೆಂಬುದಂ ನೀನು ತಿಳಿದುಕೊಂಡಿರುವೆಯಾ ? ಜನನ ಮರಣ ರೂ

ಮಾಡೀ ಘೋರನರಕದಲ್ಲಿ ನನ್ನನ್ನು ಬೀಳಬೇಕೆಂದುಪದೇಶಿಸುವೆಯಾ ? ಎಲೈ ತಪೋಧನನೆ ! ನನಗೆ ಹೇಳುವ ವಿವಾಹವು ಪ್ರಪಂಚಸಂಸಾರದಲ್ಲಿ ಅರಿಷಡ್ವರ್ಗಂಗಳಿಗೆ ಸೇವಕರಾಗಿ—ಯುಕ್ತಾಯುಕ್ತ ಜ್ಞಾನವನ್ನರಿಯದೆ ನೈಷ್ಟಿಕ ಬ್ರಹ್ಮಚರ್ಯವ್ರತಮಂ ಸಾಧಿಸಲು ಯೋಗ್ಯತೆ ಇಲ್ಲದ ಹತಭಾಗ್ಯರಿಗೆ ಸಲ್ಲತಕ್ಕದು—ಎಲೈ ಮಹಾನುಭಾವನೆ ! ಸರ್ವಜ್ಞನಾದ ನಿನಗೆ ತಿಳಿಯದ ವಿಚಾರವು ಯಾವುದೂ ಇಲ್ಲ. "ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ" ಎಂಬಂತೆ ಬಂಧನಕ್ಕೂ ಮೋಕ್ಷಕ್ಕೂ ಮನವೇ ಪ್ರಧಾನವಾಗಿರುವುದು. ಬಂಧನವೆಂಬುವದೇ ಸಂಸಾರ. ಇದಕ್ಕೆ ಮನವೆಂಬುದು ನಾಟಕದಲ್ಲಿನ ಸೂತ್ರಧಾರನಾತಿರುವುದು. ಸಂಸಾರವೆಂಬುವದು ಮೋಹಬೀಜದ ಮುಷ್ಟಿ, ಆಪತ್ತುಗಳ ವೃಷ್ಟಿ, ದುಃಖಗಳಸೃಷ್ಟಿ, ವ್ಯಸನ ಸಮಷ್ಟಿಯಿಂದ ಪೂರ್ಣವಾಗಿರುವುದು. ಸಂಸಾರದಲ್ಲಿ ಸಂಪತ್ತುಗಳು ವಿಪತ್ತುಗಳಾಗಿಯೂ, ಮನೋಹರೆಯರು ಪ್ರಾಣಹರೆಯರಾಗಿಯೂ, ಭೋಗಂಗಳು ರೋಗಂಗಳಾಗಿಯೂ ತೋರುವುದರಿಂದ ಇದು ಮನೋಭ್ರಾಂತಿಯೇ ಸರಿ. ಕ್ರೀಡೆಗೆ ಬಾಲ್ಯ, ವಿಷಯಕ್ಕೆ ಯೌವನ, ಚಿಂತೆಗಳಿಗೆ ವೃದ್ಧಾಪ್ಯ ವೇರ್ಪಡಿಸಲ್ಪಟ್ಟಿರುವಾಗ ಆತ್ಮಸ್ವರೂಪವಂ ಯಾವಾಗ ತಿಳಿಯುವದು ? ಮೈತ್ರಿ, ದಯೆ, ಮುದಿತೆ, ಉಪೇಕ್ಷೆ, ಇವುಗಳನ್ನಭಿವೃದ್ಧಿಗೊಳಿಸುವ ಬಗೆ ಹೇಗೆ ? ಸಾಧುಸಂಗವನ್ನು ತ್ಯಜಿಸದಿರುವಿಕೆಯೇ ಮೈತ್ರಿ. ದೀನರ ದುಃಖೋಪಶಮನವೇ ದಯೆ. ಸತ್ಕಾರ್ಯದಲ್ಲಿ ಸಂತೋಷಿಸುವಿಕೆಯೇ ಮುದಿತೆ. ಅಸತ್ಕಾರ್ಯದಲ್ಲಿ ತಟಸ್ಥರಾಗಿರುವಿಕೆಯೇ ಉಪೇಕ್ಷೆ. ಇವುಗಳನ್ನಾಚರಿಸಲು ಸಾಧ್ಯವಿರುವದೇ ? ಎಲ್ಲಿ ಯವರಿಗೆ ಆಸೆಯು ಇರುವದೋ ಅಲ್ಲಿರುವರಿಗೆ ಕಲ್ಪನಾಶಕ್ತಿಯು ಇರುವದು. ಸರ್ವವಿಧವಾದ ಸಂಕಲ್ಪಗಳೂ ಮನೋವೃತ್ತಿಯನ್ನನುಸರಿಸುವವು ಲಾಭಾಲಾಭ, ಹಾನಿವೃದ್ಧಿ, ಶೋಕ, ಮೋಹ ಹರ್ಷಂಗಳಿಗೆಡೆಯಾಗಿರುವ ಈ ಸಂಸಾರವೃಕ್ಷದಲ್ಲಿ ಸದಸತ್ತುಗಳೆಂತಲೂ, ಯುಕ್ತಾಯುಕ್ತಂಗಳೆಂತಲೂ, ಇಷ್ಟಾನಿಷ್ಟಂಗಳೆಂತಲೂ, ಪಾಪಿಗಳಾದ ಕಲ್ಪನೆಗಳೆಂಬ ಕಪಿಗಳು ಕೊಂಬೆಯಂ ಹಿಡಿದು ಬಗ್ಗಿಸಿ ಮಾನವನಂ ಮುಳುಗಿಸುತ್ತಿರುವಾಗ ನಿರಾಶತ್ವ, ನಿರಪೇಕ್ಷತ್ವ, ನಿತ್ಯತ್ವ, ಸಮತ್ವ, ಪ್ರಾಜ್ಞತ್ವ, ನಿಷ್ಕ್ರಿಯತ್ವ,

ಸಾಮ್ಯತ್ವ, ನಿರ್ವಿಕಲ್ಪತ್ವ, ಧೈರ್ಯ, ಸೌಹಾರ್ದ, ಸಂತೋಷ, ಮೃದುತ್ವ, ಮೃದುಮಾದಿತ್ವಗಳೆಂಬ ಫಲಂಗಳು ಹೇಗೆ ದೊರಕುವವು ? ಪದಾರ್ಥಲಾಭವಿಲ್ಲದೆ ನಿರರ್ಥಕ, ವಾಗಿಯೂ ಅನರ್ಥಕಾರಣವಾಗಿಯೂ ನೀಚ್ಛಾರ್ಹವಾಗಿಯೂ ಇರುವ ಐಹಿಕಕಾರ್ಯಂಗಳನ್ನೇ ಸತ್ಕಾರ್ಯಂಗಳೆಂದು ತಿಳಿದು ಆತ್ಮನಂ ತಿಳಿಯದಿದ್ದಾಗ್ಯೂ ತಾವು ಸರ್ವಜ್ಞರೆಂದಭಿಮಾನ ಪಡುವುದರಿಂದ ಅವರ ಸಂಕಲ್ಪವು ವಾಙ್ಮಾತ್ರದಲ್ಲಿ ಪ್ರಕಾಶಿಸುವುದಾದುದರಿಂದ ಅಂತಹವರಿಂದ ಮಾಡಲ್ಪಟ್ಟ ಯಜ್ಞಾದಿಸತ್ಕಾರ್ಯಂಗಳು ಚಿತ್ತಶುದ್ಧಿಗೆ ಸಾಧನವಾಗದೆ ಬಾಹ್ಯ ಸುಖದುಃಖಂಗಳಿಂ ಪರಿಪೂರ್ಣವಾದ ಸಂಸಾರಫಲ ಸಾಧಕವಾಗುವವು. ಈ ಸಂಸಾರವೃಕ್ಷಕ್ಕೆ ಅಜ್ಞಾನವೇಬೇರು. ದಾರಾಪುತ್ರಾದಿಗಳೇ ಕೊಂಬೆಗಳು. ಅರಿಷಡ್ವರ್ಗಾದಿ ಭೋಗಂಗಳೇ ಚಿಗುರುಗಳು. ವಯೋವಿಕಾರಂಗಳೇ ಕುಸುಮಂಗಳು, ಆಸೆಗಳೇ ಗೊಂಚಲುಗಳು, ಸುಖದುಃಖಂಗಳೇ ಫಲಂಗಳು. ಇಂತಹವೃಕ್ಷವನ್ನು ವಿವೇಕವೆಂಬ ಕೊಡಲಿಯಿಂದ ನಾಶಮಾಡದೆ ಫಲಗಳನ್ನುಪಭೋಗಿಸಲೆತ್ನಿಸುವನಿಗೆ ಆತ್ಮಲಾಭವೆಂತು ದೊರೆಯುವುದು ? ಸಕಲರಾಜ್ಯಾಭಿಷಿಕ್ತನಾದರೂ, ಮೇಘಮಾಲೆಯುಳ್ಳದಗಿದರೂ ಸಮುದ್ರಾಂತರ್ಗತನಾದರೂ ಆತ್ಮಲಾಭವಿಲ್ಲದೆ ಶಾಂತಿಸುಖವು ದೊರೆಯಲಾರದು. ಆದುದರಿಂದ ಆ - - - ಆತ್ಮಜ್ಞಾನ ಆ - - ಆತ್ಮಲಾಭ ಆ - - ಶಾಂತಿಗಾಗಿ ಮೊದಲು ಇಂದ್ರಿಯಶಾಂತಿಯಂ ಮಾಡಿಕೊಳ್ಳಬೇಕು. ಈ ದೇಹವೆಂಬಾರಣ್ಯದಲ್ಲಿ ಮದಪ್ರಮಾದಂಗಳೆಂಬ ನೇತ್ರಂಗಳಿಂದಲೂ ಸುಖದುಃಖಂಗಳೆಂಬ ಗಂಡಸ್ಥಲಂಗಳಿಂದಲೂ ಭಾವನೆ ಎಂಬ ಸೊಂಡಲಿನಿಂದಲೂ ಸಂಕಲ್ಪವಿಕಲ್ಪಂಗಳೆಂಬ ಕುಂಭಂಗಳಿಂದಲೂ ಸಚ್ಛಾಸ್ತ್ರವಾಕ್ಯವೆಂಬ ಮನಸ್ಸಿಗೆ ಕೇಳಿಸಿದಹಾಗೆ ಬೀಸುತ್ತಿರುವ ಕಿವಿಗಳಿಂದಲೂ ಆಶೆಯೆಂಬ ಹೊಟ್ಟೆಯಿಂದಲೂ ಶುಭಾಶುಭ ಉಚ್ಚನೀಚಗಳೆಂಬ ನಾಲ್ಕು ಕಾಲುಗಳಿಂದಲೂ ಕೂಡಿ ಅವಿಚಾರವೆಂಬ ತೋಕೆಯಂ ಬೀಸುತ್ತಾ ಸದ್ಗುಣಂಗಳೆಂಬ ಪೂಗಳಂ ನೆಲಸಮಮಾಡುತ್ತಾ ವಿಶ್ರಾಂತಿಯೆಂಬ ಗಂಧವೇ ಇಲ್ಲದೆ ಅವಿಚಾರಪರವಾಗಿಯೂ ಅತ್ಯಂತಭಯಂಕರವಾಗಿಯೂ ಮೆರೆಯುತ್ತಿರುವ ಈ-- ಮನವೆಂಬ ಮದ್ದಾನೆಯನ್ನು ಜ್ಞಾನವೆಂಬ ನಿಶಿತಾಂಕುಶದಿಂದ ಯಾವನು ಸೀಳುವನೋ ಆವನೇ ರಾಜಸಿಂಹನು ಆತನಜನ್ಮವೇ ಸಾರ್ಥಕವಾ

ದುದು. ಏಕೆಂದರೆ, ಕಲ್ಪನಾಮಯವಾದ ಈ ಮನೋವೃತ್ತಿಯನ್ನತಿಕ್ರಮಿಸಿದವರಿಗೆ ದೃಶ್ಯಪ್ರಪಂಚವು ಮಿಥ್ಯೆಯಂತಲೂ ಬ್ರಹ್ಮದೃಷ್ಟಿಯಿಂದ ಸರ್ವವೂ ಆತ್ಮಮಯವಾಗಿ ಗೋಚರಿಸುವದು. ವಾಸನೆಯ ಸಂಬಂಧವು ಯಾವುದೋ ಅದೇ ಸಂಸಾರವೆಂತಲೂ ತತ್ಕ್ಷಯವೇ ಮೋಕ್ಷವೆಂತಲೂ ಅದೇ ಪರಮ ಪುರುಷಾರ್ಥವೆಂತಲೂ ಅದನ್ನು ಹೊಂದಲು ಸರ್ವರೂ ಪ್ರಯತ್ನಿಸಬೇಕೆಂತಲೂ ತಂದೆಯಾದ ಭರದ್ವಾಜನಿಂದುಪದೇಶಿಸಲ್ಪಟ್ಟಿರುವೆನು. ಎಲೈ ಯುತಿಯೆ ! ನೀನು ಹೇಳುವ ಇಂದ್ರನನ್ನೊಲಿಸಿಕೊಳ್ಳುವುದಾಗಲಿ ಅಥವ ಇಂದ್ರಲೋಕವಂ ಹೊಂದುವುದಾಗಲಿ ಮತ್ತು ಭೋಗಾರ್ಥರಾದ ರಂಭಾದ್ಯಪ್ಸರೆಯರ ಭೋಗಂಗಳನ್ನು ಹೊಂದುವದಾಗಲಿ ಏನೂ ಹೆಚ್ಚಿನದಲ್ಲ.

ಯಜ್ಞಾದಿಗಳಂಮಾಡಿ ಬಂದುವೇಳೆ ಸ್ವರ್ಗಲೋಕವಂ ಹೊಂದಿದರೂ ಅದೂ ಶಾಶ್ವತವಾದುದಲ್ಲ. "ಕ್ಷೀಣೇಪುಣ್ಯೇಮರ್ತ್ಯಲೋಕಂವಿಶಂತಿ" ಎಂಬಂತೆ ಯಜ್ಞಾದಿಗಳಂ ಮಾಡಿ ಸಂಪಾದಿಸಲ್ಪಟ್ಟ ಪುಣ್ಯವು ಕ್ಷಯವಾದ ಕೂಡಲೇ ಪುನಹ ಈ ಮಾನವ ಲೋಕವಂ ಹೊಂದಬೇಕಾಗುವುದು. ಅಪ್ಸರೆಯರ ಭೋಗವು ತಪ್ಪಿಹೋಗುವದು. ಇಂದ್ರನಾದರೂ ಶಾಶ್ವತನೇ ? ಇಲ್ಲ. ಇಂದ್ರನಂ ಜಯಿಸಲುದ್ದೇಶಿಸಿ ಇಂದ್ರಪದವಿಯಂ ಹೊಂದಲುದ್ದೇಶಿಸಿ ಮಾಡಲ್ಪಟ್ಟ ತಪೋಬಲದಿಂದ ದೇವದಾನವರಲ್ಲಿ ಯಾದರೂ ಸ್ವರ್ಗಲೋಕಕ್ಕೆ ಬರುವದಾದರೆ ಇಂದ್ರನು ಪದಚ್ಯುತನಾಗುವದಿಲ್ಲವೆ ? ಸ್ವರ್ಗಭೋಗಂಗಳಾಸೆಯಿಂದ ಎಷ್ಟೋ ಮಹಾತ್ಮರಾದ ತಪಸ್ವಿಗಳ ತಪೋಭಂಗವನ್ನಾಚರಿಸಲು ಮೇನಕಾದಿ ಅಪ್ಸರೆಯರಂ ಕಳುಹಿ ತಪೋಭಂಗವಂ ಮಾಡಲಿಲ್ಲವೇ ? ಅದೇಕೆ ? ಆ ಸ್ವರ್ಗಲೋಕಾಭಿಲಾಷೆಯಿಂದಲ್ಲವೆ ? ಅಂತಹ ಲೋಕದಲ್ಲಿಯೂ ಇಂದ್ರನೇ ಮೊದಲಾದವರು ಅರಿಷಡ್ವರ್ಗಗಳಿಗೆ ಈಡಾಗಿರುವಾಗ ಅಂತಹ ಇಂದ್ರನಂ, ಕಾಮಾರ್ತನಂ, ವಿವಾಹಮಾಡಿಕೊಳ್ಳುವಂತೆ ನನ್ನ ಭೀಷ್ಟವಿರುವದೆಂದು ನೀನು ಹೇಗೆ ಹೇಳಿದೆ ? ನೀನು ಹೇಳುವ ದೇವರಾಜನಿಗೂ ಮಾನವರಾಜನಿಗೂ ವ್ಯತ್ಯಾಸವೇನಿರುವದು? ಇದುವರಿಗಾದ ಸೃಷ್ಟಿಪ್ರಳಯಂಗಳಲ್ಲಿ ಅಂತಹರೆಷ್ಟು ಜನ ಇಂದ್ರರು ಆಗಿಹೋಗಿರುವರು ? ಇನ್ನೆಷ್ಟು ಇಂದ್ರರು ಆಗುತ್ತಿರುವರು ? ಮುಂದೆಷ್ಟು ಇಂದ್ರರಾಗುವರು ಎಂಬುದು ಯಾರಿಗೆ ಗೊತ್ತಿರುವುದು ? ಆದುದರಿಂದ

ಪ್ರಪಂಚದಲ್ಲಿ ಬಹುಕಷ್ಟಾರ್ಜಿತವಾದ ಈ ಮಾನವ ಜನ್ಮವಂ ಸಂಪಾದಿಸಿ ವಿವೇಕಿ ಎಂದೆನಿಸಿಕೊಳ್ಳುವನು ನಶ್ವರವಾದ ಇವುಗಳೆಲ್ಲವನು ದೂರಮಾಡಿ ಪುನರಾವರ್ತಿ ಜನನ ಮರಣವಿಲ್ಲದಂತೆ ಇರುವ ಮೋಕ್ಷವಂ ಸಾಧಿಸಲು ಪರಾತ್ಪರನಾದ ಪರಮಾತ್ಮನನ್ನಾಶ್ರಯಿಸತಕ್ಕದು. ಇದೇ ಮಾನವ ಜನ್ಮದ ಫಲವೆಂದು ಹೇಳಿ ಸುಮ್ಮನೆ ನಿಂತುಕೊಂಡಾರಮಣಿಯು ನೋಡಿ ತಲೆದೂಗಿ, ಎಲೌ ಪೆಣ್ಮಣಿಯೇ! ನಾನು ವಯೋವೃದ್ಧನೇ ಹೊರತು ಜ್ಞಾನವೃದ್ಧನಲ್ಲ. ವೃದ್ಧನಾದೆನ್ನ ಮಾತುಗಳಂ ತಿರಸ್ಕರಿಸದೆ ಶಾಂತಚಿತ್ತದಿಂದ ಜ್ಞಾನಮಾರ್ಗ ನಿರೂಪಣೆಯಂ ಮಾಡಿದೆ. ಆದರೆ ನೀನು ವಿವಾಹಮಾಡಿಕೊಳ್ಳಬೇಕೆಂದೆಣಿಸುವ............ನಿನ್ನ ತಕ್ಕವರನು ಯಾರೆಂಬುದು ಮಾತ್ರ ಗೊತ್ತಾಗಲಿಲ್ಲ?

(ಶು) ಯೋಗಿಯಾದ ನಿನಗೆ ಗೊತ್ತಾಗದೆ ಇರುವದು ಆಶ್ಚರ್ಯವು. ನನ್ನ ತಕ್ಕ ವರನು ವೇದಪುರುಷನು. ಆತನಲ್ಲಿ ನನ್ನಾತ್ಮವನ್ನು ಸಮರ್ಪಣೆಯು ಮಾಡಿರುವೆನು. ಅಂದಿನಿಂದ ಈ ರೀತಿ ನಿರ್ಭರಳೂ, ನಿರ್ಭಯಳೂ ಆಗಿರುವೆನು. ಎಂದು ಹೇಳಿದ ಪೂತಚರಿತೆಯ ಮಾತುಗಳಿಗಾನಂದಿಸಿ, ರಮಣಿ! ನೀನು ಧನ್ಯೆ, ನಿನ್ನಯಶೋಲಹರಿಯಲ್ಲಿ ಮಾನವ ಪ್ರಪಂಚವು ಎಂದೆಂದಿಗೂ ನರ್ತನವಂ ಮಾಡುತ್ತಿರಲಿ. ಹೊರಡುವುದಕ್ಕೆ ಅಪ್ಪಣೆಯಂ ಕೊಡು ! ಎಂದು ಹೇಳಿ ಪುನಃ ಅವಳಿಂದ ಸತ್ಕೃತನಾಗಿ ತನ್ನ ಜನರೊಡನೆ ಅಹಹ! ಸ್ತ್ರೀಯರ ಸೌಶೀಲ್ಯವೂ ಕ್ಲೇಶಸಹಿಷ್ಣುತೆಯೂ ಪ್ರತಿ ಫಲಾಕಾಂಕ್ಷೆ ಇಲ್ಲದೆ ಅವರು ಮಾಡುವ ಸತ್ಕಾರ್ಯಗಳು ಪ್ರಪಂಚಾದರ್ಶಂಗಳೆನ್ನುವದು ನಿಜವಾದುದೆಂದು ಹೇಳುತ್ತಾ ದಕ್ಷಿಣಾಭಿಮುಖನಾಗಿ ಹೊರಟು ಪೂಗಂಧ ಭಾರವಂ ಹೊತ್ತು ಹೊರಲಾರನೆಂಬಂತೆ ಬರುತ್ತಿರುವ ಮಂದಾನಿಲನಿಂ ಸತ್ಕೃತನಾಗಿ ಈಶ್ವರ ಸೃಷ್ಟಿಯ ವೈಭವವು ನೋಡಿ ಆನಂದಿಸುತ್ತಾ ಬೇಟೆಗಾರನ ವೇಷದಿಂದ ಅವನ ವಿಹಾರವಂ ಮಾಡತೊಡಗಿದನು. ಪ್ರಭಾಕರನು ತನ್ನ ಪೂರ್ವಾಹ್ನ ಪ್ರವಾಸವು ಮುಗಿಸಿಕೊಂಡು ನೀಲಾಕಾಶದಲ್ಲಿ ಸಂಧ್ಯಾದ ಧಾಟಿಯ ಆಗಮನವಂ ನಿರೀಕ್ಷಿಸುತ್ತಿದ್ದನು. ಅಲ್ಲಲ್ಲಿ ಒಂದೆರಡು ದುಂಬಿಗಳು ಹಾರಾಡುತ್ತಿದ್ದವು. ಅವುಗಳ ಝೇಂಕಾರ ಶಬ್ದವು ಒಂದೊಂದು ಸಲ ಎಲ್ಲಿಯೋ .... ... ಏನೋ ಎಂಬ ಹಾಗೆ ಕೇಳಬರುತ್ತಿದ್ದಿತು ! ವಲೀಮುಖಂಗಳು ದೊಡ್ಡವಾಗಿಯೂ ದಪ್ಪವಾಗಿಯೂ ಬೆಳದಿರತಕ್ಕ ವೃಕ್ಷಚ್ಛಾ

ಯೆಯನ್ನಾಶ್ರಯಿಸಿ ಕಂದಂಗಳನ್ನೆದೆಗಪ್ಪಿಕೊಂಡು ಕೊಂಬೆಗಳ ಮೇಲೆ ಕುಳಿತು ಜಾಗರಿಸುತ್ತಿದ್ದವು. ಹಕ್ಕಿಗಳ ಕಲಕಲ ಶಬ್ದವಿಲ್ಲ. ದಕ್ಷಿಣಾಭಿಮುಖನಾಗಿ ಹೋಗುತ್ತಿದ್ದ ಇಂದ್ರನು ಆ ಅರಣ್ಯದಲ್ಲಿ ದಟ್ಟವಾಗಿ ಬೆಳದಿರುವ ಮರಗಳ ಮಧ್ಯದಲ್ಲಿ ಹಸುಳೆಯೊಂದನ್ನೆತ್ತಿಕೊಂಡು ಮತ್ತೋರ್ವ ಮಗನಂ ನಡೆಯಿಸಿಕೊಂಡು ಬಾರಿಬಾರಿಗೂ ಅಳುತ್ತಿರುವಬಾಲನಂ ಸಂತೈಸುತ್ತಾ ತಲೆಯ ಮೇಲೊಂದು ದೊಡ್ಡ ಮೂಟೆಯಂ ಹೊತ್ತು ಬಹು ಕಷ್ಟದಿಂದ ದಾರಿಯಂಸಾಗಿಸುತ್ತಿದ್ದ ಲಲನೆಯೋರ್ವಳಂ ನೋಡಿ ಅವಳಂ ಪರೀಕ್ಷಿಸಬೇಕೆಂದೆಣಿಸಿ ತಾನು ಯಾವುದೋ ಕಾಡುಮೃಗದ ಕೈಗೆ ಶಿಲುಕಿ ಘಾಯಪಟ್ಟವನಂತೆ ನಟಿಸುತ್ತಾ ರಕ್ತವಂ ಸ್ರವಿಸುತ್ತಿರುವಘಾಯಂಗಳಿಗೆ ಮುತ್ತಿಕೊಳ್ಳುವ ನೊಣಗಳನ್ನು ಓಡಿಸುತ್ತಾ ಆಕೆಯು ಬರುವ ಹಾದಿಯಲ್ಲಿ ಮುಂಚಿತವಾಗಿ ಬಂದು ಕುಳಿತು ನೋವನ್ನು ತಾಳಲಾರದವನಂತೆ ನಟಿಸುತ್ತಾ ಘಟ್ಟಿಯಾಗಿ ಕೂಗಿಕೊಳ್ಳುತ್ತಿದ್ದನು. ಇವನ ಆರ್ತಧ್ವನಿಯನ್ನು ಕೇಳಿದಾಸುವತಿಯು ಯಾರದೋ ಮಾನುಷ ಧ್ವನಿಯೆಂದು ನಿಶ್ಚಯಿಸಿ ತಲೆಯ ಮೂಟೆಯನ್ನು ಕೆಳಗಿರಿಸಿ ಅದರ ಪಕ್ಕದಲ್ಲಿ ತನ್ನ ಮಗುವಂ ಕೂರಿಸಿ ಸಂಕಟದಿಂದ ನರಳುತ್ತಿರುವ ಈ ಬೇಟೆಗಾರನ ಬಳಿಗೆ ಬಂದು ಘಾಯಂಗಳಂ ನೋಡಿ ಕೂಡಲೇ ಹತ್ತಿರದ ಸರೋವರಕ್ಕೆ ಹೋಗಿ ತಾನುಟ್ಟಿರುವ ಹರಿದುಹೋಗಿರುವ ಚೇಲಾಂಚಿನದ ಕೊನೆಯಂ ಹರಿದು ನೀರನಲ್ಲಿ ನೆನೆಸಿ ಅದರಿಂದ ಹುಣ್ಣುಗಳನ್ನೊರಿಸಿ ಯಾವುದೋ ಮೂಲಿಕೆಯ ರಸವಂ ಹಿಂಡಿ, ನೊಣಗಳು ಮುತ್ತದಂತೆ ಮಾಡಿ ಆತನಿಗೊಂದೆಳೆದಳಿರಿನ ಹಾಸಿಗೆಯಂ ಮಾಡಿ ಆತನಂ ಮಲಗಿಸಿ ತನ್ನ ಮಕ್ಕಳಿಗಾಗಿ ಗಂಟಿನೊಳಗಿಟ್ಟುಕೊಂಡಿದ್ದ ಕೆಲವು ಹಣ್ಣುಗಳನ್ನು ತಂದು ಹಸಿದವನಂತಿರುವ ಆ ಪುಳಿಂದನಂ ಕುರಿತು, ಎಲೈ ಸುಚರಿತನೆ! ನಿನ್ನನ್ನು ನೋಡಿದರೆ ಬಹು ಹಸಿದಿರುವಂತೆ ತೋರುತ್ತಿದೆ. ಈ ಕಂದಮೂಲ ಫಲಂಗಳಂ ತಿನ್ನುವನಾಗು. ನೋವುಗಳು ವಾಸಿಯಾಗುವವೆಂದಳು. ಪುಳಿಂದನು ಶಾಂತತೆಯಿಂದ ಎಲೈ ಕೃಶೋದರಿಯೆ! ನನ್ನ ಹಸಿವು ಇವುಗಳಿಂದಡಗಲಾರದು. ನಿನ್ನ ಮಕ್ಕಳಾಹಾರಕ್ಕಾಗಿ ಶೇಖರಿಸಿಟ್ಟುಕೊಂಡಿದ್ದ ಈ ಕಂದಮೂಲಂಗಳಂ ನಾನು ತಿನ್ನುವದು ಯುಕ್ತವಾಗುವದಲ್ಲ. ನೀನು ದಯಾಮೂರ್ತಿ

ಯಾಗಿರುವೆ. ಕೃಪೆಮಾಡಿ ನಿನ್ನ ಮಕ್ಕಳನ್ನು ಇಲ್ಲಿಗೆ ಕರೆತರುವುದಾದರೆ ಆ ಮಕ್ಕಳ ಆಟಪಾಟ ವಿನೋದಂಗಳಂ ನೋಡುತ್ತೆ ಈ ವ್ರಣಬಾಧೆಯಂ ಮರೆಯ ಬಹುದಾಗಿ ಯೋಚಿಸುತ್ತೇನೆಂದು ಹೇಳವಕೂಡಲೆ, ರಮಣಿಯು ತನ್ನ ಮಕ್ಕಳಂ ಕರದುಕೊಂಡು ಬಂದು ಬೇಟೆಯುವನೆದುರಿನಲ್ಲಿ ನಿಂತಳು. ಕುಮಾರರಿಬ್ಬರು ಬಹು ಸುಂದರರೇ ಅಹುದೆಂದವರಂ ಲಾಲಿಸಿ ತನ್ನನ್ನುಪಚರಿಸಿದ ಕಡುಚೆಲುವಿನ ಕಣಿಯ ಸೌಂದರ್ಯಮಂ ನೋಡಿ ಆವರು ಯೂರೆಂಬುದಂ ತಿಳಿಯಲು ಕುತೂಹಲಪಡುತ್ತಿದ್ದನು. ಸುಂದರಿಯು ಬಿಸಲಿನಲ್ಲಿ ಕಂದಿ ಹೊಟ್ಟೆಗಿಲ್ಲದೆ ಕುಂದಿದ್ದಾಗ್ಯೂ ಆಕೆಯ ಸೌಂದರ್ಯವು ಮಾತ್ರ ಕುಂದಿರಲಿಲ್ಲ. ಪುಳಿಂದನು ಎಲೌ ಲತಾಂಗಿಯೆ ! ನೀನು ಈಗ ಎಲ್ಲಿಗೆ ಹೋಗುತ್ತಿರುವೆ ? ಹೊರಟು ಹೋಗುವೆಯಾ ? (ಸುಂ) ನೀತಿಪರನೆ ! ನಿನಗೆ ಗುಣವಾದ ಹೊರತು ಈ ಅರಣ್ಯದಲ್ಲಿ....ಈ ಮಹದ್ವಿಪಿನದಲ್ಲಿ ಏಕಾಂಗಿಯಾದ ನಿನ್ನಂಬಿಟ್ಟು ನಾನೆಲ್ಲಿಗೂ ಹೋಗೆನು (ಪು) ನಾನು ಗುಣಹೊಂದಿದನಂತರ ನೀನು ಎಲ್ಲಿಗೆ ಹೋಗಬೇಕೆಂದಿರುವೆ ? (ಸುಂ) (ನಿಟ್ಟುಸಿರುಂಬಿಟ್ಟು) ನಾನು ಎಲ್ಲಿಗೆ ಹೋಗುವೆನು ! ಎಲ್ಲಿಗೆ ಹೋಗಬೇಕೆಂಬುವದು ತಿಳಿಯದು. ಬೆಳಕು ಎಲ್ಲಿಯವರಿವಿಗೆ ಇರುವುದೋ ಕಣ್ಣುಗಳೆಲ್ಲಿಯವರಿಗೆ ಕಾಣಿಸುವುದೋ ಭೂಮಿಯು ಎಲ್ಲಿಯವರಿಗಿರುವುದೋ ಅಲ್ಲಿಯವರಿಗೂ ನಡೆಯುವೆನು. (ಪು) (ಹಾಗೆಯೇ ದೀರ್ಘಾಲೋಚನೆಯಂ ಮಾಡಿದವನಂತೆ ನಟಿಸುತ್ತಾ) ಎಲೌ ಪೂರ್ಣಾಳೆ ! ಮಹದೈಶ್ವರ್ಯವಂತನಾದ ನಿನ್ನ ಗಂಡನು ಗ್ರಹಚಾರ ದೋಷದಿಂ ಜೂಜುಗಾರನಾಗಿ ವಿತ್ತಾಪಾರವೆಲ್ಲಮಂ ಸೋತು ಧೂರ್ತತೆಯಿಂದ ನಿನ್ನಂ ಮನೆಯಂ ಬಿಟ್ಟು ಹೊರಡಿಸಿರಬಹುದಾಗಿ ತಿಳಿಯುತ್ತೇನೆ. .... .... ಇದು ನಿಜವೆ? (ಸುಂ) ಇಲ್ಲ. ಹಾಗಿರದು. ನನ್ನ ನಲ್ಲನು ಅಂಥವನಲ್ಲ. ನನ್ನ ಗ್ರಹಚಾರ ದೋಷದಿಂದ ನಾನು ಹೊರಹೊರಡಿಸಲ್ಪಟ್ಟಿರುವೆನೇ ಹೊರತು ತಪ್ಪು ಆ .... .... ಮಹಾತ್ಮನದಲ್ಲ. ಆತನಂ ನನ್ನಾತ್ಮಾರಾಮದಲ್ಲಿ ಪೂಜಿಸುತ್ತಿರುವೆನು. ನೀನು ಆತನ ವಿಚಾರವಾಗಿ ಏನಾದರೂ ದೋಷಮಂ ಪೇಳುವೆಯಾದರೆ ಅದಂ ನಾನು ಕೇಳಲಿಚ್ಛಿಸೆನು. (ಪು) ಮೋಹನೆ ! ನೀನು ಈ ಪುಟ್ಟಪುಟ್ಟ ಮಕ್ಕಳೊಡನೆ ನಟ್ಟಡವಿಯಲ್ಲಿ ನಟ್ಟನೆ ಹೋಗುವ

ದರಿಂದ ಅಪಾಯ ಸಂಭವಿಸಬಹುದಾದುದರಿಂದ ನಿನ್ನಂ .... .... ನಿನ್ನ ಪತಿಸನ್ನಿಧಿಗೆ ಕರೆನುಕೊಂಡು ಹೋಗಿ ಬಿಡಲಾಶಿಸುವೆನು. ನೀನು ಬರುವೆಯಾ? ಸಾಧ್ವಿಯರಿಗೆ ಪತಿಯ ಮನೆಯಂ ಕುರಿತು ಹೋಗುವದು ಬಹು ಸಂತೋಷವು. (ಸು) (ಕಂಬನಿಯಂ ತುಂಬುತ್ತಾ) ಮಹಾಭಾಗನೆ! ನಾನಾಗಿ ಹೋದರೂ, ನಿನ್ನೊಡನೆ ಒಂದರೂ ನನ್ನ ಪತಿಯು ನನ್ನಂ ಸ್ವೀಕರಿಸನಷ್ಟು ಆತನಿಗೆ ಕೋಪಬರುವಂತೆ ಮಾಡಿರುವೆನು. ಆತನು ನನ್ನನ್ನು ಸೇರಿಸನು. ವಿಶಾಲವಾದೀ ಪ್ರಪಂಚದಲ್ಲಿ ಗೋಪ್ಯಾದದಷ್ಟು ಕೂಡಾ ಸ್ಥಳವಿಲ್ಲದ ನಾನು, ಈ ಮಕ್ಕಳೊಡನೆ, ಈ ಕಾನನವಂ ಶರಣ್ಯನನ್ನಾಗಿ ಭಾವಿಸಿಕೊಂಡು, ಈರೀತಿ ಕಾಲವಂ ಕಳೆಯುತ್ತಿರುವೆನು. ಕಾಪಾಡುವ, ಕಾಪಾಡಿಕೊಳ್ಳುವ, ಕಾಪಾಡಲು ಪ್ರೇರಿಸುವ ಭಾರವು ನನ್ನದಲ್ಲ. ಪರಮ ಕಾರುಣಿಕನಾದ ಈಶ್ವರನದು. (ಪು) ರಮಣಿ! ಇಗೋ! ಸಂಧ್ಯಾಕಾಲ, ಕತ್ತಲು ಕವಿಯುತ್ತಿದೆ. ಕ್ಷುದ್ರಜಂತುಗಳಿಂದ ಕೂಡಿರುವ ಈ ಮಹದಾರಣ್ಯದಲ್ಲಿ ನಿನ್ನನ್ನೂ ಮತ್ತು ನಿನ್ನ ಮಕ್ಕಳನ್ನು ಹೇಗೆ ಕಾಪಾಡಿಕೊಳ್ಳುವೆ? (ಸು) ನನಗೆ ಕತ್ತಲೆಯೇ! ನನಗೆ ಕತ್ತಲುಕತ್ತಲಾಗಿ ಕಾಣಿಸುವದಿಲ್ಲ. ಹಗಲಾಗಿ ತೋರುವದೆಂದು ಹೇಳಿದುದಂ ಕೇಳಿ ಇಂದ್ರನು ಬೆರಗಾಗಿ ತಲೆದೂಗಿ ಅಹಹ! ಹತಭಾಗ್ಯಳಾದೀ ಸುಂದರಿಯು ಇಷ್ಟು ಕಷ್ಟದೆಶೆಯಲ್ಲಿದ್ದರೂ ತನ್ನ ಮನೋಸ್ಥೈರ್ಯವಂ ಕಾಯುಕೊಳ್ಳುವದಲ್ಲದೆ, ಸುಶೀಲಳನ್ನು ದೇವಾದಿದೇವತೆಗಳು ಯಾವಾಗಲೂ ಕಾಪಾಡಲು ಬದ್ಧ ಕಂಕಣರೆಂಬ ಜ್ಞಾನ್ಮೆಯಿಂ - ಭಕ್ತಿಯಿಂದೀರೀತಿ ನಿರ್ಭರಳಾಗಿರುವದೆಂತಹ ಸೋಜಿಗ! ಪ್ರಪಂಚದಲ್ಲಿ ಎಲ್ಲಾ ಸ್ತ್ರೀಯರೂ ಇದೇ ರೀತಿಯಲ್ಲಿ ತಮ್ಮ ತಮ್ಮ ಸಾಶೀಲ್ಯವಂ ಕಾಪಾಡಿಕೊಳ್ಳುವರಾದರೆ ಈ ವಿಶ್ವದಲ್ಲಿ ಜಗಳವೇ ಇರದು. ಎಲೈ ಕಲ್ಯಾಣಿಯೇ! ನೀನು ಈ ಕೋಮಲರೊಡನೆ ಈ ಅರಣ್ಯದಲ್ಲಿ ವಾಸಿಸುವದಕ್ಕಿಂತಲೂ ಮಾನವರಿರುವಕಡೆ ವಾಸಿಸುವದು ಶ್ರೇಸ್ಠವು ತೋರುತ್ತಿರುವದು. ಯಾರಾದರೂ ನಿನ್ನ ಬಂಧುವರ್ಗದಲ್ಲಿ ಕೊಂಚ ಆಸರೆಯಂ ಕೊಟ್ಟು ನಿನ್ನ ಯೋಗಕ್ಷೇಮ ಚಿಂತನೆಯಲ್ಲಿರುವರಾಗಿದ್ದರೆ ಪ್ರವರ್ಧಮಾನರಾಗುತ್ತಿರುವ ಈ ಹುಡುಗರಂನೋಡಿ ಸಂತಸ

ಪಡಬಹುದಾಗಿದ್ದಿತು (ಸುಂ) ಸ್ವಾಮಿಯೇ ! ಆತಹರುಯಾರೂ ನನಗೆ ತಿಳಿಯದು. ಯಾರೂ ಇಲ್ಲದಿರುವನಾನು ಅದಕ್ಕಾಗಿ ದುಃಖಪಡುವುದಿಲ್ಲ; ಏಕೆಂದರೆ ನಮಗೆ ಇರುವದಕ್ಕೆ ಸ್ಥಳವಿಲ್ಲ. ಸುಖದುಃಖಂಗಳಂ ವಿಚಾರಿಸುವ ನೆಂಟರಿಲ್ಲ. ಈಶ್ವರನಂ ತಿಳಿಯಲು ನಮಗೆ ಜ್ಞಾನವಿರುವದಿಲ್ಲವಾದುದರಿಂದ ಆ ವರದನಂ ನಂಬಿಕೊಂಡಿರುವ ನನಗೆ ಇದೇ ಸುಖವಾಗಿತೋರುವದು. (ಇಂ) (ಕೊಂಚಚಿಂತಿಸುತ್ತ) ಅದುಹೇಗೆ ? ತನ್ನನ್ನು ಕಾಪಾಡಿಕೊಳ್ಳಲಾರದವಳಂ ಈಶ್ವರನೆಂತು ರಕ್ಷಿಸುವನು ? ಕಾಪಾಡಿಯೇ ತೀರುವನೆಂಬ ಭರವಸೆಯೇನು? ಸುಂದರೀ ! ಇದು ಸಮಂಜಸವಾಗಿತೋರದು. (ಸುಂ) ಎಲೈ ಶಿಷ್ಟನೆ ! ನಿನ್ನಂಥವರು ಹಾಗೆ ಹೇಳುವದು ಸೂಕ್ತವಾಗಿರದು. ಈಶ್ವರನು ನಾಸ್ತಿಕರನಾಸ್ತಿ. ಆಸ್ತಿಕರ ಆಸ್ತಿ. ಇಗೋ ! ಈ ವಿಶ್ವಕ್ಕೆ ಪರಮದಯಾಮಯನಾದ ವರದನ ಭರವಸೆ !

ಅನನ್ಯಾಶ್ಚಿಂತಯಂತೋಮಾಂ ।
ಯೇಜನಾಃ ಪರ್ಯುಪಾಸತೇ ।
ತೇಷಾಂನಿತ್ಯಾಭಿಯುಕ್ತಾನಾಂ ।
ಯೋಗಕ್ಷೇಮಂ ವಹಾಮ್ಯಹಂ ॥ ಎಂಬುವದಿದೊಂದೇಸಾಲದೆ?-

ಆದುದರಿಂದ ನಮ್ಮ ಯೋಗಕ್ಷೇಮದ ಭಾರವು ನನ್ನದೂ ಅಲ್ಲ. ನಿನ್ನದೂ ಅಲ್ಲ. ಆ - - - ವಿಶ್ವಕರ್ತನದು. (ಇಂ) ರಮಣಿ ! ನೀನು ಮಹಾತ್ಮಳು, ಜ್ಞಾನಪರಳು, ಸದ್ಗುಣಾಢ್ಯಳಾದ ನಿನ್ನನ್ನು ಯಾವುದೂ ತೊಂದರೆ ಗೊಳಿಸದು. ನನಗೆ ಈಗ ನೋವು ಕಡಿಮೆಯಾಗಿದೆ. ಹೋಗುವದಕ್ಕೆ ಅಪ್ಪಣೆಯಂಕೊಡು. ಆದರೆ.... ... ..........ಕಲ್ಯಾಣಿಯೇ ! ನೀನು ನನಗೆ ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರವನ್ನೇನುಮಾಡಲಿ ? ದಯಮಾಡಿ ಹೇಳು. (ಸುಂ) ಎಲೈ ಮಹಾತ್ಮನೇ ! ಪ್ರಕೃತದಲ್ಲಿ ನನಗೆ ಯಾರ - - ಯಾವಸಹಾಯವೂ ಅವಶ್ಯಕವಿಲ್ಲ. ನೀನು ಇಲ್ಲೇ ಎಲ್ಲಿಯಾದರೂ ಅನತಿ ದೂರದಲ್ಲಿರುವುದಾದರೆ ಸಮಯಬಿದ್ದಾಗ - - - - ಅವಶ್ಯತೋರಿದಾಗ ಪ್ರಾರ್ಥಿಸಿಕೊಳ್ಳುವೆನು. (ಇಂ) (ನಮ್ರತೆಯಂ ತೋರ್ಪಡಿಸುತ್ತ) ಎಲೈ ಸಾಧ್ವಿಯೆ ! ನಾನಿರುವ ನನ್ನ ವಾಸಸ್ಥಳವು ಇಲ್ಲಿಗೆ ಬಹುದೂರವಿರುವದು. ನಾನು ಇಲ್ಲಿಂದ ಹೊರಡುವ ಮೊದಲು ಏನಾದರೂ

ಪ್ರತ್ಯುಪಕಾರವಂ ಮಾಡಲಾಶಿಸುವೆನು. ನನ್ನಾಶೆಯುಂ ನಿರಾಶೆಮಾಡದೆ ನಡಿಯಿಸಿಕೊಡುವೆಯೆಂದು ನಂಬಿ ಪ್ರಾರ್ಥಿಸುವೆನು. (ಸುಂ) ಸತ್ಯಸಂಕಲ್ಪನೆ! ನನ್ನ ವಲ್ಲಭನಿರುವ ಊರಿನಮಾರ್ಗವು ನೀನು ಹೋಗುವದಾರಿಯಲ್ಲಿರುವದಾದರೆ ಈ ಹಣ್ಣುಗಳನ್ನು ತೆಗೆದುಕೊಂಡುಹೋಗಿ ಆತನಿಗೆ ಸಮರ್ಪಿಸು. ಅತನಿಗೆ ಹಣ್ಣೆಂದರೆ ಬಹಳ ಇಷ್ಟ. ಹಸಿದುಬಂದಾಗ ಆತನು ಪರಮಾನಂದದಿಂದ ಅವುಗಳಂ ತಿನ್ನುವನು. ಇದೇ ನೀನು ನನಗೆ ಮಾಡಬಹುದಾದ ಉಪಕಾರ. (ಇಂ) ಸುಭಗೆ! ಹಾಗೆಯೇ ಆಗಲಿ. ನಾನೇ ಧನ್ಯಾತ್ಮನು! ಅರಣ್ಯವಾಸಿಯಾದ ಯಾವಳೋ ಓರ್ವ ಲಲನಾಮಣಿಗೆ ಇಷ್ಟಾದರೂ ಉಪಕಾರವಂ ಮಾಡಲು ಏರ್ಪಟ್ಟ ಈ ನನ್ನ ಜೀವನವೇ ಪವಿತ್ರವಾದುದು. ಎಂದು ಸುಂದರಿಯಿಂದ ಕೊಡಲ್ಪಟ್ಟ ಹಣ್ಣುಗಳುಳ್ಳ ಪುಟಿಕೆಯೊಂದನ್ನು ತೆಗೆದುಕೊಂಡು ತನ್ನವರೊಡನೆ ಸೇರಿ, ಎಲೈ ಮಹೋದಯರೆ! ಇಂತಹ ರಮಣಿಯರುಳ್ಳ ಭರತಖಂಡವು ಭೂಮ್ಯೈಕುಂಠವೇ ಸರಿ. ಪುಣ್ಯಕನಮಾತು ನಿಜವಾದುದು. ನನಗೆ ಸತಿಯರ ಸತೀತ್ವದ ವಿಚಾರದಲ್ಲಿ ಸಾಕಾದಷ್ಟು ನಿದರ್ಶನಗಳು ದೊರಕಿದಂತಾದವು. ಇಗೋ! ನೋಡಿ! ಅಯೋಗ್ಯನಾದ ಪತಿಯಿಂದ ತಳ್ಳಲ್ಪಟ್ಟು ಕಾಡಿನಲ್ಲಿ ಒಂಟಿಯಾಗಿ ತನ್ನ ಮಕ್ಕಳೊಡನೆ ಸಂಚರಿಸುತ್ತಿದ್ದ ಸುಂದರಿಯೋರ್ವಳು ತನ್ನ ಗಂಡನ ದೌಷ್ಟ್ಯವಂ ಲೆಕ್ಕಿಸದೆ ತನ್ನ ಮನೋನಾಯಕನಿಗೆ ಕೊಡಬೇಕೆಂದು ಪ್ರೀತಿಪುರಸ್ಸರವಾಗಿ ಹಣ್ಣುಗಳಂ ಕೊಯಿದು ನನ್ನ ಕೈಲಿ ಕೊಟ್ಟು ಕಳುಹಿಸಿರುವಳು. ನಾನು ಆಕೆಯ ಗಂಡನಿಗೆ ಕೊಡುವದಾಗಿ ಬೇಡಿ ತೆಗೆದು ಕೊಂಡು ಬಂದಿರುವೆನು. ನೀವು ಇದನ್ನು ತೆಗೆದುಕೊಂಡು ಹೋಗಿ ಅವಳ ಗಂಡನಿಗೆ ಕೊಟ್ಟು ನಿರಪರಾಧಿನಿಯಾದ ತನ್ನ ಹೆಂಡತಿಯನ್ನೂ ಮಕ್ಕಳನ್ನೂ ಕರೆಯಿಸಿಕೊಂಡು ಸುಖವಾಗಿ ಬಾಳಬೇಕೆಂದಾಶೀರ್ವದಿಸಿ ಬರುವವರಾಗಿ. ಎಂದು ಕಟ್ಟುಮಾಡಿ ಸಂತುಷ್ಟಾಂತರಂಗನಾಗಿ ತನ್ನ ಲೋಕವಂ ಕುರಿತು ಪ್ರಯಾಣಮಾಡಿದನು. ಸಚ್ಛೀಲದ ಮಹತ್ತನ್ನು ನೋಡಿದಿರಾ! ಎಲೈ ಭರತಮಾತೆಯೇ! ನಿನ್ನುದರದಲ್ಲಿ ಇಂತಹ ಕೋಟ್ಯಾನುಕೋಟಿ ಪುತ್ರಿಯರು ಹುಟ್ಟುವಂತಾಗಿ ನಿನ್ನ ಯಶೋಗಾನದಿಂ ಮಾನವ ಪ್ರಪಂಚವು ಯಾವಾಗಲೂ ಆನಂದಿಸುತ್ತಿರಲೆಂದು ಪತಿತ ಪಾವನನಾದ ಪುರಾಣಪುರುಷನಂ ಅನನ್ಯಭಾವದಿಂ ಪ್ರಾರ್ಥಿಸುತ್ತಾ ಈ ಲೇಖನವಂ ಇಲ್ಲಿಗೆ ಮುಗಿಸುವೆನು. (ಆನಂದಚಂದ್ರಿಕೆ.)

# ಜ್ಞಾನಾಂಜನ

ಉತ್ತಿಷ್ಠತ ! ಜಾಗ್ರತ !! ಪ್ರಾಪ್ಯವರಾನ್ನಿಬೋಧತ !!!

(ಕಠೋಪನಿಷತ್ತು)

ಅಧ್ಯಾತ್ಮ ವಿದ್ಯಾವಿಶಾರದರಾದ ಮಹಾಮುನಿಗಳಿಂದ ಉಕ್ತವಾಗಿರುವ "ನೀತಿಮಾರ್ಗ" ವನ್ನು ಇಲ್ಲಿ ವಿವರಿಸುತ್ತೇನೆ.

ಅವಿದ್ಯಾಂಧಕಾರ ಮಗ್ನರಾಗಿ ನಿದ್ರಿಸುತ್ತಿರುವ, ಓ ಜೀವಿಗಳೇ! ಏಳಿರಿ ! ಜಾಗ್ರತೆಮಾಡಿರಿ !! ಶ್ರೇಷ್ಠರಾದ ಗುರುಗಳನ್ನು ಹೊಂದಿ ಜ್ಞಾನ ಮಾರ್ಗವನ್ನು, ತಿಳಿದುಕೊಳ್ಳಿರಿ !!!

"ಮೂರ್ಖಸ್ತ್ರೀಣಾಂ ಪತಿಶ್ಶತ್ರುಃ । ಖಲಾನಾಂನ್ಯಾಯಬೋಧಕಃ"

(ವಿಜ್ಞಾನ ದರ್ಪಣ)

ಮೂರ್ಖಸ್ತ್ರೀಯು ತನ್ನ ಪತಿಯನ್ನೇ ಶತ್ರುವನ್ನಾಗಿ ಭಾವಿಸುವಳು. ಹಾಗೆಯೇ ದುರಾತ್ಮರು ಧರ್ಮಬೋಧಕರನ್ನು ಶತ್ರುಗಳೆಂದು ಭಾವಿಸಿ ದ್ವೇಷಿಸುವರು. ಧರ್ಮಜ್ಞರೇ ! ಅವಿವೇಕಿಗಳಿಗೆ ಭಯಪಡಬೇಡಿರಿ !!

" ಯಸ್ಮಾನ್ನೋ ದ್ವಿಜತೇಲೋಕೋ, ಲೋಕಾನ್ನೋ ದ್ವಿಜತೇಚ
ಯಃ । ಹರ್ಷಾಮರ್ಷಭಯೋದ್ವೇಗೈಃ, ಮುಕ್ತೋಯಸ್ಸಚಮೇ
ಪ್ರಿಯಃ ॥ (ಭಗವದ್ಗೀತೆ ೧೨-೧೫)

ಯಾವಾತನು ಲೋಕಕ್ಕೆ ತಾನು ಭಯಪಡದೆ, ಲೋಕವು ತನ್ನನ್ನು ನೋಡಿ ಭಯಪಡುವಂತೆ ಭೀಕರನಾಗಿ ಚರಿಸದೆ, ನಿಜಧರ್ಮ ನಿರ್ವಾಹಕನಾಗಿ ಪ್ರವರ್ತಿಸುವನೋ ಅಂತಹ ಮಾನವನು ನನಗೆ ಬಹಳ ಪ್ರಿಯವಾದವನೆಂದು ಗೀತಾಚಾರ್ಯನಾದ ಶ್ರೀ ಕೃಷ್ಣಮೂರ್ತಿ ಹೇಳಿರುತ್ತಾನೆ.

ಧರ್ಮಜ್ಞರಿಗೆಲ್ಲಿಯೂ ಭಯವುಂಟಾಗಲಾರದು. ಭಕ್ತಿ ಕವಚವನ್ನು ತೊಟ್ಟು, ಶ್ರದ್ಧಾಕಿರೀಟವನ್ನು ಧರಿಸಿ, ವೇದಶಸ್ತ್ರವನ್ನು ಹಿಡಿದು, ಧರ್ಮರಥವನ್ನೇರಿ, ಕುಹಕ-ಕುತ್ಸಿತ-ವಿತಂಡ-ಛಲ-ಕಪಟ-ಪಕ್ಷಪಾತ-ನಿರ್ದಯಾದಿ ವಿಷವೃಕ್ಷಗಳಿಂದ ತುಂಬಿರುವ ಅಧರ್ಮಾರಣ್ಯವನ್ನು ಛೇದಿಸಿ, ಸತ್ಯಮಾರ್ಗ

ವನ್ನು ನಿರ್ಮಿಸಿ ಲೋಕೋಪಕಾರವನ್ನು ಮಾಡಿರಿ. ಖಲಜನರಿಗಂಜಬೇಡಿರಿ. ಧರ್ಮಬೋಧಕರನ್ನು ಅಧರ್ಮ ಪ್ರವರ್ತಕರು ಯಾವಾಗಲೂ ನಿಂದಿಸುತ್ತಲೇ ಇರುವರು. ಅದು ಅವರನ್ನು ಬಹುಕಾಲದಿಂದ ಅನುಸರಿಸಿ ಬಂದ ದುರಭ್ಯಾಸವು.

ನಿಸ್ಸಾರವಾದ ಊಷರಕ್ಷೇತ್ರದಲ್ಲಿ ಸಸ್ಯಗಳು ಫಲಿಸದೆ ಹೋಗುವಂತೆ ಅಧರ್ಮ ಪ್ರವರ್ತಕರ ಹೃದಯ ಕ್ಷೇತ್ರದಲ್ಲಿ ಧರ್ಮಬೀಜಗಳಂಕುರಿಸುವುದು ಕಡುದುರ್ಲಭವು. ಅನುಪಯೋಗವಾಗಿ ಬೀಡುಬಿದ್ದಿರುವ ಚೌಳು ಭೂಮಿಯನ್ನು ಹುಣಿಸೇ ಬೀಜ, ಕಳ್ಳಿ ಮುಂತಾದವುಗಳಿಂದ ಶುದ್ಧ ಮಾಡಿ, ವ್ಯವಸಾಯುಕ್ಕುಪಯೋಗಪಡಿಸಿ ಧಾನ್ಯಗಳನ್ನು ಬೆಳೆಯಿಸುವ, ಸೂಕ್ಷ್ಮಗ್ರಾಹಿಗಳಾದ ಕರ್ಷಕರ ಚಂದದಿಂದ ಕುಶಾಗ್ರಬುದ್ಧಿಗಳಾದ ಧರ್ಮಬೋಧಕರು, ಅಧರ್ಮಪ್ರವರ್ತಕರ ಹೃದಯ ಸೀಮೆಯನ್ನಾವರಿಸಿ ಇರುವ ದುರಾಚಾರವೆಂಬ ಕಳೆಯನ್ನು, ಹಿತೋಪದೇಶ ಪರಿಕರಣಗಳಿಂದ ತೆಗೆದು ಹಾಕಿ ಶುದ್ಧಿಮಾಡಿ, ಭಕ್ತಿಯೆಂಬ ಅಮೃತ ವರ್ಷವನ್ನು ಸುರಿಸಬೇಕು. ಬಹುಕಾಲದಿಂದ ಬಣಗಿ ಬೆಂಡಾಗಿರುವ, ಬೀಡುಗಳಮೇಲೆ ವಿಶೇಷ ಜಲವು ಪ್ರವಹಿಸಿದ ಹೊರತು ಮೃದುವಾಗದಂತೆ, ಬಹುಕಾಲದಿಂದ ದುರಾಚಾರ ಭೂಯಿಷ್ಠವಾಗಿರುವ ದುರ್ಜನರ ಭಾವವು ಒಂದು ಬಾರಿಗೆಯೇ ಕ್ರಮಪಡಲಾರದು. ವಿವಿಧೋಪಾಯಗಳಿಂದ ಬಹುಕಾಲವು ಪ್ರಯತ್ನಿಸಿದರೇ, (ಆವುದೋ ಲಕ್ಷಕ್ಕೊಂದು ಮುಂದಜನ್ಮಹೊರತು) ಮಿಕ್ಕವೆಲ್ಲವು ಕಾಲಾಂತರದಲ್ಲಾದರೂ ದಾರಿಗೆ ಬಾರದೆ ಹೋಗದು.

ಕಂದ ‖ ವಿರಹಿಗೆಬಿದಾರ್ಥಿಬೋರ್ಗೆ ।
ಗುರುವಿದ್ಯಾವ್ಯಸನಿಗಂತು, ಕೊಲೆಗಾರಂಗಂ ‖
ಚರಿಹೊತ್ತೆನಿಸುವನಿಶಿಯೊಳ್ ।
ನೆರೆನಿದ್ರಾಸುಖಮದೃಶ್ಯ ಮಪ್ಪುದು ತಿಳಿಯಲ್ ‖

ಎಂಬಂತೆ, ನಿದ್ರೆಬಾರದವನಿಗೆ ಒಂದು ರಾತ್ರಿ ಹೇಗೆ ಒಂದು ಯುಗವಾಗುವುದೋ, ದುರ್ಬಲನಿಗೆ ಒಂದು ಬಾರುದೂರವೇ ಒಂದು ಯೋಜನದಂತೆ ಕಷ್ಟವಾಗಿ ತೋರುವುದೋ ಹಾಗೆಯೇ ದುರ್ಮಾರ್ಗ ಚಿತ್ತಕ್ಕೆ ಧರ್ಮ ಬೋಧೆ ಬಹಳ ಭಾರವಾಗಿತೋರುವುದರಿಂದ ಅವನು ಅದನ್ನು ಭರಿಸಲಾರದೆ ನಿರಾಕರಿಸುವನು. ದುರ್ಮಾರ್ಗವೆಂಬ ಕತ್ತಲೆಯಿಂದ ಪರಿವೃತವಾದ ಹೃದಯುವ

ನ್ನು, ಹಿತಬೋಧೆಯೆಂಬ ಚಂದ್ರಿಕೆಯಿಂದ ಪ್ರಕಾಶಗೊಳಸಬೇಕಾದ ಭಾರವು ವಿವೇಕಿಗಳಮೇಲಿದೆ. ದುರ್ಗುಣವು ನಶಿಸುವವರೆಗೂ, ಎಷ್ಟು ಶಾಸ್ತ್ರಗಳು ಪಠಿಸಿದರೂ ಫಲವುಂಟಾಗಲಾರದು. ಪಂಚಭಕ್ಷ್ಯಗಳನ್ನು ಬಡಿಸುವದಕ್ಕೆ ಮುಖ್ಯಸಾಧನವಾಗಿದ್ದರೂ, ಅವುಗಳ ಸಾರವನ್ನರಿಯದ ಸಟ್ಟುಗದಂತೆಯೂ, ಬಹಳ ಭಾರವಾದ ಗಂಧದ, ಚಕ್ಕೆಗಳ ಹೊರೆಗಳನ್ನು ಹೊರುತ್ತಿದ್ದರೂ ಅದರಸುಗಂಧವನ್ನರಿಯದ ಗಾರ್ದಭದಂತೆಯು, ದುರ್ಜನರೆಷ್ಟು ಶಾಸ್ತ್ರಗಳನ್ನೋದಿದರೂ ಪ್ರಯೋಜನವುಂಟಾಗಲಾರದು. ಅಂತಹ ಅವಿವೇಕಿಯಾರು ? ಅವನ ಲಕ್ಷಣವೆಂತಹದು ? ಎಂದರೆ.

೧. ಯಾವಕಾರ್ಯವನ್ನು ಮಾಡುವುದರಿಂದ ಕೊನೆಗೆ ಪಶ್ಚಾತ್ತಾಪಪಡಬೇಕಾಗುವುದೋ ಅದು ಪಾಪಕಾರ್ಯವೆನಿಸುವುದು, ಅಂತಹ ಕಾರ್ಯವನ್ನೇ ಅತ್ಯಾಸಕ್ತಿಯಿಂದ ಮಾಡುವವನು ಅವಿವೇಕಿ.

೨. ಯಾವನು ಪರಲೋಕದಲ್ಲಿ ರಂಭಾಸಂಭೋಗಾದಿಗಳು ಲಭಿಸುವುವೆಂಬ ತುಚ್ಛಬುದ್ಧಿಯೊಡನೆ ಈ ಲೋಕದಲ್ಲಿ, ಯಜ್ಞವೆಂಬ ಹೆಸರಿನಿಂದ, ಆಕಳು, ಕುರಿ, ಕುದುರೆ, ಮುಂತಾದವುಗಳನ್ನು ಕೊಲ್ಲಿಸುವನೊ ಅವನವಿವೇಕಿ.

೩. ಯಾವನು ನಿರಪರಾಧಿನಿಯೂ ಪತಿವ್ರತೆಯೂ ಅನನ್ಯಗತಿಕಳೂ, ಆದ ಸತಿಯನ್ನು ಅರ್ಧಾಂಗ ಲಕ್ಷ್ಮಿಯೆಂದು ಭಾವಿಸದೆ ಅನುದಿನವೂ ಹೊಡೆದು, ಬೈದು, ಹಿಂಸೆ ಮಾಡುತ್ತಿರುವನೋ, ಅವನವಿವೇಕಿ.

೪. ಯಾವನು, ಸ್ವಯಂಕೃತಾಪರಾಧಗಳಿಂದ ನಾನಾವಿಧಭಯಂಕರ ವ್ಯಾಧಿಬಾಧೆಗಳು ಮುಂತಾದ ಕಷ್ಟನಷ್ಟಗಳು ಸಂಪ್ರಾಪ್ತವಾದಾಗ, ಸರ್ವಲೋಕರಕ್ಷಕನಾದ ಪರಮೇಶ್ವರನ ಮೇಲೆ ಭಾರವನ್ನಿಟ್ಟು ಆ ದಯಾನಿಧಿಯನ್ನು ಪ್ರಾರ್ಥಿಸದೆ, ತಂತ್ರ- ಮಂತ್ರ- ಯಂತ್ರ- ಶಕುನ- ಪ್ರಶ್ನೆ- ಸಾಮುದ್ರಿಕ- ಕ್ಷುದ್ರದೇವತಾ ಶಾಸ್ತ್ರವೇತ್ತರೆಂದು ಹಿಗ್ಗುತ್ತಿರುವ, ಕೊರಚ, ಕೊರವಂಜಿ, ಬುಡುಬುಡಿಕೆಯವರನ್ನೂ, ಪಿಳ್ಳಗೋವಿಯನ್ನೂದುವ ಕಾಡುಗೊಲ್ಲರನ್ನೂ, ಫಕೀರರನ್ನೂ, ಪಂಜಿನ ದಾಸರಿಗಳನ್ನೂ, ಮಿಕ್ಕ ವೇಷಧಾರಿಗಳಾದ ಸ್ವಪ್ರಯೋಜಕರನ್ನೂ, ಕುಕ್ಷಿಂಭರರನ್ನೂ, ಆಶ್ರಯಿಸಿ ಹಲ್ಲುಕಿಸಿದು ಕಣ್ಣುಗಳನ್ನು ಬಿಡುತ್ತಿರುವನೋ ಅವನವಿವೇಕಿ.

೫. ಯಾವನು, ಪರಮೇಶ್ವರನ ಭಕ್ತಿಯನ್ನು ಪ್ರಪಂಚದಲ್ಲಿ ಮಾನವರಿಗುಪದೇಶಿಸದೆ, ವ್ಯಾಧಿಗಳಿಗೆ ತಕ್ಕ ಔಷಧಗಳನ್ನೀಯದೆ, ತನ್ನನ್ನಾಶ್ರಯಿಸುವಂಥಾ ಪಾಮರಜನರಿಂದ, ಧನವನ್ನು ಕಸುಕೊಳ್ಳಲು ವಿಭೂತಿ ಕುಂಕುಮಗಳನ್ನು ಮಂತ್ರಿಸುವೆನೆಂದೂ, ತಾಮ್ರದ ತಗಡುಗಳಲ್ಲಿ ಚಕ್ರಗಳನ್ನು ಬರೆದು ಕಟ್ಟುವೆನೆಂದೂ, ಶಕ್ತಿಪೂಜೆಯನ್ನು ಹಾಕುವೆನೆಂದೂ, ಇಳಿತೆಗೆಯುವನೆಂದೂ, ನವಗ್ರಹ ಶಾಂತಿಗೈಯ್ಯುವೆನೆಂದೂ, ಭಯಂಕರವಾದ ನಟನೆಗಳನ್ನು ತೋರಿಸಿ ಮರುಳುಗೈಯ್ಯುವನೋ ಅವನವಿವೇಕಿ.

೬. ಯಾವನು, ಅಂಜನವನ್ನು ಹಾಕಿ ಧನವನ್ನು ಕಂಡು ಹಿಡಿಯುವೆನೆಂದೂ, ಭೈರವಾದಿ ಮಂತ್ರಗಳನ್ನು ಜಪಿಸಿ ಧನವನ್ನು ಬರಮಾಡುವೆನೆಂದೂ, ಚಿನ್ನವನ್ನು ಮಾಡುವೆನೆಂದೂ, ವ್ಯರ್ಥವಾದ ಡಂಭವಾಕ್ಯಗಳನ್ನು ನುಡಿದು ಪಾಮರರ ಬಳಿ ಇರುವ ಧನವನ್ನು ಕಸುಕೊಳ್ಳುವನೋ ಅವನವಿವೇಕಿ.

೭. ಯಾವನು ಸೀನುವದು, ಕೆಮ್ಮುವದು, ಮನುಜರು-ಕಾಗೆ ಹದ್ದು-ಮುಂತಾದುವುಗಳು ಎದುರಾಗಿ ಬರುವುದರಿಂದ ಅರಿಷ್ಟಗಳುಂಟಾವುವೆಂದು ಅದಕ್ಕಾಗಿ, ಶಾಂತಿಮಾಡಿ ಆ ದೋಷವನ್ನು ಹೋಗಲಾಡಿಸುವೆನೆಂದೂ, ಮೂಢರನ್ನು ಮರುಳುಗೊಳಿಸಿ ಕಾಂಚನಗ್ರಹಣ ಮಾಡುವನೋ ಅವನವಿವೇಕಿ.

೮. ಯಾವನು, ಹೆಂಡ, ಭಂಗಿ, ಸಾರಾಯಿಗಳನ್ನು ಮಿತಿಮೀರಿ ಕುಡಿದು, ಪ್ರಾಣಿಗಳ ಕೊಲೆಯಿಂದುಂಟಾಗುವ ಮಾಂಸವನ್ನು ಪಿಶಾಚದಂತೆ ತಿಂದು ತೇಗಿ ಧನಾಶೆಯಿಂದ ಪರರನ್ನು ಪೀಡಿಸಿ, ಮೋಸಗೈಯುತ್ತ ಏನು ಮಾಡಿದರೂ ವೇದಾಂತಿಯಾದ ಬ್ರಹ್ಮಜ್ಞಾನಿಗೆ ದೋಷವಿಲ್ಲವೆಂದು, ಶುಷ್ಕ ವೇದಾಂತ ವಾಕ್ಯಗಳನ್ನು ಬೊಗಳುವನೋ ಅವನವಿವೇಕಿ.

೯. ಯಾವನು, ತನ್ನಮೇಲೆ ದೇವತಾವೇಶವುಂಟಾಗಿರುವಂತೆ ನಟಿಸುತ್ತಾ, ಮೂಲಿಕಾ ಪ್ರಯೋಗದಿಂದ ಅಗ್ನಿಯಲ್ಲಿಳಿದು ಕ್ಷುದ್ರಮಹಿಮೆಗಳನ್ನು ತೋರಿಸುವನೋ ಅವನವಿವೇಕಿ.

೧೦. ಯಾವನು, ಅಹಂಕಾರದಿಂದ ವೈಮರೆತು ಸ್ತ್ರೀಹತ್ಯ, ಬ್ರಹ್ಮಹತ್ಯ-ಸ್ವರ್ಣಸ್ತೇಯ- ಗುರುತಲ್ಪಗಮನ - ಮದ್ಯಪಾನ- ಮಾಂಸ ಭ

ಕ್ಷಣ-ಜೀವಹತ್ಯ-ಪಿತೃ-ಮಾತೃ-ಸುತ-ಭ್ರಾತೃ- ಭಗಿನೀ ಪ್ರಭೃತಿ ಹತ್ಯಗ ಳನ್ನು ಮಾಡುವನೋ ಅವನವಿವೇಕಿ.

೧೧. ಯಾವನು, ತನ್ನ ತಂದೆ ಯಜ್ಞಮಾಡಿ ರಂಭಾ ಸಂಭೋಗ ಕ್ಕಾಗಿ ಸ್ವರ್ಗಕ್ಕೆ ಹೋಗಿರುವಲ್ಲಿ ಆ ರಂಭೆಯನ್ನು ತಾಯಿಯೆಂದು ಭಾವಿ ಸದೆ, ತಾನೂ ಅದೇ ರಂಭೆಯೊಡನೆ ಕೂಡಬೇಕೆಂದು ಹಿಂಸಾರೂಪವಾದ ಪೌರಾಣಿಕ ಯಜ್ಞಗಳನ್ನು ಮಾಡುವನೋ ಅವನವಿವೇಕಿ.

೧೨. ಯಾವನು ಪರರ ಭಾರ್ಯ್ಯಾ ಪುತ್ರಾದಿಗಳನ್ನು ನೋಡಿ ಪ ಹಸಿಸುವನೋ ಅವನವಿವೇಕಿ.

೧೩. ಯಾವನು ಪಾವಿವರಿಸೆಗಳನ್ನು ಬಗೆಯದೆ ವಸಿತೆಯರನ್ನು ಕೂಡುವನೋ ಅವನವಿವೇಕಿ.

೧೪. ಯಾವನು, ವೇದಕ್ಕಿಂತ ಪುರಾಣವಧಿಕವೆಂದು ವಾದಿಸು ವನೋ ಅವನವಿವೇಕಿ.

೧೫. ಯಾವನು, ಜ್ಞಾನಪೂಜೆಗಿಂತ ಬಾಹ್ಯಪೂಜೆ ಶ್ರೇಷ್ಠವೆಂದ ವಾದಿಸುವನೋ ಅವನವಿವೇಕಿ.

೧೬. ಯಾವನಿಗೆ, ಶಾಸ್ತ್ರಾರ್ಥವು ತಿಳಿದಿದ್ದರೂ ಪರರನ್ನು ವಂಚಿಸಿ ಧನವನ್ನು ಗಳಿಸುವದಕ್ಕೂ ಕೇವಲ ಸ್ವಪ್ರಯೋಜನಕ್ಕೂ ಆಶಿಸಿ ಮಾ ರ್ಗಾಚಾರವನ್ನು ಬೋಧಿಸಿ ವಿರುದ್ಧಾರ್ಥಗಳನ್ನು ಹೇಳಿ ತನ್ನಹಠವನ್ನೇ ಸಾಧಿಸುವುದಕ್ಕೆ ಸಾಹಸಿಸುವನೋ ಅವನವಿವೇಕಿ.

೧೭. ಯಾವನು, ಸ್ವಕಾರ್ಯ್ಯಸಿದ್ಧಿಯಲ್ಲಿ, ಸ್ತ್ರೀಯರ ವಿಷಯದಲ್ಲಿ ಮತ್ತೆ ಕೆಲವು ವೇಳೆಗಳಲ್ಲಿ ಅನೃತವನ್ನಾಡಬಹುದೆಂದೂ, ಅದಕ್ಕಾಧಾರವಾಗಿ ಶುಕ್ರವಾಕ್ಯವಿರುವುದೆಂದೂ ಸಾಧಿಸುವನೋ ಅವನವಿವೇಕಿ.

೧೮. ಯಾವನು, ತನ್ನ ದುರಾಚಾರವನ್ನು ಬಿಡಲಾರದೆ ಮತ್ತಷ್ಟು ದುರಾಗ್ರಹಬದ್ಧನಾಗಿ ಧರ್ಮಬೋಧಕರನ್ನೇ ನಿಂದಿಸಲಾರಂಭಿಸುವನೋ ಅವನವಿವೇಕಿ.

೧೯. ಯಾವನು, ಅನುದಿನವೂ ಇತರರಿಗೆ ದಾನ ಧರ್ಮಗಳ ಪ್ರಭಾವ ವನ್ನು ಅನರ್ಗಳವಾಗಿ ಬೋಧಿಸುತ್ತಾ, ತನ್ನ ಮನೆಗೆ ಬರುವ ಅತಿಥಿಗಳ

ಗಿಷ್ಟು ಅನ್ನವನ್ನಿಡಲೊಲ್ಲದೆ ಮಾಯೋಪಾಯಗಳಿಂದಲೂ ಕೋಪದಿಂದಲೂ, ಗದರಿಸುವುದರಿಂದಲೂ, ಹಿಮ್ಮೆಟ್ಟಿಸುವನೋ ಅವನವಿವೇಕಿ.

೨೦, ಯಾವನು, ಜೂದಾಳಿಗಳ ಸ್ನೇಹವನ್ನು ಮಾಡಿ, ನಿರಂತರವೂ ಇಸ್ಪೇಟು ಆಟದಲ್ಲಿಯೂ, ಹುಲಿಗಟ್ಟ, ಚದುರಂಗ ಮುಂತಾದ ದುಷ್ಕಾರ್ಯಗಳಲ್ಲಿಯೇ ಕಾಲವನ್ನು ಕಳೆಯುವನೋ ಅವನವಿವೇಕಿ.

೨೧. ಯಾವನು, ದುರ್ವೃತ್ತಿಯಿಂದಾದರೂ ಧನವನ್ನುಗಳಿಸಿ ಧರ್ಮಕಾರ್ಯಗಳನ್ನು ಮಾಡಬೇಕೆಂದು ಬೋಧಿಸುವನೋ ಅವನವಿವೇಕಿ.

೨೨. ಯಾವನು, ದಾರಿಯನ್ನು ಹೊಡೆದು ಪ್ರಯಾಣಿಕರನ್ನು ಹಿಂಸಿಸಿ, ಹಾಗೆಗಳಿಸಿದ, ಧನದಿಂದ ಹರಿ ಸೇವೆಯನ್ನು ಮಾಡುವನೋ ಅವನವಿವೇಕಿ.

೨೩. ಯಾವನು. ಐಶ್ವರ್ಯವಂತನಾಗಿದ್ದರೂ, ನಿರಂತರವೂ ಧರ್ಮಬೋಧೆಯನ್ನು ಕೇಳುತ್ತಿದ್ದರೂ, ಉದ್ಧತ್ವಕ್ಕೊಳಗಾಗಿ ಒಂದು ಧರ್ಮಕಾರ್ಯವನ್ನಾದರೂ ಮಾಡದೆ ಮುಗ್ಧನಾಗಿರುವನೋ ಅವನವಿವೇಕಿ.

೨೪. ಯಾವನು, ಲೋಭಿಯಾಗಿ ಸ್ವಾಮಿದ್ರೋಹ-ಮಿತ್ರದ್ರೋಹಗಳನ್ನು ಮಾಡುವನೋ ಅವನವಿವೇಕಿ.

೨೫. ಯಾವನು, ಅಧರ್ಮವೆಂದು ತಿಳದಿದ್ದರೂ ತನ್ನ ಹಠವೇ ಜಯಿಸಬೇಕೆಂದು ವಿತಂಡವಾದವನ್ನು ಮಾಡುತ್ತಾ ಹಠವನ್ನು ಸಾಧಿಸುವನೋ ಅವನವಿವೇಕಿ.

೨೬. ಯಾವನು ತಾನು ಹಿಡಿದ ಮೊಲಕ್ಕೆ ಮೂರೇ ಕಾಲೆಂದು ಅಸಂಗತವಾದ ಯುಕ್ತಿಗಳನ್ನು ಹೇಳಿ ತನ್ನ ಪಟ್ಟನ್ನು ಸಾಧಿಸುವನೋ ಅವನವಿವೇಕಿ.

೨೭. ಯಾವನು, ಪಾತ್ರಾಪಾತ್ರಗಳನ್ನರಿಯದೆ ಆತುರದಿಂದ ಅಪಾತ್ರದಾನವನ್ನು ಮಾಡುವನೋ ಅವನವಿವೇಕಿ.

೨೮. ಯಾವನು, ವಿಶೇಷ ಪರಿಚಯವಾದೊಡನೆ ಗರ್ವದಿಂದ ಚಿಕ್ಕವನು ದೊಡ್ಡವನೆಂಬ ಭಾವವಿಲ್ಲದೆ ಸಜ್ಜನರನ್ನು ಅಲ್ಪಬುದ್ಧಿಯಿಂದ ಪರಿಹಸಿಸುವನೋ ಅವನವಿವೇಕಿ.

೨೯. ಯಾವನು, ವಿತರಣ, ವಿಶ್ವಾಸ, ವಿಮಲತ್ವಗಳನ್ನು ಸ್ವಲ್ಪವಾದರೂ ಬಗೆಯದಿರುವನೋ ಅವನವಿವೇಕಿ.

೩೦ ಯಾವನು. ಐಶ್ವರ್ಯಾಧಿಕಾರ ಮದೋನ್ಮತ್ತನಾಗಿ ದುರ್ಮಾರ್ಗರ ಹೇಳಿಕೆಗೆ ಒಳಪಟ್ಟು ಸತ್ಪುರುಷರಿಗೆ ಕೆಡಕು ಗೆಯ್ಯುವನೋ ಅವನ ವಿವೇಕಿ.

೩೧. ಯಾವನು, ಅಣುವಷ್ಟಾದರೂ ಪರೋಪಕಾರ ಮಾಡದೆ, ದೇಹವನ್ನು ಬೆಳೆಯಿಸುವನೋ ಅವನವಿವೇಕಿ.

೩೨. ಯಾವನು, ಎದುರಿನಲ್ಲಿ ಭೂಷಿಸುತ್ತಲೂ, ಪರೋಕ್ಷದಲ್ಲಿ ದೂಷಿಸುತ್ತಲೂ, ಫಲಿತ ಜ್ಯೋತಿಷ ರಾಶಿಗಳಾದ ಮಿಥುನ ಕನ್ಯಾಧನುರ್ಮೀನ ರಾಶಿಗಳಂತೆ ದ್ವಿಸ್ವಭಾವಿಯಾಗಿರುವನೋ ಅವನವಿವೇಕಿ.

೩೩ ಯಾವನು, ಪವಿತ್ರಗಳಾದ ಸೂರ್ಯಾದಿ ಗ್ರಹಗೋಳಗಳನ್ನು, ಆ ರಾಶಿಗೆ ಪಾಪ, ಈ ರಾಶಿಗೆ ನೀಚ, ಮತ್ತೊಂದು ರಾಶಿಗೆ ಪರಮನೀಚರೆಂದು ಹುಚ್ಚು ಕೂಗುಗಳನ್ನು ಕೂಗುವನೋ ಅವನವಿವೇಕಿ.

೩೪. ಯಾವನು, ಶಾಸ್ತ್ರಗಳನ್ನೋದಿಯೂ ಶಾಂತವಿಲ್ಲದೆ ದುರಂತ ಕೋಪಾಟೋಪಗ್ರಸ್ತನಾಗಿರುವನೋ ಅವನವಿವೇಕಿ.

೩೫. ಯಾವನು, ತಿಂದು-ತೇಗಿ ನಿದ್ರೆಗೆಯ್ಯುವುದು, ಧನವನ್ನು ಗಳಿಸುವುದು ಹೊರತು, ಪಾರಮಾರ್ಥಿಕ ಚಿಂತೆಯೇ ಇಲ್ಲದೆ ವ್ಯರ್ಥವಾಗಿ ಕಾಲಕ್ಷೇಪವನ್ನು ಮಾಡುವನೋ ಅವನವಿವೇಕಿ.

೩೬. ಯಾವನು, ತಾನು ಕಲಿತಿರುವ ವಿದ್ಯೆಗೆ ಸಾರ್ಥಕವಾಗಿ ಇತರರ ಸದ್ವಿದ್ಯೆಯನ್ನಾದರಿಸಿ ಗೌರವಿಸದೆ, ಇತರರ ವಿದ್ಯಾಪ್ರದರ್ಶನಕ್ಕೆ ಅವಕಾಶ ಕೊಡದೆ ನಿರುತ್ಸಾಹಗೊಳಿಸಿ ತನ್ನ ವಿದ್ಯೆಯಿಂದ ಗರ್ವಿಸುವನೋ ಅವನವಿವೇಕಿ.

೩೭. ಯಾವನು, ತಾನು ಒಳ್ಳೆ ಸ್ಥಿತಿಯಲ್ಲಿದ್ದರೂ, ತನ್ನನ್ನಿತರರು ಆಶ್ರಯಿಸಿದಾಗ ಬೇಕಾದ ಸಹಾಯವನ್ನು ಮಾಡದೆ, ಲೋಭಿಯಾಗಿ ಆಶ್ರಿತರೊಂದಿಗೆ ವಿತಂಡವಾದವನ್ನು ಮಾಡಿ ಯೋಚಿಸುತ್ತಿರುವನೋ ಅವನ ವಿವೇಕಿ.

೩೮. ಯಾವನು. ತನ್ನ ಸೌಖ್ಯಕ್ಕಾಗಿ ಅನ್ಯರನ್ನು ಕೆಡಿಸುತ್ತಾ, ಮತ್ತು ಪಶ್ವಾದಿ ಜಂತುಗಳನ್ನು ದಯೆಯಿಲ್ಲದೆ ಕೊಲ್ಲಿಸುವನೋ ಅವನ ವಿವೇಕಿ.

೪೯. ಯಾವನು ತಾನು ಮಾಡುವ, ದೇವಪೂಜೆಯಿಂದ ಆದಿನ ಕ್ಕಾದಿನವೇ ಫಲಪ್ರಾಪ್ತಿಯಾಗಬೇಕೆಂದೆಣಿಸುವನೊ ಅವನವಿವೇಕಿ.

೪೦. ಯಾವನು, ತನ್ನನ್ನು ತಾನೇ ಉದ್ಧರಿಸಿಕೊಳ್ಳದೆ ಪರಿತಪಿಸು ವನೋ ಅವನವಿವೇಕಿ.

೪೧. ಯಾವನು, ಪಾಠಶಾಲೆಯಲ್ಲಿ ಬಾಲಕರು, ತಮ್ಮ ಉಪಾ ಧ್ಯಾಯರಲ್ಲಿ ನಿರ್ಬಂಧಕ್ಕಾಗಿ ಬಲಾತ್ಕಾರವಾಗಿ ಪಾಠಗಳನ್ನು ಕಲಿತು ಒಪ್ಪಿ ಸುತ್ತಾ ಅವುಗಳ ಸಾರವನ್ನರಿಯದೆ ಪರೀಕ್ಷಾ ಕಾಲದಲ್ಲಿ ತಪ್ಪಿ ಹೋಗು ವಹಾಗೆ, ನಿರ್ವಾಣಮಂಜರಿ-ಜ್ಞಾನದೀಪಿಕೆ - ಶಿವಾನಂದಲಹರೀ - ಕೃಷ್ಣಾ ಷ್ಟಕ - ದೇವೀಸ್ತವ ಮುಂತಾದ ಸ್ತೋತ್ರ ಪಾಠಗಳನ್ನು ಕಂಠಪಾಠ ಮಾಡಿ ಅನುದಿನವೂಗಿಳಿಗಳಂತೆ ಒಪ್ಪಿಸುತ್ತ, ಧರ್ಮಕಾರ್ಯವು ಸಂಪ್ರಾಪ್ತವಾ ದಾಗ ದಯಾ ದಾಕ್ಷಿಣ್ಯಗಳನ್ನು ತೋರಿಸದೆ ಕಾಠಿನ್ಯವನ್ನು ಹೊಂದಿ ಅಜ್ಞಾ ನಕ್ಕೆ ಸಿಲುಕಿ, ಮೋಸಹೋದರೂ, ಕೊನೆಗೆ ತಾನೊಪ್ಪಿಸುವ ಮಂತ್ರಪಾ ಠದಿಂದಲೇ ದೈವಭಕ್ತನಾದೆನೆಂದು ತಿಳಿಯುವನೋ ಅವನವಿವೇಕಿ.

೪೨. ಯಾವ ಸ್ತ್ರೀ ಚಂಚಲ ಚಿತ್ತಳಾಗಿ ತನ್ನ ಪುರುಷನನ್ನು ದ್ವೇ ಷಿಸಿ ಪರರ ಬಳಿಯಲ್ಲಿ ಸೇರುವಳೋ ಅವಳವಿವೇಕಿನಿ.

೪೩. ಯಾವ ಸ್ತ್ರೀ, ಅನುದಿನವೂ ಶರೀರವನ್ನು ಶುದ್ಧಿಮಾಡಿಕೊ ಳ್ಳದೆ ತಲೆಯಕೂದಲಿನ ಸಿಕ್ಕನ್ನು ಸಹ ಬಿಡಿಸಿಕೊಳ್ಳದೆ, ಅರಿಸಿನ ಕುಂಕು ಮಗಳನ್ನು ಧರಿಸದೆ, ರಕ್ಕಸಿಯಂತೆ ಪತಿಯನ್ನು ಬಾಧಿಸುವಳೋ ಅವಳವಿವೇಕಿನಿ.

೪೪. ಯಾವ ಸ್ತ್ರೀ, ಅವಿದ್ಯಾಂಧಕಾರ ಮಗ್ನಳಾಗಿ ಕಾರಣವಿಲ್ಲದೆ ಅನ್ಯರನ್ನು ನೋಡಿದಾಗಳೆಲ್ಲ ನಗುತ್ತಾ, ಹಾವ ಭಾವ ವಿಲಾಸ ವಿಭ್ರಮಗ ಳನ್ನು ತೋರಿಸುತ್ತಾ ಮೇಲ್ಸೆರಗನ್ನು ಮಾತಿಮಾತಿಗೂ ಸವರಿಸಿಕೊಳ್ಳು ತ್ತಾ ಮೊಣಕಾಲ್ಗಳನ್ನೂ ಪಾದಗಳನ್ನೂ ನೋಡಿಕೊಳ್ಳುತ್ತಾ. ಭೂಮಿ ಯಲ್ಲಿರುವಹಾಗೆ ದಡದಡನೆ ನಡೆಯುತ್ತಾ ಕಾರಣವಿಲ್ಲದ ವಿಕಾರಗಳನ್ನು ಮಾಡುತ್ತಿರುವಳೋ ಅವಳವಿವೇಕಿನಿ.

೪೫. ಯಾವ ಸ್ತ್ರೀ, ತನ್ನ ಮನೆಯ ದ್ರವ್ಯವನ್ನೇ ಅಪಹರಿಸುತ್ತ, ಗಂಡನಸಬಿಯೊಂದಿಗೆ ವ್ಯಾಜ್ಯವಾಡುತ್ತಾ, ದುರ್ಭಾಷೆಗಳನ್ನು ನುಡಿಯುತ್ತಾ,

ಜಾರಿಣಿಯರೊಂದಿಗೆ ಕೂಡುತ್ತಾ, ಪರರ ಮನೆಯ ಗೃಹಕೃತ್ಯಗಳನ್ನು ಮಾತಿಮಾತಿಗೂ ಹೇಳಿ ಪರಿಹಾಸಮಾಡುತ್ತಾ, ಬೆಕ್ಕೋ ಇಲಿಯೋ ಯಾವುದೋ ಒಂದರ ಮೇಲೆ ನೆಪವಿಟ್ಟುಕೊಂಡು ಮನೆಯವರನ್ನು ಬೈಯುತ್ತಾ, ಮಕ್ಕಳನ್ನು ಹೊಡೆಯುತ್ತಾ ಗಂಡನು ಮಾಡುವ ಧರ್ಮಕಾರ್ಯಗಳನ್ನು ಮಾಡಲಾಗದೆಂದು ವಾದಿಸುತ್ತಾ ಅಹಂಕರಿಸುತ್ತಿರುವಳೋ ಅವಳ ವಿವೇಕಿನಿ.

೪೬. ಯಾವ ಸ್ತ್ರೀ, ಮಾತಿಮಾತಿಗೂ ಭಾವಿಯಲ್ಲಿ ಬೀಳುವೆ ಕತ್ತಿಗೆ ನೇಣು ಹಾಕಿಕೊಂಡು ಪ್ರಾಣಬಿಡುವೆ, ನಡುಬೀದಿಯಲ್ಲಿ ಮಾನವನ್ನು ತೆಗೆಯುವೆನೆಂದು ಗಯ್ಯಾಳಿತನದಿಂದ ಗಂಡನನ್ನು ಹೆದರಿಸುತ್ತಿರುವಳೋ ಅವಳವಿವೇಕಿನಿ.

೪೭. ಯಾವ ಸ್ತ್ರೀ, ಹುಟ್ಟಿದ ಮನೆಯವರ ಮೇಲಿನ ವಿಶ್ವಾಸದಿಂದ, ಗಂಡನಮನೆಯ ಸಂಪತ್ತನ್ನು ಹಾಳುಮಾಡುತ್ತಾ, ತಾನು ಹೆತ್ತಮಕ್ಕಳಿಗೆ ಸಹಾ ಮೋಸಮಾಡುತ್ತಾ ; ಅದಕ್ಕಾಗಿ ಮಕ್ಕಳೊಡನೆ ವ್ಯಾಜ್ಯವಾಡುತ್ತಿರುವಳೋ ಅವಳವಿವೇಕಿನಿ.

೪೮. ಯಾವ ಸ್ತ್ರೀ, ಗಂಡನು ಸಜೀವಿಯಾಗಿದ್ದರೂ ಉಪವಾಸಾದಿ ವ್ರತಗಳು ಗೈವಳೋ ಅವಳವಿವೇಕಿನಿ.

೪೯. ಯಾವ ಸ್ತ್ರೀ, ತನ್ನ ಪತಿಯನ್ನು ಕುರಿತು ಮನೆಗೆ ಬರುವ ಸದ್ಬಂಧು ಮಿತ್ರರನ್ನು, ಅತಿಥಿ ಅಭ್ಯಾಗತರನ್ನು ಪ್ರಿಯವಚನಗಳಿಂದ ಸತ್ಕರಿಸದೆ ಅಲಕ್ಷ್ಯ ಮಾಡುತ್ತಿರುವಳೋ ಅವಳವಿವೇಕಿನಿ.

೫೦. ಯಾವ ಸ್ತ್ರೀ, ಮನೆಯ ಕೆಲಸಗಳನ್ನು ಮಾಡುವಾಗಲಿಲ್ಲದಿದ್ದರೂ ; ಇತರ ವೇಳೆಗಳಲ್ಲಿಯಾದರೂ ಸತ್ಕಾಲಕ್ಷೇಪಮಾಡದೆ, ಸದ್ಗ್ರಂಥಗಳನ್ನೋದದೆ, ದುಸ್ಮತಿಗಳೊಡಗೂಡಿ, ಪರನಿಂದಾಪರಳಾಗಿ, ತಾನು ಮಾಡಿದ, ಸಾರು, ಪಲ್ಯ, ಹುಳಿ ಮುಂತಾದ ಪಾಕಶಾಲಾ ಪ್ರಸಂಗಗಳಿಂದಲೇ ವ್ಯರ್ಥಾಲಾಪಗೈಯುತ ಕಾಲ ಕಳೆಯುವಳೋ ಅವಳವಿವೇಕಿನಿ.

ಇಾತು ಅವಿವೇಕಿಗಳ ಸಂಖ್ಯೆಯು ಅಪರಿಮಿತವಾಗಿರುತ್ತದೆ. ಇನ್ನು ವಿವೇಕಿಗಳ ಲಕ್ಷಣವು ಸ್ವಲ್ಪಮಟ್ಟಿಗೆ ಹೇಳಲ್ಪಡುತ್ತದೆ.

೧ ಯಾವನು, ಅಪಾರವಾದ ಈಶ್ವರ ಭಕ್ತಿಯುಳ್ಳವನಾಗಿ, ಜನಸೇ-

ಜನಕ-ಆಚಾರ್ಯ-ಸಖಿ-ಬಂಧು, ಮಿತ್ರ ಮುಂತಾದ ಸಮಸ್ತವೂ, ಆ ದಯಾ ನಿಧಿಯೇ ಯೆಂಬ ಅವ್ಯಾಜ ಪ್ರೇಮದಿಂದ ನಿರುಪಾಧಿಕನಾಗಿ ಪ್ರವರ್ತಿಸು ವನೋ ಅವನು ವಿವೇಕಿ.

೨ ಯಾವನು ದಾಟಲಶಕ್ಯವಾದ ಪಾಪಸಮುದ್ರವನ್ನು ಸುಲಭವಾಗಿ ಉತ್ತರಿಸುವದಕ್ಕವಶ್ಯಕಗಳಾದ ಸಾಧನ ಸಾಮಗ್ರಿಗಳನ್ನು ಸಂಪಾದಿಸಲು ಯತ್ನಿಸುವನೋ ಅವನು ವಿವೇಕಿ.

೩ ಯಾವನು, ಯಾವ ಆಶ್ರಮದಲ್ಲಿದ್ದರೂ ಭವತರಣೋಪಾಯ ವಾದ ನೀತಿ ಮಾರ್ಗವನ್ನನುಸರಿಸಿ ಪ್ರವರ್ತಿಸುವನೋ ಅವನು ವಿವೇಕಿ.

೪ ಯಾವನು, ಲೋಹಮಯವಾದ ಆಭರಣಗಳಲ್ಲಿನ ಭ್ರಾಂತಿಯನ್ನು ದಿನದಿನಕ್ಕೂ ತಗ್ಗಿಸುತ್ತಾ ಧರ್ಮಭೂಷಣಗಳನ್ನು ಧರಿಸಲು ಪ್ರಯತ್ನಪಡು ವನೋ ಅವನು ವಿವೇಕಿ.

೫ ಯಾವನು, ಕಷ್ಟಸುಖಗಳಲ್ಲಿ ಸಮಬುದ್ಧಿಯಾಗಿ, ಎಲ್ಲಾ ವಿಷ ಯಗಳಲ್ಲಿಯೂ, ಎಲ್ಲಕಾಲದಲ್ಲಿಯೂ ಸತ್ಯವನ್ನು ಬಿಡದೆ ಪ್ರವರ್ತಿಸುವನೋ ಅವನು ವಿವೇಕಿ.

೬ ಯಾವನು, ಪರರ ಶ್ರೇಯಸ್ಸನ್ನೂ, ಯಶಸ್ಸನ್ನೂ, ಸಂಪತ್ತ ನ್ನೂ, ಕಂಡು ಸಂತೋಷಿಸುವನೋ ಅವನು ವಿವೇಕಿ.

೭ ಯಾವನು ತನ್ನತಪ್ಪುಗಳನ್ನು ಇತರರು ತಿಳಿಸುವಲ್ಲಿ ಶಾಂತನಿಂ ಕೇಳಿ ಅವುಗಳನ್ನು ತಿದ್ದಿಕೊಳ್ಳುವನೋ ಅವನು ವಿವೇಕಿ.

೮ ಯಾವನು, ಇವರು ನನ್ನವರು, ಅವರು ಪರರೆಂಬಭೇದ ಬುದ್ಧಿ ಯನ್ನುಬಿಟ್ಟು ಈ ಸರ್ವವೂ ಪರಮೇಶ್ವರನ ವಿಶ್ವಕುಟುಂಬವೆಂದು ತಿಳಿದು, ಕೈಯಲ್ಲಾದಮಟ್ಟಿಗೂ ಭೂತಕೋಟಿಗೆ ಉಪಕಾರ ಮಾಡುವನೋ ಅವನು ವಿವೇಕಿ.

೯ ಯಾವನು, ಪರಧನ ಪರಾಂಗನಾದರ್ಶನಕಾರಣದಿಂದ-ಚಿತ್ತವು ಚಾಂಚಲ್ಯವನ್ನು ಪಡೆದಾಗ-ಭಗವಂತನನ್ನು ಧ್ಯಾನಿಸಿ, ಆ ಚಾಂಚಲ್ಯವನ್ನು ಹೋಗಲಾಡಿಸಿ ಕೊಳ್ಳುವನೋ ಅವನು ವಿವೇಕಿ.

೧೦ ಯಾವನು, ಸನ್ಮಾರ್ಗದಲ್ಲಿ ಪ್ರವರ್ತಿಸುವ ತನಗೆ ಪ್ರಸ್ತುತ ಕಾಲ

ದಲ್ಲಿ ಸಂಭವಿಸುವ ಕಷ್ಟಪರಂಪರೆಗಳು ಪೂರ್ವ ಜನ್ಮಕೃತ ಪಾಪ ಫಲದಿಂದ ಪ್ರಾಪ್ತಗಳಾದುವೆಂದೂ, ಅವುಗಳನ್ನು ಪರಮಶಾಂತದಿಂದ ಪ್ರಮಾದ ರಹಿತನಾಗಿ ಅನುಭವಿಸಬೇಕೆಂಪೂ, ಹಾಗೆ ಶಾಂತವಾಗಿ ಅನುಭವಿಸ ವುದೇ ತನಗೆ ಭವಿಷ್ಯತ್ಕಾಲದಲ್ಲಿ ಸುಖದಾಯಕವೆಂದೂ ತಿಳಿದು ಸುಖವಾಗಿ ಜೀವಿಸುವನೋ ಅವನು ವಿವೇಕಿ.

೧೧. ಯಾವನು ಇತರರ ಮೆಚ್ಚಿಕೆಗಾಗಿ ಇದಿರುನೋಡದೆ, ಬಾಹ್ಯಾಡಂಬರಗಳನ್ನು ವರ್ಜಿಸಿ ನಿಜಧರ್ಮ ನಿರ್ವಹಣಮಂಗೆಯ್ಯುವನೋ ಅವನು ವಿವೇಕಿ.

೧೨ ಯಾವನು, ಆಪತ್ಕಾಲದಲ್ಲಿ ಮಿತಿಮೀರಿ ದುಃಖಿಸದೆ, ಸಂಪತ್ಕಾಲದಲ್ಲಿ ಮಿತಿಮೀರಿ ಹಿಗ್ಗದೆ ಸಮದರ್ಶಿಯಾಗಿರುವನೋ ಅವನು ವಿವೇಕಿ.

೧೩ ಯಾವನು, ನಿರಂತರವೂ ಒಂದೇ ರೀತಿಯಾಗಿ ನಡೆಯಬೇಕೆಂಬ ಪುಸ್ಕರವನ್ನು ತೊರೆದು, ದೇಶಕಾಲಪಾತ್ರಗಳನ್ನನುಸರಿಸಿ ಪರರಿಗೆ ಹಿಂಸೆಕೊಡದೆ, ತಾನು ವ್ಯಥೆಗೊಳಗಾಗದೆ, ಧರ್ಮವನ್ನು ತಪ್ಪದೆ, ಬಹು ಸೂಕ್ಷ್ಮವಾಗಿ ವರ್ತಿಸುವನೋ ಅವನು ವಿವೇಕಿ.

೧೪ ಯಾವನು ತನ್ನನ್ನು ಇತರರು ಹಿಂಸೆ ಗೈವಲ್ಲಿ ತಾನೆಂತು ಭಯದಿಂದ ಪರಿತಪಿಸುವನೋ, ಹಾಗೆಯೇ ಇತರರೂ ಪರಿತಪಿಸುವರೆಂಬ ಮರ್ಮವನ್ನು ತಿಳಿದು ಯಾರನ್ನಾಗಲಿ ಅಥವಾ ಯಾವ ಪ್ರಾಣಿಯನ್ನಾಗಲಿ ಹಿಂಸೆ ಮಾಡದೆ ದಯಾಪರಿಪೂರ್ಣನಾಗಿ ವರ್ತಿಸುವನೋ ಅವನು ವಿವೇಕಿ.

೧೫ ಯಾವನು, ಕಾಷಾಯ ವಸ್ತ್ರಧಾರಣ ದಿಗಂಬರತ್ವ, ಜಟಾಧಾರಣ, ನಿರ್ನಿದ್ರತೆ, ನಿರಾಹಾರ, ಮಿತಿಮೀರಿದನಿದ್ರೆ, ಅಮಿತಾಹಾರ, ಭೂತಲ ಶಯನ, ಶತಾಂತರ ವ್ರತಾಚರಣೆ ಮುಂತಾದುವುಗಳುಮುಕ್ತಿಸಾಧನೆಗಳೆಂಬ ಭ್ರಮೆಗೊಳಪಡದೆ, ಜೀವ ಕೋಟಿಗಳಲ್ಲಿ ದಯಾರಸವುಳ್ಳವನಾಗಿರುವನೋ ಅವನು ವಿವೇಕಿ.

೧೬ ಯಾವನು, ಲೋಕದಲ್ಲಿ ಸ್ವರೂಪಜ್ಞಾನ ಹೀನರು, ತನ್ನನ್ನು ಹೀಳನೆ ಗೈವರೆಂಬ ಭೀತಿಯಿಂದ ತಾನಿರುವ ಧರ್ಮಮಾರ್ಗವನ್ನು ಬಿಡದೆ, ಧೈರ್ಯದಿಂದ ವರ್ತಿಸುವನೋ ಅವನು ವಿವೇಕಿ.

೧೭. ಯಾವನು, ಕಷ್ಟಪರಂಪರೆಗಳು ಯಾವ ವಿಧದಲ್ಲಿ ಸಂಪ್ರಾಪ್ತವಾಗುತ್ತಿದ್ದರೂ, ಚಿತ್ತಶಾಂತಿಯನ್ನೊಂದುತ್ತಾ, ವಿವೇಕದಿಂದವುಗಳನ್ನು ಪರಿಹರಿಸಿಕೊಳ್ಳುವನೋ ಅವನುವಿವೇಕಿ.

೧೮. ಯಾವನು, ಪುರುಷ ಪ್ರಯತ್ನವನ್ನು ಮರೆಯದೆ ನಿರುಪಾಧಿಕವಾಗಿ ಧರ್ಮಕಾರ್ಯಗಳನ್ನು ಲೌಕಿಕ, ವೈದಿಕವೆಂಬ ಭೇದವಿಲ್ಲದೆ ಆಚರಿಸುತ್ತಾ ಫಲಿತಾಂಶವನ್ನು ಈಶ್ವರನಲ್ಲಿ ಸಮರ್ಪಿಸುವನೋ ಅವನುವಿವೇಕಿ..

೧೯. ಯಾವನು, ಪ್ರಮಾದದಿಂದ ತಾನಾಚರಿಸಿದ ದುಷ್ಕೃತ್ಯಗಳನ್ನು ಕುರಿತು ನಿರಂತರವೂ ಮನಸ್ಸಿನಲ್ಲಿ ಯೋಚಿಸುತ್ತಾ ಮನಸ್ಸನ್ನು ಚಂಚಲಾಣುವುಗಳಿಂದ ತುಂಬಿ ಹಾಳುಮಾಡದೆ, ಮಂಗಳಕರವಾದ ಭಗವದ್ಗುಣಾನುಭವದಿಂದ ಪವಿತ್ರನಾಗಿ ಪರಮ ಸಾಧುವೆನಿಸಿ ಕೊಳ್ಳುವನೋ ಅವನುವಿವೇಕಿ.

೨೦. ಯಾವನು, ಪಾಮರರಿಗೆ ಹಿತವನ್ನು ಬೋಧಿಸುವದಲ್ಲದೆ, ಯಾವಾಗಲೂ ಆತ್ಮಸ್ತುತಿಪರನಿಂದೆಯನ್ನು ಗೆಯ್ಯದೆ ತನ್ನ ತಪ್ಪುಗಳನ್ನು ಸಹ ಇತರರಿಂದ ತಿಳಿದು, ಅವನ್ನು ಸರಿಪಡಿಸಿಕೊಳ್ಳುವನೋ ಅವನುವಿವೇಕಿ.

೨೧. ಯಾವನು, ಸದ್ವಿಚಾರವನ್ನು ಕುರಿತು ಬಾರಿಬಾರಿಗೂ ಪ್ರಯತ್ನಿಸುತ್ತಿರುವನೋ ಅವನುವಿವೇಕಿ.

೨೨. ಯಾವನು, ಪಾಪರೂಪವಾದ ಸಂಸಾರಸಮುದ್ರವನ್ನು ದಾಟುವದಕ್ಕೆ ಭಗವದ್ಭಕ್ತರಾದ ಮಹಾ ಪುರುಷರ ಚಾರಿತ್ರಪಠನವೇ ಮುಖ್ಯ ಸಹಾಯಕವೆಂದು ತಿಳಿದು, ಅನುದಿನವೂ ಸತ್ಪುರುಷರ ದಿವ್ಯ ಚರಿತ್ರೆಗಳನ್ನು ಓದುತ್ತಾ ಅವಕ್ಕನುಸಾರವಾಗಿ ವರ್ತಿಸುವನೋ ಅವನುವಿವೇಕಿ.

೨೩. ಯಾವನು, ಸಣ್ಣವಾದ ವರ್ಷಬಿಂದುಗಳೇ ದೊಡ್ಡನದಿಯಾಗಿ ಪರಿಣಮಿಸುವುವೆಂದು ಗ್ರಹಿಸುತ್ತಾ, ಸ್ವಲ್ಪವೆಂದೆಣಿಸದೆ ಒಂದೊಂದು ಸತ್ಕಾರ್ಯವನ್ನೇ ಆಚರಿಸಿ ಮೋಕ್ಷಸಾಧನ ಸಾಮಗ್ರಿಗಳನ್ನು ಸೇಕರಿಸುವನೋ ಅವನುವಿವೇಕಿ.

೨೪. ಯಾವನು, ತನ್ನ ಮಿತ್ರ,ಬಾಂಧವರು ಯಾರಾದರೂ ಧರ್ಮವಿರುದ್ಧವಾದ ದುಷ್ಕಾರ್ಯವನ್ನು ಮಾಡುತ್ತಿರುವಲ್ಲಿ, ಅವರಿಗೆ ಬುದ್ಧಿಹೇಳಿ ತಿದ್ದುವುದಲ್ಲದೆ, ತನ್ನಮಾತನ್ನು ಕೇಳದೆ ಪರಿಹಾಸ್ಯಗೈದಲ್ಲಿ ಅವರ ಮೇಲೆ ದ್ವೇ-

ಷಿಸದೆ ಮನಸ್ಸನ್ನು ಕಳವಳಪಡಿಸಿಕೊಳ್ಳದೆ ನೆಮ್ಮದಿಯಾಗಿರುವನೋ ಅವನುವಿವೇಕಿ.

೨೫. ಯಾವನು, ಲೌಕಿಕ ಕಾರ್ಯಗಳಂತೆ ಪಾರಮಾರ್ಥಿಕ ಕಾರ್ಯಗಳಲ್ಲಿಯೂ ದ್ರವ್ಯಲಾಭವುಂಟಾಗಬೇಕೆಂಬ ಇಚ್ಛೆಯಿಲ್ಲದವನಾಗಿ ಪಾತ್ರಾಪಾತ್ರಗಳನ್ನರಿತು ನುಡಿಯುವನೋ ಅವನುವಿವೇಕಿ.

೨೬. ಯಾವನು, ತನ್ನ ತಪ್ಪನ್ನು ತಾನೊಪ್ಪಿಕೊಳ್ಳುವದೇ ಆತ್ಮಗೌರವವೆಂದು ತಿಳಿದುಕೊಳ್ಳುವನೋ ಅವನುವಿವೇಕಿ.

೨೭. ಯಾವನು, ಸರ್ವಕಾಲದಲ್ಲಿಯೂ ಲೋಕೋಪಕಾರವಾದ ಕಾರ್ಯಗಳನ್ನು ಮಾಡುವುದೇ ಈಶ್ವರ ಸೇವೆಯೆಂದು ಭಾವಿಸುವನೋ ಅವನುವಿವೇಕಿ.

೨೮. ಯಾವನು, ಪೂಜ್ಯರಾದ ಗುರುಹಿರಿಯರನ್ನು ಧಿಕ್ಕರಿಸದೆ ಗೌರವಿಸುವನೋ ಅವನುವಿವೇಕಿ.

೨೯. ಯಾವನು. ಭಾರ್ಯೆಯನ್ನು ತನ್ನ ಅರ್ಧಾಂಗಲಕ್ಷ್ಮಿಯೆಂದು ಭಾವಿಸಿ ಆಕೆಯನ್ನು ಸಂತೋಷ ಪಡಿಸುವನೋ ಅವನುವಿವೇಕಿ.

೩೦. ಯಾವನು, ಭಾರ್ಯಾ ಪುತ್ರಾದಿಗಳಲ್ಲಿ ಸ್ನೇಹಭಾವವನ್ನು ಹೊಂದಿ ನಿರುಪಾಧಿಕನಾಗಿ ಜೀವಿಸುವನೋ ಅವನು ವಿವೇಕಿ.

೩೧. ಯಾವನು ರಾಗ-ದ್ವೇಷ-ಕಾಮ-ಕ್ರೋಧ-ಲೋಭ-ಮೋಹ ಮದ-ಮಾತ್ಸರ್ಯ- ಈರ್ಷ್ಯಾಸೂಯ-ದಂಭದರ್ಪ-ಅಹಂಕಾರ ಮೊದಲಾದ ದುರ್ಗುಣಗಣನ್ನು ನಾಶಗೊಳಿಸಿ ಪರಮ ಶಾಂತಮೂರ್ತಿಯಾಗಿ ಸರ್ವಕಾಲದಲ್ಲಿಯೂ ಪ್ರಸನ್ನನಾಗಿರುವನೋ ಅವನು ವಿವೇಕಿ.

೩೨. ಇಂತಹ ಸದ್ಗುಣಗಳುಳ್ಳ ಸ್ತ್ರೀಯರು ವಿವೇಕವತಿಯರು. ಭ್ರಾತೃ ಬಂಧುಗಳಿರಾ! ಈ ವಿಜ್ಞಾಪನೆಯನ್ನು ಬಹು ಶ್ರದ್ಧೆಯಿಂದ ಆಲಿಸಬೇಕೆಂದು ನನ್ನ ಮುಖ್ಯಪ್ರಾರ್ಥನೆಯು.

ವಿವೇಕಾವಿವೇಗಳನ್ನು ಕುರಿತು ಇದುವರಿಗೂ ಹೇಳಲ್ಪಟ್ಟಿತಲ್ಲವೆ! ಇನ್ನು ಭಕ್ತಿಯನ್ನು ಕುರಿತು ಸ್ವಲ್ಪ ವಿಚಾರ ಮಾಡೋಣ! ಕೋಟಿ ಸೂರ್ಯಪ್ರಕಾಶಮಾನವಾದ ದಿವ್ಯಾಭರಣಗಳನ್ನಲಂಕರಿಸಿಕೊಂಡಿದ್ದರೂ, ದಿವ್ಯಪೀತಾಂಬರಗಳನ್ನು ಧರಿಸಿಕೊಂಡಿದ್ದರೂ, ಧನಧಾನ್ಯ ಪಶುವಸ್ತ್ರ ಕ್ಷೇ

ತ್ರಾದಿ ಅನಂತ ಸಂಪತ್ತುಗಳಿಂದೊಡಗೂಡಿದ್ದರೂ ; ಚಂದ್ರನಿಲ್ಲದ ರಾತ್ರಿ ಯೆಂತು ಕಾಂತಿ ಹೀನವೋ ; ಅವರಂತೆಯೇ ! ಭವದ್ಭಕ್ತಿಯಿಲ್ಲದ ಮಾನು ಷಜನ್ಮವು ವ್ಯರ್ಥವಾದುದು.

'ಮೋಕ್ಷಕಾರಣ ಸಾಮಾಗ್ರ್ಯಾಂ ಭಕ್ತಿರೇವಗರೀಯಸಿ (ವಿವೇಕ ಚೂಡಾಮಣಿ)

ಮೋಕ್ಷವನ್ನು ಸಾಧಿಸಲು ಸಾಧನವಾದ ಸಾಮಗ್ರಿಯಲ್ಲಿ, ಭಕ್ತಿಯೇ ದೊಡ್ಡದೆಂದು ಶ್ರೀ ಆದಿಶಂಕರರು ಹೇಳಿರುವರು. ಶ್ರೀ ಭಾಗವತದಲ್ಲಿ ಪರಮಾತ್ಮನು ಭಕ್ತಿಗೆ ಅಧೀನನಾಗುವಂತೆ ವ್ರತ, ಕ್ರತು, ದಾನ, ಶೌಚ, ಶೀಲಾದಿಗಳಿಗೆ ಸಿಕ್ಕುವನಲ್ಲ, ಆದುದರಿಂದ ಭಕ್ತಿಯಿಲ್ಲದವನು ಎರಡು ಕಾಲ್ಗಳ ಪಶುವಲ್ಲದೆ ಬೇರೆಯಲ್ಲ" ಎಂದು ಪ್ರಹ್ಲಾದನು ಹೇಳಿರುತ್ತಾನೆ.

ಅಖಂಡ ಸಚ್ಚಿದ್ರೂಪನಾದ ನಿತ್ಯನಿರ್ಮಲ ಸರ್ವಪರಿಪೂರ್ಣನಾದ ಭಗ ವಂತನ ಅನಂತ ಕಲ್ಯಾಣ ಗುಣಗಳನ್ನು ಕೇಳಿ ಆನಂದಿಸದಿರುವ ಮಾನವ ಜನ್ಮವು ನಿರರ್ಥಕವು. ಪ್ರಪಂಚದಲ್ಲಿ ಜೀವರಾಶಿಗಳು ಹುಟ್ಟುತ್ತ ಸಾಯುತ್ತಲಿವೆ. ಮಾತೃಗರ್ಭದಿಂದ ಜನ್ಮಿಸಿದ ಬಳಿಕ ಸ್ವಲ್ಪಕಾಲ ಬಾ ಲ್ಯಾವಸ್ಥೆಯನ್ನು, ಸ್ವಲ್ಪಕಾಲ ಯೌವನಾವಸ್ಥೆಯನ್ನು, ಹೊಂದಿ. ಅತ್ಯ ದ್ಭುತಗಳಿಂದ ಸಾಹಸ ಕಾರ್ಯಗಳನ್ನೆಷ್ಟಾದರೂ ಮಾಡುತ್ತಿರುವುದಲ್ಲದೆ ಭಗವ ದ್ಭಕ್ತಿಯನ್ನಾಚರಿಸುವುದು ಅಪೂರ್ವವು. ಹೇಗೋ ಕಾಲವು ವ್ಯರ್ಥವಾಗಿ ಕಳೆದು ಹೋಗುತ್ತಿರುವಲ್ಲಿ ಭಯಂಕರವಾದ ಅವಸಾನಕಾಲವು ಸಮೀಪಿ ಸುವುದು. ಆಗ ಜೀವನು ದಿಕ್ಕುತೋರದೆ ಅಕಟಾ ! ಅನಿತ್ಯವಾದ ಐಹಿಕ ಸುಖಗಳು ಶಾಶ್ವತವೆಂದು ನಂಬಿ ಮೋಸ ಹೋದೆನಲ್ಲಾ ! ಅತ್ಯಂತ ವ್ಯಾ ಮೋಹದಿಂದ ನನ್ನನ್ನಾಲಂಗಿಸಿಕೊಳ್ಳುತ್ತಿದ್ದ ಪ್ರಿಯಸತಿಯು ಸಹಾ ಈಗ ನನ್ನನ್ನಗಲಿ ಹೋಗುತ್ತಿರುವಳಲ್ಲಾ ! ಕಾಲವೆಲ್ಲವೂ ವ್ಯರ್ಥವಾಯಿತಲ್ಲಾ ! ಎಂದು ದುಃಖಿಸುವುದರಿಂದ ಲಾಭವೇನು ? ಪ್ರಹ್ಲಾದನಂತೆ ಬಾಲ್ಯದಿಂದಲೂ ಭಗವದ್ಭಕ್ತಿಗೈಯುತ್ತಿರುವವರೇ ವಿವೇಕಿಗಳು. ಬಾಲ್ಯವನ್ನು ಕ್ರೀಡಾಸ ಕ್ತಿಯಿಂದಲೂ, ಯೌವನವನ್ನು ಸ್ವಚ್ಛಂದನ ವನಿತಾಸಕ್ತಿಯಿಂದಲೂ ಕಳೆ ದು, ಅನಂತರ ಭಗವದ್ಭಕ್ತಿ ಮಾಡಬೇಕೆಂದು ಕೆಲವರು ಅಭಿಪ್ರಾಯ ಪಡುವರು. ಇದು ಎಷ್ಟು ಮಾತ್ರವೂ ಯುಕ್ತವಲ್ಲ.

"ನಹಿಪ್ರಮಾಣಾಂ ಜಂತೂನಾಮುತ್ತರ ಕ್ಷಣಜೀವನೇ'

ಜಂತುಗಳು ಉತ್ತರಕ್ಷಣದವರೆಗೂ ಜೀವಿಸ ಬಲ್ಲವೆಂಬುವುದಕ್ಕೆ ಪ್ರಮಾಣವಾವುದೂ ಇಲ್ಲವು. ಭಗವಂತನಲ್ಲಿ ಭಕ್ತಿಯನ್ನಿಡದೆ ಕೇವಲ ಸಂಸಾರ ಬದ್ಧರಾಗಿರಬಾರದು.

“ ಪ್ರಾಪ್ತದುಃಖಂಗಳಿಗೆ ಭಯಪಡದೆ ಸಹಿಸಿ ।
ಕೊಸರಿ ಅಪ್ರಾಪ್ತಸುಖಗಳ ಕೋರದಂತೆ ॥
ವೀತರಾಗಭಯ ಕ್ರೋಧನಾಗಿ ಸುಖಿಪ ।
ಧನ್ಯನಾತ್ಮಸ್ಥಿತ ಪ್ರಜ್ಞನಹ ಕಪೀಂದ್ರ ॥
( ಸೀತಾರಾಮಾಂಜನೇಯ )

ಎಂಬ ವಚನದಂತೆ, ಬಂದ ದುಃಖಗಳಿಗೆ ಸಹಿಸಿ, ಬಾರದ ಸುಖಗಳಿಗಾಗಿ ಪರಿತಪಿಸದೆ, ಇರುವುದೇ ಪ್ರಜ್ಞಾನ ಲಕ್ಷಣ. ದುಃಖಕಾಲದಲ್ಲಿ ಹುಟ್ಟುವ ಕಂಬನಿಗಳೇ ಜ್ಞಾನಬೀಜಗಳಂ ಕುರಿಸುವುದಕ್ಕೆ ಬೇಕಾದ ಜಲಬಿಂದುಗಳು. ಕಾಲಕರ್ಮವಶದಿಂದ ಬಂದುವೇಳೆ ಸಂಭವಿಸುವ ದುಃಖಪರಂಪರೆಗಳಿಂದೊಡಗೂಡಿದ ವಿಪದ್ದಶೆಯು ಬೆಟ್ಟದಂತೆ ಭರಿಸಲಶಕ್ಯವಾಗಿ ಭೀತಿಗೊಳಿಸುವದಾದರೂ, ಜ್ಞಾನ ದೀಪವನ್ನು ಪಿಡಿದು ಭಯಾಂಧಕಾರಕ್ಕೆ ವಿರುಬಿದ್ದೊಡೆ ಅದು ನಿಶ್ಶಬ್ದವಾಗಿ ಮಾಯವಾಗಿ ಹೋಗುವುದು. ಜ್ಞಾನಿಗಳಿಂದ ಓಡಿಸಲ್ಪಟ್ಟ ಅಜ್ಞಾನಕ್ಕೇನು ಗತಿಯೆನ್ನುವಿರಾ ? ಬಾರಿಬಾರಿಗೂ ದುಃಖಿಸುತ್ತಿರುವ ಮೂಢಮಾನವರ ಹೃದಯಗಹ್ವರಗಳೇ ಅದಕ್ಕೆ ಆಶ್ರಯವು. ಅಷ್ಟೇ ಹೊರತು ಜ್ಞಾನಿಗಳ ಧೀರಮಾನಸಗಳಲ್ಲಿ ಸಣ್ಣ ಇರುವೆ ದೂರುವಷ್ಟು ಸಂದುಕೂಡ ಅಜ್ಞಾನಕ್ಕೆ ಸಿಕ್ಕುವುದಿಲ್ಲ. ಅದಕ್ಕೇ ಅಲ್ಲವೆ, ಪಾಪವೆಂದು ಹೆಸರು. ಉಂಡ ಮನೆಯ ಗಳಗಳನ್ನು ಲೆಕ್ಕಮಾಡುವವನಂತೆ ಅದು (ಪಾಪ) ಮನುಷ್ಯರನ್ನೇ ಆಶ್ರಯಿಸಿಕೊಂಡಿದ್ದು ಸಂಕಟವಾದ ಸಮಯಗಳಲ್ಲಿ ಕೊಂಚವಾದರೂ ಕನಿಕರವಿಲ್ಲದೆ ಆಶ್ರಿತರನ್ನು ತಾಪಗಿವ ಕುಂಟೆಯಲ್ಲಿಯೇ ಕೆಡಹುವುದಲ್ಲವೆ? ಸತ್ಯವನ್ನು ಅಸತ್ಯವೆಂದು, ಅಸತ್ಯವನ್ನು ಸತ್ಯವೆಂದು, ಧರ್ಮವನ್ನು ಅಧರ್ಮವೆಂದು; ಅಧರ್ಮವನ್ನು ಧರ್ಮವೆಂದು ಮೊಸಗೊಳಿಸುವ ಅಜ್ಞಾನವೆಂಬ ಪಿಶಾಚಕ್ಕೆ ಸಿಲುಕಿಯಲ್ಲವೇ ಅನೇಕರು ಅಧರ್ಮಪ್ರವರ್ತಕರಾಗಿರುವರು ; ಈ ಅಜ್ಞಾನದ ದೆಶೆಯಿಂದಲ್ಲವೇ ?

“ ಸತ್ಯಂ ಜನವಿರೋಧಾಯ ಅಸತ್ಯಂ ಜನರಂಜನಂ ”

ಎಂಬ ಶಾಸ್ತ್ರೋಕ್ತಿಯು ಹುಟ್ಟಿತು ! ಹಾ ! ಮಾನವರಿಗೆ ಅಜ್ಞಾನ

ಕ್ಕಿಂತಲೂ ಘೋರಶತ್ರುಗಳನ್ಯಾರಿರುವರು ? ಎಲೈ ಪರಮಪಾತಕನೇ ! ಕುಲನಾಶಕನೇ ! ಪಿತೃದ್ವೇಷಿಯೇ ! ನನ್ನ ಶತ್ರುವಾದ ಆ ಪರಮಪಾಪಿ ( ವಿಷ್ಣುಮೂರ್ತಿ ) ಯನ್ನು ಮಾತುಮಾತಿಗೂ ಸ್ಮರಿಸುವದೇತಕ್ಕೋ? ಮೂಢಮತಿಯೆ ! ನಿನಗೀ ದುರ್ಬೋಧೆಗೈದವರ್ಯಾರೊ ? ಅಂಥವರು !— ನನ್ನ ಶತ್ರುಗಳು ! ಈಗ ನನ್ನ ಕಣ್ಣಿಗೆ ಬೀಳುವದಾದರೆ ಆ ದುರಾತ್ಮರನ್ನು ಖಂಡತುಂಡವಾಗಿ ಕತ್ತರಿಸದೇ ಬಿಡುನೇನೇ ? ಪ್ರತ್ಯುತ್ತರವನ್ನು ಹೇಳದಿರುವದೇತಕ್ಕೋ ? ದುರ್ಮತಿಯೇ ! ಎಂದು ಭೀಕರಾಕಾರನಾಗಿ ಕೇಳಿದ ತಂದೆಗೆ ಪ್ರಹ್ಲಾದನು ಇಂತೆಂದನು.

" ವೈರಿಗಳು ಯಾರು ಚಿತ್ತವೇವೈರಿಯಹುದು ! ಚಿತ್ತವನು ನಿನ್ನ ವಶದಲ್ಲಿ ಸೇರಿಸಯ್ಯ ‖ ಮದಯುತಾಸುರಭಾವವ ಮರೆತು ಸುಖಿಸು ! ಅಯ್ಯ ನಿನ್ನೆಡೆ ನಿಜಪಾಡರಯ್ಯಾ ಜನರು ‖ ,,

ತಂದೆಯೇ ! ನಿನಗೆ ನಿನ್ನಚಿತ್ತವಲ್ಲದೆ ಬೇರೊಬ್ಬ ಶತ್ರುವಾರು ? ಸಮಸ್ತ ಲೋಕಗಳನ್ನೂ ಜಯಿಸಿದವನೇ ಹೊರತು ನಿನ್ನಲ್ಲಿಯೇ ಇರುವ ರಾಗದ್ವೇಷಾದಿ ಶತ್ರುಗಳನ್ನು ಜಯಿಸಲಿಲ್ಲವಲ್ಲಾ ! ಅಜ್ಞಾನಕ್ಕಿಂತ ಶತ್ರುವು ಬೇರೆ ಯಾವುದಿದೆ ? ಅಂತಹ ಘೋರಶತ್ರುವಾದ ಅಜ್ಞಾನವನ್ನು ಬಳಿಗೆ ಸೇರಿಸದೆ ಇರುವವರೇ ಜ್ಞಾನಿಗಳು. ಅಂತಹ ಜ್ಞಾನಿಗಳ ಸಹವಾಸದಿಂದಲೇ ಮಿಕ್ಕವರಿಗೆ ಭಗವದ್ಭಕ್ತಿಯೂ, ಅವರಿಂದ ಬ್ರಹ್ಮಾನಂದವೂ ಉಂಟಾಗುತ್ತದೆ.

" ಅಧೀತ್ಯಾಪಿ ಚತುರ್ವೇದಾನ್ ಸರ್ವಶಾಸ್ತ್ರಾಣಿಸರ್ವಶಃ । ಬ್ರಹ್ಮತತ್ವಂ ನಜಾನಾತಿ ದರ್ವೀಪಾಕರಸಂಯಥಾ ‖ ,,

ನಾಲ್ಕು ವೇದಗಳನ್ನು ಸಾಂಗವಾಗಿ ಅಧ್ಯಯನ ಮಾಡಿದವನಾದರೂ ಎಲ್ಲಾ ಶಾಸ್ತ್ರಗಳನ್ನೂ ಓದಿದವನಾದರೂ, ಪಾಕಸಾಧನವಾಗಿದ್ದರೂ ಅವರ ರುಚಿಯನ್ನರಿಯದ ಸೌಟಿನಂತೆ ಪರಬ್ರಹ್ಮತತ್ವವು ಮನಸ್ಸಿಗೆ ಬಾರದು. ಆದರೆ ಬ್ರಹ್ಮಾನಂದ ಸಾಧನವಾದ ಸುಜ್ಞಾನವು ಭಗವತ್ಕೃಪೆಯಿಂದೂ ಯೋಗಬಲದಿಂದಲ್ಲದೆ ಅನ್ಯಥಾ ಲಭಿಸುವುದಿಲ್ಲ.

" ಭಕ್ತ್ಯಾವಿನಾ ಬ್ರಹ್ಮಜ್ಞಾನಂಕದಾಪಿನಜಾಯತೇ । ತಸ್ಮಾತ್ತ್ವಮಪಿ ಸರ್ವೋಪಾಯಾನ್ ಪರಿತ್ಯಜ್ಯ ಭಕ್ತಿಮಾಶ್ರಯ ,, ‖ (ಮಹಾನಾರಾಯಣೋಪನಿಷತ್ತು)

ಭಕ್ತಿಯಿಂದಲೇ ಹೊರತು (ಅನ್ಯಥಾ) ಬ್ರಹ್ಮಜ್ಞಾನವುಂಟಾಗದು. ಆದುದರಿಂದ ಇತರೋಪಾಯಗಳನ್ನೆಲ್ಲಾ ಪರಿತ್ಯಜಿಸಿ ಪರಮೇಶ್ವರನನ್ನಾಶ್ರಯಿಸಿ ಭಕ್ತಿಮಾಡಬೇಕು. ಆ ಭಕ್ತಿ ಎಂಥಾದ್ದೆಂದರೆ ;

" ಸಾಪರಾನುರಕ್ತಿರೀಶ್ವರೇ ,,

ಭಗವಂತನಲ್ಲಿ ಅವಿಚ್ಛಿನ್ನವಾದ ಅನುರಾಗವುಂಟಾಗಿರುವುದೆ ಭಕ್ತಿಯೆಂದು ಶಾಂಡಿಲ್ಯರು, ಪೂಜೆ ಮುಂತಾದವುಗಳಲ್ಲಿರುವ ಶ್ರದ್ಧೆಯೆಂದು ವ್ಯಾಸರು, ದೈವವಿಚಾರದಲ್ಲಿನ ಶ್ರದ್ಧೆಯೆಂದು ಗಾರ್ಗ್ಯರು, ಸಮಸ್ತ ಕರ್ಮಗಳನ್ನೂ ಭಗವದರ್ಪಣಮಾಡಿ ಭಗವದ್ವಿಶ್ಲೇಷಕ್ಕೆ ಸಹಿಸದೆ ನಿರತಿಶಯಾನುರಾಗವುಂಟಾಗಿರುವುದೆಂದು ನಾರದರು ಹೇಳಿರುತ್ತಾರೆ.

" ಸ್ವಸ್ವರೂಪಾನುಸಂಧಾನಂ-ಭಕ್ತಿರಿತ್ಯಭಿಧೀಯತೇ ,,
(ವಿವೇಕಚೂಡಾಮಣಿ)

ಪ್ರತ್ಯಗಾತ್ಮಸ್ವರೂಪಿಯಾದ ಜೀವನಿಗೂ, ನಿತ್ಯಾನಂದಮಯನಾದ ಪರಮಾತ್ಮನಿಗೂ ಇರುವ ಸಂಬಂಧವನ್ನರಿತು ನಿರ್ಮಲನಾಗಿ ವರ್ತಿಸುವುದೇ ಭಕ್ತಿಯೆಂದು ಪರಮ ವಿಜ್ಞಾನಸಂಪನ್ನರಾದ ಆದಿಶಂಕರರು ಹೇಳಿರುತ್ತಾರೆ. ಸಕಲ ಚರಾಚರ ಪ್ರಪಂಚಕ್ಕೆ ಒಡೆಯನಾದ ಪರಮೇಶ್ವರನನ್ನೂ ಸೃಷ್ಟವರ್ಗದವರಾದ ಮನುಜರನ್ನೂ ಕುರಿತ ಅಭಿಪ್ರಾಯವನ್ನು ಚನ್ನಾಗಿ ತಿಳಿದು ಧರ್ಮಮಾರ್ಗದಲ್ಲಿ ಪ್ರವರ್ತಿಸುವದೇ ಭಕ್ತಿಯೆನಿಸುವುದು. ಜೀವೇಶ್ವರರಿಗಿರುವ ಅನಿವಾರ್ಯಸಂಬಂಧವನ್ನು ಹಿಡಿದು, ಈಶ್ವರನಲ್ಲಿಯೂ ಮಾನವಕೋಟಿಯಲ್ಲಿಯೂ ಪ್ರೀತಿಯಿಟ್ಟು ನಾವಾಚರಿಸುವ ಸಕಲೋಪಚಾರಗಳೂ ಸಮಸ್ತಕಾರ್ಯಗಳೂ ಭಗವದರ್ಪಿತವಾಗುವಂತೆ ಮಾಡಬೇಕು.

ಈಶ್ವರಾರಾಧನೆಯು ಬಾಹ್ಯವೆಂದು, ಅಂತರವೆಂದು, ಎರಡು ವಿಧಗಳು. ಭಗವದಂಶಾವತಾರಮೂರ್ತಿಗಳಾದ ರಾಮಕೃಷ್ಣಾದಿ ಮಹಾಪುರುಷರ ದಿವ್ಯ ಗುಣಕಥನಗಳನ್ನು ಕೇಳುವಿಕೆ, ಪಠಿಸುವಿಕೆ, ಸ್ಮರಿಸುವಿಕೆ, ತದೀಯೋಪದೇಶಾನುಸಾರವಾಗಿ ಧರ್ಮಸೇವೆಯಗೈಯುವಿಕೆ, ಪುಣ್ಯಪುರುಷರನ್ನು ಪುರಸ್ಕರಿಸುವಿಕೆ, ಅವರಲ್ಲಿ ವಿಶ್ವಾಸವಿಡುವಿಕೆ, ಅವರಿಗೆ ಸಹಾಯಮಾಡುವಿಕೆ, ಅವರಿಗೆ ಆತ್ಮೀಯ ಸಿಜ್ಞಯಾರ್ಥಗಳನ್ನು ತಿಳಿಸುವಿಕೆ, ಮುಂತಾದವುಗಳು ಬಾಹ್ಯಭಕ್ತಿಯೆನಿಸುವುದು. ಅಂತರಂಗಭಕ್ತಿಯಲ್ಲಿಂತಹ ಬಾಹ್ಯೋಪಕರಣಗಳಕ್ಕರೆ ಇಲ್ಲ.

ಸೀ ‖ ಕರಣಂಗಳಖಿಲೋಪಕರಣಂಗಳಾಗಿರೆ
ಪ್ರಾಣಂಗಳುಪಚಾರಭಟಗಳಾಗೆ ।
ಗಂಗಾದಿನಾಡಿಗಳ್ ತುಂಗತೀರ್ಥಗಳಾಗೆ
ಕಮಲಷಟ್ಕವಲಸತ್ಸುಮಗಳಾಗೆ ।
ಜಠರಾಗ್ನಿಹೋತ್ರಮುಜ್ಜ್ವಲದೀಪವಿಧಿಯಾಗೆ
ಪಟುಜೀವಕಳೆದೀಪಪಟಲವಾಗೆ ।
ನಾದಿತಾನಂದವು ನೈವೇದ್ಯವಾಗಿರಲ್
ರವಿಶಶಿಜ್ಯೋತಿಯಾರತಿಯುಮಾಗೆ ।

ಗಾ ‖ ಅಂಗದೇವಾಲಯದೊಳು ಸಹಸ್ರಕಮಲ ।
ಪೀಠದೊಳ್ ಶಾಂತಿಪತ್ನೀಸಮೇತನಾಗಿ ।
ಮೆರೆವ ಪರಮಾತ್ಮನಂ ಪೂಜಿಪೆರವೆ ಜಗದಿ ।
ಈಶ್ವರಪ್ರಣಿಧಾನವೆಂದೆಂಬರರಿಯೆ ‖

ತ್ವಕ್ಚಕ್ಷುಶ್ಶ್ರೋತ್ರಜಿಹ್ವಾಘ್ರಾಣವಾಕ್ಪಾಣಿ ಪಾದಪಾಯೂಪಸ್ಥ ಮನೋಬುದ್ಧಿಗಳೆಂಬ ಸರ್ವೇಂದ್ರಿಯಗಳೂ ಪೂಜಾಪಾತ್ರಗಳಾಗಿಯೂ, ಪ್ರಾಣಾಪಾನ ವ್ಯಾನೋದಾನ ಸಮಾನನಾಗ ಕೂರ್ಮಕೃಕರ ದೇವದತ್ತಧನಂಜಯಗಳೆಂಬ ದಶವಿಧಪ್ರಾಣಂಗಳುಪಚಾರಭಟರಾಗಿಯೂ, ಗಂಗಾ ಯಮುನಾ ಸರಸ್ವತ್ಯಾದಿ ನಾಮಗಳಿಂದೊಪ್ಪಿತವಾಗಿರುವ ಇಡಾಪಿಂಗಳಾ ಸುಷುಮ್ನಾದಿ ನಾಡಿಗಳು ಅಭಿಷೇಕ ಜಲವಾಗಿಯೂ, ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಆಜ್ಞೇಯಗಳೆಂಬ ಷಟ್ಕಮಲಗಳು ಪುಷ್ಪಗಳಾಗಿಯೂ, ಜಠರಾಗ್ನಿಧೂಪವಾಗಿಯೂ, ಚಿತ್ಕಳೆಗಳು ದೀಪಗಳಾಗಿಯೂ, ಬ್ರಹ್ಮಾನಂದವು ನೈವೇದ್ಯವಾಗಿಯೂ, ಸೂರ್ಯಚಂದ್ರಮಂಡಲ ಜ್ಯೋತಿಗಳಾರತಿಗಳಾಗಿಯೂ, ನಾಡಿ ಶರೀರವೆಂಬ ದೇವಾಲಯದಲ್ಲಿ ಸಹಸ್ರಾರಕಮಲವೆಂಬ ದಿವ್ಯಸಿಂಹಾಸನದ ಮೇಲೆ ಪರಮಶಾಂತಪರಿಪೂರ್ಣನಾಗಿ ಪ್ರಕಾಶಿಸುತ್ತಿರುವ ಪರಬ್ರಹ್ಮವಾದ ಆತ್ಮಾರಾಮನನ್ನು ಎಲ್ಲಾ ಕಾಲದಲ್ಲೂ ಪೂಜಿಸುತ್ತಿರುವುದೇ ಈಶ್ವರಪ್ರಣಿಧಾನವೆಂತಲೂ, ಭಕ್ತಿಯೆಂತಲೂ, ತತ್ವವೇತ್ತರು ಹೇಳುವರು. ಇಂತಹ ಆತ್ಮಾರಾಮಾರ್ಚನೆಗೆ ಪರಿಶುದ್ಧ ಪ್ರವರ್ತನೆಯೊಂದೇ ಮುಖ್ಯವಾದುದು. ಬೇರೆ ಯಾವ

ವಿಧವಾದ ಬಾಹ್ಯೋಪಕರಣಗಳೂ ಅಕ್ಕರೆಯಿಲ್ಲ. ಈರೂಪವಾದ ಪೂಜೆಯನ್ನಭ್ಯಸಿಸುವವರೇ ಧನ್ಯರು. ಈ ಪೂಜೆಗೆ ಅನ್ಯರ ಸಹಾಯವು ಬೇಕಾಗಿರುವುದಿಲ್ಲ. ಅನ್ಯರು ಮಾಡುವ ವಿಘ್ನಗಳು ಬಾಧಿಸಲಾರವು.

" ಓಂ ಅಸತೋಮಾಸದ್ಗಮಯ, ತಮಸೋಮಾಜ್ಯೋತಿರ್ಗಮಯ, ಮೃತ್ಯೋರ್ಮಾಮೃತಂ ಗಮಯ ,, (ಬೃಹದಾರಣ್ಯಕೋಪನಿಷತ್ತು)

ಓಂಕಾರಾಭಿದಾನನೇ ! ನಮ್ಮನ್ನು ಅಸನ್ಮಾರ್ಗದಿಂದ ಸನ್ಮಾರ್ಗಕ್ಕೂ ಮೃತ್ಯುಬಂಧದಿಂದ ಅಮೃತತ್ವಕ್ಕೂ ಭಯದಿಂದ ನಿರ್ಭಯಕ್ಕೂ ಸೇರಿಸಿ ರಕ್ಷಿಸು !!!



## ಜನಕರಾಯನ ಸುಜ್ಞಾನವೈಭವ.

ನಾಲ್ಕು ವೇದಗಳನ್ನೂ, ಆರು ಶಾಸ್ತ್ರಗಳನ್ನೂ, ಹದಿನೆಂಟು ಪುರಾಣಗಳನ್ನೂ, ಅನೇಕಾನೇಕ ಉಪಪುರಾಣಗಳನ್ನೂ, ಬ್ರಹ್ಮಸೂತ್ರಗಳನ್ನೂ ಭಾರತಾದಿ ಇತಿಹಾಸಗಳನ್ನೂ ಪ್ರಪಂಚಕ್ಕೆ ಅನುಗ್ರಹಿಸಿ, ಪ್ರಕಾಶಗೊಳಿಸಿದ ಭಗವಾನ್ ವೇದವ್ಯಾಸ ಮಹರ್ಷಿಗಳು, ತಮ್ಮ ಪುತ್ರನಾದ ಶ್ರೀ ಶುಕಮಹರ್ಷಿಯನ್ನು, ತತ್ವೋಪದೇಶಕ್ಕಾಗಿ ಜನಕಮಹಾರಾಯನ ಬಳಿಗೆ ಕಳುಹಿಸಿದರು. ತಾದೆಯ ಆಜ್ಞೆಯಂತೆ ಶುಕನು ಮಿಥಿಲಾ ನಗರಕ್ಕೈತಂದು ಮಹಾರಾಜನಾದ ಜನಕನಿಗೆ ತನ್ನ ಆಗಮನವನ್ನು ತಿಳಿಸಿದನು. ಶುಕನ ಮನೋಭಾವವನ್ನು ತಿಳಿಯಲೆಳಸಿ, ಜನಕರಾಯನು ಬಂದೆರಡು ಸಾರಿ ಆತನ ವಿಜ್ಞಾಪನೆಯನ್ನು ನಿರಾಕರಿಸಿದನು. ಆದಾಗ್ಯೂ ಶುಕನು ಜನಕನ ಪರೀಕ್ಷೆಗೆ ಹಿಂಜರಿಯಲಿಲ್ಲ. ತದನಂತರ ಜನಕರಾಯನು ಶುಕಮಹರ್ಷಿಯನ್ನು ಒಳಗೆ ಬರಮಾಡಿಕೊಂಡು ಉಚಿತಾಸನವನ್ನಿತ್ತು, ಅರ್ಘ್ಯಪಾದ್ಯಾದಿ ವಿಧಿಗಳಿಂದ ಸತ್ಕರಿಸಿದನು. ತರುವಾಯ ಜನಕನು ಶುಕನಂ ನೋಡಿ, ಎಲೈ ಮಹರ್ಷಿಯೆ ! ತಮ್ಮ ತಾದೆಯವರಿಗೆ ಕುಶ

ಲವೆ? ಎಲ್ಲರಿಗೂ ಆರೋಗ್ಯವೆ? ತಾವು ಬಂದ ಕಾರ್ಯವೇನು? ಎಂದು ಪ್ರಶ್ನೆ ಮಾಡಿದನು. ಜನಕನ ಪ್ರಶ್ನೆಗೆ ಶುಕನು ಯಾವ ಪ್ರತ್ಯುತ್ತರವನ್ನೂ ಕೊಡಲಿಲ್ಲ. ಜನಕರಾಯನ ಒಡ್ಡೋಲಗವನ್ನು ನೋಡುತ್ತಲೇ ಶುಕನ ಮನಸ್ಸಿಗೊಂದು ದೊಡ್ಡ ಸಂಶಯ ವುಂಟಾಯಿತು. ಏನೆಂದರೆ? ಜನಕ ರಾಯನು ದೊಡ್ಡ ಸಂಸಾರಿಯಾಗಿ ಕಾಣುತ್ತಾನೆ. ಮಂತ್ರಿಗಳು, ಸಾಮಂತರಾಜರು, ಮತ್ತೆ ಅನೇಕರು ಅನೇಕವಿಧವಾದ ಅಹವಾಲುಗಳನ್ನು ಹೇಳಿ ಕೊಳ್ಳುತ್ತಿದ್ದಾರೆ. ಅವರಿಗೆಲ್ಲಾ ಬಹುಸಮಂಜಸವಾದ ಪ್ರತ್ಯುತ್ತರಗಳನ್ನು ಕೊಡುತ್ತಿದಾನೆ. ರಾಜ್ಯ! ಕೋಶ! ಸತಿ! ಸುತರು! ಪರಿವಾರ! ಪರಿಜನ! ಪುರಜನ! ಮಂತ್ರಿಗಳು! ಸಾಮಂತರು! ಈ ಮುಂತಾದ ಅಪಾರವಾದ ಧನಸಂಪತ್ತಿನಲ್ಲಿ ಓಲಾಡುತ್ತಿರುವ ಬದ್ಧಸಂಸಾರಿಯಾದ ಈ ಜನಕರಾಯನೆಲ್ಲಿ! ನಾನೆಲ್ಲಿ! ಈತನು ಉಪದೇಶ ಮಾಡತಕ್ಕದ್ದೇನು? ನಾನು ತಿಳಿಯತಕ್ಕದ್ದೇನು? ತತ್ವವಿಚಾರದ ವಾಸನೆಯು ಕೂಡ ಇವನಿಗಿರುವಂತೆ ಕಾಣಿಸುವುದಿಲ್ಲ.

ಶ್ಲೋ॥ ಯೌವನಂಧನಸಂಪತ್ತಿಃ ಪ್ರಭುತ್ವಮವಿವೇಕತಾ।
ಏಕೈಕಮಪ್ಯನರ್ಥಾಯಕಿಮುಯತ್ರಚತುಷ್ಟಯಂ॥

ಎಂಬಂತೆ ಯೌವನ, ಧನಸಂಪತ್ತು, ಪ್ರಭುತ್ವ, ಅವಿವೇಕ, ಎಂಬೀ ನಾಲ್ಕರಲ್ಲಿ ಯಾವುದಾದರೊಂದಿದ್ದ ಮಾತ್ರಕ್ಕೆ ಎಷ್ಟೋ ಅನರ್ಥಗಳಿಗೆ ಕಾರಣವುಂಟಾಗುತ್ತದೆ, ಯೊಂಬಲ್ಲಿ ಈ ನಾಲ್ಕೂ ಬಂದೆಡೆಯಲ್ಲಿಯೇ ಸೇರುವುದಾದರೇ ಮತ್ತೆ ಹೇಳತಕ್ಕದ್ದೇನೆಂದು ಮಹಾತ್ಮರು ಬಕ್ಕಣಿಸಿರುವರು. ಅದರಂತೆ, ಈ ಜನಕರಾಯನಲ್ಲಿ ಅನರ್ಥಕಾರಣಗಳಾದ ನಾಲ್ಕು ವಿಷಯಗಳೂ ಸೇರಿರುತ್ತವೆ. ಹೀಗಿರುವಲ್ಲಿ, ಈತನೇನು? ನನಗುಪದೇಶಮಾಡುವುದೇನು? ಎಂಬ ಸಂಶಯಕ್ಕೆ ಸಿಲುಕಿ ಶುಕನು ತನಲ್ಲಿ ತಾನೇ ಅಗಾಧವಾಗಿ ಯೋಚಿಸುತ್ತಿದ್ದನು. ಆಗ ಸಭೆಯಲ್ಲಿ ಕುಳಿತಿದ್ದ ಬ್ರಹ್ಮಜ್ಞಾನಸಂಪನ್ನರಾದ ವಸಿಷ್ಠಮಹರ್ಷಿಗಳು ಶುಕನ ಅಭಿಪ್ರಾಯವನ್ನರಿತು, ಆತನಿಗೆ ಜನಕರಾಜನ ಮಹತ್ವವನ್ನು ತಿಳಿಸಲೆಳಸಿ ಥಟ್ಟನೆ ಮೇಲಕ್ಕೆದ್ದು ಹೊರಟು ಹೋದರು. ಶುಕನು ಯೋಚಿಸುತ್ತಲೇ ಕುಳಿತಿದ್ದನು. ಸ್ವಲ್ಪ ಹೊತ್ತಿನ ಮೇಲೆ ವಸಿಷ್ಠನು ಗಾಬರಿಯಿಂದ ಬಂದು, ಅಯ್ಯಾ, ಜನಕ

ಮಹಾರಾಜಾ ! ಏಳು ! ಏಳು ! ಬೇಗನೆ ಎದ್ದೇಳು ! ಮಿಥಿಲಾನಗರಕ್ಕೆ ಬೆಂಕಿಬಿದ್ದು ಸುಟ್ಟು ಹೋಗುತ್ತಿದೆ ! ನಿನ್ನ ರಾಜಧಾನಿಯು ಸುಡುತ್ತಿರುವಾಗ ನೀನು ಸುಮ್ಮನಿರಬಹುದೆ ? ಪಟ್ಟಣವು ಸುಟ್ಟುಹೋದರೆ ಐಶ್ವರ್ಯವೆಲ್ಲವೂ ನಾಶವಾಗುತ್ತದೆ. ನಿನ್ನ ಸೌಖ್ಯಕ್ಕೆ ಹಾನಿಬರುತ್ತದೆ ! ಎಂದು ತಿಳಿಸಿದರು. ಜನಕರಾಯನು ಎಂದಿನಂತೆ ಸಂತೋಷವಾಗಿಯೇ ಮಾತನಾಡುತ್ತಿದ್ದನು. ಈ ವಿಚಿತ್ರವನ್ನು ಕಂಡು ಶುಕನು ವಿಸ್ಮಯ ವಿಭ್ರಾಂತನಾದನು. ಆಗ ಜನಕನು ವಸಿಷ್ಠರನ್ನು ನೋಡಿ ಋಷಿವರೇಣ್ಯರೇ !

ಶ್ಲೋ ॥ ಮಿಥಿಲಾಯಾಂಪ್ರದೀಪ್ತಾಯಾಂ ।
ನಮೇಕಿಂಚಿತ್ ಪ್ರದಹ್ಯತಿ ॥

ಈ ಪ್ರಪಂಚದಲ್ಲಿ ನನ್ನದು, ನನಗಾಗಿ, ನನ್ನಿಂದ, ಎಂಬ ಅಹಂಕಾರ ಮಮಕಾರ ರೂಪವಾದ ಆಶಾಪಾಶಗಳಿರತಕ್ಕವರಿಗಲ್ಲವೇ ಆ ಚಿಂತೆ ! ಈ ಮಿಥಿಲಾನಗರವೆಲ್ಲವೂ ಸುಟ್ಟು ಹೋದರೂ ನನಗೆ ಲೇಶಮಾತ್ರವೂ ಚಿಂತೆಯಿಲ್ಲ. ಏಕೆಂದರೆ, ನನ್ನದೆಂಬ ಪದಾರ್ಥವು ಈ ಪ್ರಪಂಚದಲ್ಲಿ ಎಳ್ಳಷ್ಟಾದರೂ ಇಲ್ಲ. ಪ್ರಾಣಿಕೋಟಿಗಳು ಕರ್ಮಶರೀರವನ್ನು ಧರಿಸಿ ಹುಟ್ಟಿದಾಗ ಏನನ್ನೂ ತರಲಿಲ್ಲ ! ಈ ಶರೀರವನ್ನು ಬಿಡುವಾಗ ಏನನ್ನೂ ಕೊಂಡು ಹೋಗುವುದೂ ಇಲ್ಲ ! ಹೀಗಿರುವಲ್ಲಿ ನಾನು ಯಾರು ? ಮಿಥಿಲೆ ಯಾರದು ? ಈ ತಾಪತ್ರಯವು ನನಗೇತಕ್ಕೆ ? ಎಂದು ಹೇಳುತ ನಗುತ್ತಿದ್ದನು. ಅದನ್ನು ಕೇಳುತ್ತಲೇ ಶುಕನ ಸಂಶಯವೆಲ್ಲವೂ ನಿರ್ಮೂಲವಾಯಿತು. ಆಗ ಜನಕನು ಶುಕನಂ ನೋಡಿ, ಎಲೈ ಗುರುಪುತ್ರಾ ! ತಾವು ಬಂದ ಕಾರ್ಯವೇನು ? ಎಂದು ವಿನಯದಿಂದ ಕೇಳಿದನು. ಆಗ ಶುಕನು, ಎಲೈ ಮಹಾರಾಯನೆ ! ನಮ್ಮ ತಂದೆಯ ಆಜ್ಞೆಯಂತೆ ನಿನ್ನಲ್ಲಿ ತತ್ವೋಪದೇಶವನ್ನು ಹೊಂದಲು ಬಂದಿರುವೆನು. ದಯವಿಟ್ಟು ನನ್ನನ್ನು ಕಟಾಕ್ಷಿಸು ! ಎಂದು ಪ್ರಾರ್ಥಿಸಿದನು. ಜನಕರಾಯನದಕ್ಕೆ ಸಮ್ಮತಿಸಿ, ಶುಕನ ಮನೋನಿಶ್ಚಲತೆಯನ್ನು ಪ್ರಕಾಶಪಡಿಸಲೆಳಸಿ, ಒಂದು ತೈಲ ಕುಂಭವನ್ನು ( ಎಣ್ಣೆ ತುಂಬಿದ ಗಡಿಗೆಯನ್ನು ) ತರಿಸಿ ಶುಕನ ತಲೆಯಮೇಲಿಟ್ಟು, ಆತನ ಸುತ್ತಲೂ ಅನೇಕ ವಿಧವಾದ ನೃತ್ಯಗೀತಾದಿ

ವಾದ್ಯಗಳನ್ನು ಸಜ್ಜುಪಡಿಸಿ ಎಂತಹ ನಿಶ್ಚಲ ಮಾನಸರನ್ನಾದರೂ ಚಂಚಲಗೊಳಿಸುವಂತಹ ಭೇರೀಕಾಹಳಾದಿ ಶಬ್ದಗಳಿಂದ ದಶದಿಶೆಗಳಲ್ಲಿಯೂ ಬೊರ್ಗರೆಯುವಂತೆ ಮಹದಾಡಂಬರವಾದ ಉತ್ಸವವನ್ನು ಮಾಡಿಸಿ, ಶುಕನನ್ನು ಪಟ್ಟಣದ ಬೀದಿಗಳಲ್ಲೆಲ್ಲಾ ಪ್ರದಕ್ಷಿಣ ಮಾಡಿಸಿದನು. ಜನಕನ ಕಟ್ಟಳೆಯಂತೆ ಶುಕನು ತನ್ನ ತಲೆಯ ಮೇಲಿದ್ದ ತೈಲಕುಂಭದಿಂದ ಒಂದು ಹನಿಯಾದರೂ ಚೆದರಿ ಬೀಳದಿರುವಂತೆ ಅತಿಜಾಗ್ರತೆಯಾಗಿ ನಡೆಯುತ್ತ, ವಾದ್ಯವಿನೋದಗಳನ್ನು ಲೇಶಮಾತ್ರವೂ ಗಮನಿಸದೆ, ಏಕಚಿತ್ತ ಮನೋಭಾವದಿಂದ ತನ್ನ ಸ್ಮರಣೆಯನ್ನೆಲ್ಲಾ ತೈಲ ಕುಂಭದಲ್ಲಿಟ್ಟು ಬೀದಿಗಳನ್ನೆಲ್ಲಾ ಸುತ್ತಿ ಎಲ್ಲರೊಂದಿಗೆ ಒಡ್ಡೋಲಗಕ್ಕೆ ಬಂದನು. ಆಗ ಜನಕರಾಯನು ಶುಕನ ದೃಢಮನಸ್ಸನ್ನು ಮೆಚ್ಚಿ ಆತನಿಗೆ ತತ್ವೋಪದೇಶ ಮಾಡಿದನು. ಆ ವಿವರವು "ಶುಕಜನಕ ಸಂವಾದ" ವೆಂಬ ಹೆಸರಿನಿಂದ ಈ ಗ್ರಂಥದ ಮೂರನೇ ಕಳಾಭಾಗದಲ್ಲಿ ವಿವರಿಸಲ್ಪಟ್ಟಿರುತ್ತದೆ.



## ರಂಭಾ ಶುಕ ಸಂವಾದ.



ಇಂತು ಜನಕರಾಯನಿಂದ ಬ್ರಹ್ಮೋಪದೇಶವನ್ನು ಹೊಂದಿದ ಶುಕಮಹರ್ಷಿಯು, ಗಂಗಾತೀರದಲ್ಲಿ ಪದ್ಮಾಸನಾಸೀನನಾಗಿ ಪರಬ್ರಹ್ಮಧ್ಯಾನಯೋಗದಲ್ಲಿಸಿಷ್ಠನಾಗಿ ಬಾಲಸೂರ್ಯನಂತೆ ಹೊಳೆಯುತ್ತಿದ್ದನು. ಆತನ ತೇಜಸ್ಸನ್ನೂ,ಜಗನ್ಮೋಹನಸೌಂದರ್ಯವನ್ನೂ,ಬ್ರಹ್ಮವಿದ್ಯಾವೈಭವವನ್ನೂ ಕಂಡು,ಇಂದ್ರನು ಆಶ್ಚರ್ಯಚಕಿತನಾಗಿ,ಆತನ ಜಿತೇಂದ್ರಿಯತ್ವವನ್ನು ಪರೀಕ್ಷಿಸಬೇಕೆಂದೆಣಿಸಿ, ದೇವಕಾಮಿನಿಯರಲ್ಲೆಲ್ಲಾ ಅತ್ಯಂತಲಾವಣ್ಯವತಿಯಾದ "ರಂಭೆ" ಯನ್ನು ಕರೆಯಿಸಿ, ಆಕೆಗೆ ಅನೇಕ ವಿಧವಾದ ಯುಕ್ತಿಗಳನ್ನು ಬೋಧಿಸಿ, ಶುಕನ ಜಿತೇಂದ್ರಿಯತ್ವವನ್ನು ಪರೀಕ್ಷಿಸಿ ಬರುವಂತೆ ಕಟ್ಟಳೆಯಿತ್ತು ಕಳುಹಿಸಿದನು.



ಶುಕಾಚಾರ್ಯನು—ದೇವರಂಭೆ.

ಇಂದ್ರನಿಂದ ಕಳುಹಿಸಲ್ಪಟ್ಟ "ರಂಭೆಯು" ಅಲ್ಲಿಂದ ತೆರಳಿ ಗಂಗಾತೀರವಲ್ಲಿ ಧ್ಯಾನಸಿಷ್ಠನಾಗಿದ್ದ ಶುಕಾಚಾರ್ಯನ ಮುಂದೆ ಬಂದು ನಿಂದು, ರಮ್ಯವಾದ ವೀಣಾಗಾನವನ್ನು ಮಾಡಿದಳು. ಅದನ್ನು ಕೇಳಿ

ಶುಕನು ಕಣ್ದೆರೆದು ಸುತ್ತಲೂ ನೋಡತೊಡಗಿದನು. ತಕ್ಷಣವೇ ರಂಭೆಯು, ಹಾವಭಾವ ವಿಲಾಸ ವಿಭ್ರಮಗಳಿಂದೊಡಗೂಡಿದ ತನ್ನ ಲಾವಣ್ಯವನ್ನು ತೋರ್ಪಡಿಸುತ್ತ, ಜಗದ್ವಶೀಕರಣ ಮಂತ್ರಗಳೆಂಬ ತನ್ನ ಬೆಡಗು ನೋಟಗಳಿಂದ ನೋಡುತ, ಮಧುರ ಭಾಷಣಗಳಿಂದ ಶುಕಾಚಾರ್ಯನೊಂದಿಗೆ ಈ ತೆರನಾಗಿ ಸರಸವಾಡಲಾರಂಭಿಸಿದಳು.

ರಂಭೆ ॥ ಶ್ಲೋ ॥ " ಮಾರ್ಗೇ ಮಾರ್ಗೇ ನೂತನಂ ಚೂತಖಂಡಂ।
ಖಂಡೇ ಖಂಡೇ ಕೋಕಿಲಾನಾಂ ವಿರಾವಃ ।
ರಾವೇ ರಾವೇ ಮಾನಿನೀ ಮಾನಭಂಗಃ ।
ಭಂಗೇ ಭಂಗೇ ಮನ್ಮಥಃ ಪಂಚಬಾಣಃ „ ॥೧॥

" ಮುನಿಕುಲಾವತಂಸ ! ದಾರಿದಾರಿಯಲ್ಲಿ, ಎತ್ತ ನೋಡಿದರತ್ತ, ಚಿಗುರಿನಿಂದ ಸುಂದರವಾದ ಮಾವು ಕಂಗೊಳಿಸುತ್ತಿರುವುದು. ಆ ಹೊಸ ಮಾವಿನ ಮರಗಳಲ್ಲಿ ಕೋಗಿಲೆಯ ಪಂಚಮಸ್ವರವು ಕಿವಿಗಳಿಗೆ ಆನಂದವನ್ನು ಉಂಟುಮಾಡುತ್ತಿರುವುದು. ಆ ನಾದವಾದರೋ — ಮಾನವತಿಯರಾದ ಮಾನಿನಿಯರ ಮಾನವನ್ನು ಸೂರೆಮಾಡುತ್ತಿರುವುದು. ಇದೇ ಸಮಯವೆಂದು, ಮನ್ಮಥನು ತನ್ನ ಬಿಲ್ಲಿನ ಹೆದೆಯಲ್ಲಿ ಸುಮನೋಹರವಾದ ಪಂಚಬಾಣಗಳನ್ನು ಹೂಡುತ್ತಿರುವನು."

ಶುಕ ॥ ಶ್ಲೋ ॥ ಮಾರ್ಗೇ ಮಾರ್ಗೇ ಜಾಯತೇ ಸಾಧುಸಂಗಃ ।
ಸಂಗೇ ಸಂಗೇ ಶ್ರೂಯತೇ ಕೃಷ್ಣಕೀರ್ತಿಃ ।
ಕೀರ್ತೌ ಕೀರ್ತೌ ನಸ್ತದಾಕಾರವೃತ್ತಿಃ ।
ವೃತ್ತೌ ವೃತ್ತೌ ಸಚ್ಚಿದಾನಂದಭಾಸಃ „ ॥೨॥

ಹಾಗೆ, ರಂಭೆಯು ಕಾಮೋದ್ದೀಪಕಗಳಾದ ವಸ್ತುಗಳನ್ನೇ ಅಭಿವರ್ಣಿಸುತ್ತ, ತನ್ನ ಕಾಮಿನೀತ್ವವನ್ನು ಅತಿಶಯವಾಗಿ ತೋರ್ಪಡಿಸುತ್ತಿರಲು, ಶುಕಮುನಿಯು ಹೀಗೆಂದು ಹೇಳಿದನು:—

" ಎಲೌ ರಂಭೆ ! ಹಾಗಲ್ಲವು. ಕೇಳು ! ಹಾದಿಹಾದಿಯಲ್ಲಿಯೂ ಸತ್ಪುರುಷರ ಸಂಗವು ದೊರೆವುದು. ಆ ಸಹವಾಸದ ಸಂಬಂಧದಿಂದ, ಪರಾತ್ಪರನಾದ ಶ್ರೀ ಕೃಷ್ಣನ ಅನನ್ಯ ಸಾಮಾನ್ಯವಾದ ಕೀರ್ತಿಯು ಕೇಳ

ಬರುವುದು. ಆತನ ಕೀರ್ತಿಯನ್ನು ಕೇಳುವುದರಿಂದ ಮನಸ್ಸಿನಲ್ಲಿ ಹುಟ್ಟುವ ಭಕ್ತಿವಿಶೇಷದ ಮೂಲವಾಗಿ, ಆತನ ಆಕೃತಿಯು ನಮ್ಮ ಮನಸ್ಸಿನಲ್ಲಿ ಅವಿಚಲವಾಗಿ ನೆಲೆಗೊಳ್ಳುವುದು. ಆಗ ನಮ್ಮ ಹೃದಯವು ಸತ್ಯಜ್ಞಾನಾನಂದ ಸುಕೃತವಾಗಿ ಪರಿಣಮಿಸುವುದು."

ರಂಭೆ ‖ ಶ್ಲೋ ‖ "ಗೇಹೇ ಗೇಹೇ ಜಂಗಮಾ ಹೇಮವಲ್ಲೀ ।
ವಲ್ಯಾಂ ವಲ್ಯಾಂ ಪಾರ್ವಣ ಚಂದ್ರಬಿಂಬಂ ।
ಬಿಂಬೇ ಬಿಂಬೇ ದೃಶ್ಯತೇ ಮೀನಯುಗ್ಮಂ ।
ಯುಗ್ಮೇ ಯುಗ್ಮೇ ಪಂಚಬಾಣಪ್ರಚಾರಃ ,, ‖೩‖

ಕೇವಲ ಕಾಮೋದ್ದೀಪಕಗಳಾದ ವಸ್ತುಗಳ ಹೇಳಿಕೆಯಿಂದ ಈತನ ಮನಸ್ಸು ಚಲಿಸಲಾರದೆಂದು ತಿಳಿದು, ಉಪಮಾನವಸ್ತುಕಥನದಿಂದ ಸ್ತ್ರೀಯ ಅಂಗಗಳನ್ನು ವರ್ಣಿಸುತ್ತಾಳೆ:—

,, ಮುನಿವರ್ಯನೆ! ಪ್ರತಿಯೊಂದು ಮನೆಯಲ್ಲಿಯೂ ಅಲೆದಾಡುವ ಬಂಗಾರದ ಬಳ್ಳಿ (ಸ್ವರ್ಣವರ್ಣದಿಂದೊಪ್ಪಿ, ಬಳ್ಳಿಯಂತೆ ಬಳುಕುತ್ತಿರುವ ಶರೀರವು) ಪ್ರಕಾಶಿಸುತ್ತಿರುವುದು. ಪ್ರತಿಯೊಂದು ಬಳ್ಳಿಯ (ಅಂಗವಲ್ಲಿಯ) ತುದಿಯಲ್ಲಿ ಪೂರ್ಣಚಂದ್ರಬಿಂಬವು (ಕಾಂತಿವಿಶಿಷ್ಟವಾಗಿ ವರ್ತುಲವಾಗಿ ಹೊಳೆಯುತ್ತಿರುವ ಮುಖವು) ಕಂಗೊಳಿಸುತ್ತಿರುವುದು. ಪ್ರತಿಯೊಂದು ಚಂದ್ರಬಿಂಬದಲ್ಲಿಯೂ ಮೀನುಗಳೆರಡು (ಮೀನುಗಳಂತೆ ಸ್ವಭಾವಚಂಚಲವಾದ ಕಣ್ಣುಗಳೆರಡು) ಹೊಳೆಯುತ್ತಿರುವುವು. ಪ್ರತಿಯೊಂದು ಮೀನಯುಗ್ಮದಲ್ಲಿಯೂ ಮನ್ಮಥನು ಸುಳಿದಾಡುತ್ತಿರುವನು.

ಶುಕ ‖ ಶ್ಲೋ ‖ ಸ್ಥಾನೇ ಸ್ಥಾನೇ ದೃಶ್ಯತೇ ರತ್ನವೇದೀ ।
ವೇದ್ಯಾಂ ವೇದ್ಯಾಂ ಸಿದ್ಧಗಂಧರ್ವಗೋಷ್ಠೀ ।
ಗೋಷ್ಠ್ಯಾಂ ಗೋಷ್ಠ್ಯಾಂ ಕಿನ್ನರದ್ವಂದ್ವಗೀತಂ ।
ಗೀತೇ ಗೀತೇ ಗೀಯತೇ ರಾಮಚಂದ್ರಃ ,, ‖೪‖

ಪ್ರತ್ಯುತ್ತರವಾಗ, ಶುಕನು:—ಎಲೌ ರಂಭೆ! ಹಾಗಲ್ಲ. ಮನೆಮನೆಯಲ್ಲಿ ರತ್ನಗಳಿಂದ ಕೆತ್ತಲ್ಪಟ್ಟ ಜಗುಲಿಗಳು ಕಾಣಬರುತ್ತಲಿವೆ. ಪ್ರತಿಯೊಂದು ಜಗುಲಿಯ ಮೇಲೆ, ಸಿದ್ಧಗಂಧರ್ವರು ಸಭೆಗೂಡಿ ಮಾತ

ನಾಡುತ್ತಿದ್ದಾರೆ. ಪ್ರತಿಸಭೆಯಲ್ಲಿಯೂ ಕಿನ್ನರ ದಂಪತಿಗಳು ಗಾನಮಾಡುತ್ತಿರುವರು. ಪ್ರತಿಯೊಂದು ಗಾನದಲ್ಲಿಯೂ ಶ್ರೀ ರಾಮಚಂದ್ರನ ಸುಗುಣಗಳು ಹೊಗಳಲ್ಪಡುತ್ತಿರುವುವು.

ರಂಭೆ ॥ ಶ್ಲೋ ॥ "ಪೀನಸ್ತನೀ ಚಂದನಚರ್ಚಿತಾಂಗೀ ।
ವಿಲೋಲನೇತ್ರಾ ತರುಣೀ ಸುಶೀಲಾ ।
ನಾಲಿಂಗಿತಾ ಪ್ರೇಮಭರೇಣ ಯೇನ ।
ವೃಥಾಗತಂ ತಸ್ಯ ನರಸ್ಯ ಜೀವಿತಂ ,, ॥೫॥

ಅದನ್ನು ಕೇಳಿ, ರಂಭೆಯು ಉಪಮಾನ ವಸ್ತುಕಥನದಿಂದಲೂ ಈತನ ಮನಸ್ಸಾದುದು ಚಲಿಸಲಿಲ್ಲವೆಂದು ತಿಳಿದು, ಸುಂದರಸ್ತ್ರೀಯ - ಅಂಗಗಳನ್ನೂ ಅಲಂಕಾರಗಳನ್ನೂ ವರ್ಣಿಸುತ್ತಾಳೆ.

"ಮುನಿವರ್ಯ ! ಕೊಬ್ಬಿದ ಯುಗ್ಮದಿಂದ ವ್ಯಕ್ತಗೊಳಿಸಲ್ಪಡುತ್ತಲಿರುವ ಯೌವನವುಳ್ಳವಳಾಗಿ, ಸುಗಂಧಲೇಪನದಿಂದ ಬಂಧುರವಾದ ಸುಂದರ ಶರೀರದಿಂದ ಶೋಭಿಸುತ್ತ, ಚಂಚಲನೇತ್ರೆಯಾಗಿ, ಗುಣವತಿಯಾಗಿರುವ ತರುಣಿಯನ್ನು ಯಾವ ಪುರುಷನು ಪ್ರೇಮಭರದಿಂದ ಗಾಢವಾಗಿ ಆಲಿಂಗಿಸುವುದಿಲ್ಲವೋ,-ಅವನ ಜನ್ಮವು ಕೇವಲ ವ್ಯರ್ಥವಾದುದು.

ಶುಕ ॥ ಶ್ಲೋ ॥ "ಅಚಿಂತ್ಯರೂಪೋ ಭಗವಾನ್ನಿರಂಜನೋ ।
ವಿಶ್ವಂಭರೋ ಜ್ಞಾನಮಯಶ್ಚಿದಾತ್ಮಾ ।
ವಿಶೋಧಿತೋ ಯೇನ ಹೃದಿ ಕ್ಷಣಂ ನೋ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ ,, ॥ ೬ ॥

ಆಗ ಶುಕನು ರಂಭೆಯ ಇಂಗಿತವನ್ನು ಸ್ವಲ್ಪ ಮಾತ್ರ ಮನಸ್ಸಿನಲ್ಲಿ ಊಹಿಸಿದವನಾಗಿ, ಅವಳ ಕಾಮಾತುರತೆಗೆ ಕೇವಲ ವಿರುದ್ಧವಾದ ವಿಜ್ಞಾನವಾಕ್ಯಗಳನ್ನು ಆಕೆಗೆ ಬೋಧಿಸತೊಡಗಿದನು:—

ಎಲಾ ! ರಂಭೆ ! ಹಾಗಲ್ಲ ; ಕೇಳು ! ಮನಸ್ಸಿನಲ್ಲಿ ಹೀಗೆಯೆ ಎಂದು ಊಹಿಸಲಶಕ್ಯವಾದ ರೂಪವನ್ನುಳ್ಳ, ಷಡ್ಗುಣಸಂಪತ್ತಿಯಿಂದ ಪ್ರಕಾಶಿಸುವ, ಬೇರೊಂದು ಸಾಧನದ ಅಪೇಕ್ಷೆಯಿಲ್ಲದೆಯೇ ಸ್ವಪ್ರಕಾಶನಾಗಿರುವ, ಚೇತನಾಚೇತನಮಯವಾದ ಸಮಸ್ತ ಲೋಕಗಳನ್ನೂ

ಕಾಪಾಡುವುದರಲ್ಲಿಯೆ ಬದ್ಧಕಂಕಣನಾಗಿರುವ, ಜ್ಞಾನಮಯನಾಗಿಯೂ ಚೇತನಾಚೇತನಸ್ವರೂಪನಾಗಿಯೂ ಪ್ರಕಾಶಿಸುವ,—ಆ ಪರಬ್ರಹ್ಮನನ್ನು ಯಾವನು ತನ್ನ ಹೃದಯದಲ್ಲಿ ಒಂದು ಕ್ಷಣಕಾಲವಾದರೂ ಧ್ಯಾನಿಸುವು ದಿಲ್ಲವೋ,—ಅಂತಹನ ಜನ್ಮವು ವ್ಯರ್ಥವೆಂದು ತಿಳಿ ! ,,

ರಂಭೆ । ಶ್ಲೋ ॥ " ಕಾಮಾತುರಾ ಪೂರ್ಣಶಶಾಂಕವಕ್ತ್ರಾ ।
ಬಿಂಬಾಧರಾ ಕೋಮಲನಾಲಗೌರಾ ।
ನಾನ್ದೋಲಿತಾ ಸ್ವೇ ಹೃದಯೇ ಭುಜಾಭ್ಯಾಂ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ,, ॥೭॥

" ಪೂರ್ಣಚಂದ್ರನಂತೆ ಮನೋಹರವಾದ ಮುಖವೂ, ತೊಂಡೆ ಹಣ್ಣಿನಂದದಿಂದ ವಿರಾಜಿಸುವ ತುಟಿಗಳೂ, ಮೃದುವಾದ ತಾವರೆದಂಟಿನ ಕಾಂತಿಯಂತಹ ಕಾಂತಿಯುಳ್ಳ ಮೆಯ್ಯೂ, ಎಲ್ಲರ ಕಣ್ಮನಗಳನ್ನೂ ಸೂರೆಗೊಳ್ಳುತ್ತಿರಲು,—ಸಂಭೋಗಾಪೇಕ್ಷೆಯಿಂದ ಕೂಡಿರುವ ಕಾಮಿನಿ ಯನ್ನು ಯಾವನು ತನ್ನ ಎರಡು ಭುಜಗಳಿಂದ ಹೃದಯ ಮಧ್ಯದಲ್ಲಿ ಹಿಡಿ ದುಕೊಳ್ಳುವುದಿಲ್ಲವೋ,—ಅಂತಹನ ಜನ್ಮವು ವ್ಯರ್ಥವಾದುದು.

ಶುಕ ॥ ಶ್ಲೋ ॥ " ಚತುರ್ಭುಜಶ್ಚಕ್ರಧರೋ ಗದಾಯುಧಃ ।
ಪೀತಾಂಬರಃ ಕೌಸ್ತುಭವನಮಾಲಯಾ ಲಸನ್ ।
ಧ್ಯಾನೇ ಧೃತೋ ನ ಯೇನ ಬೋಧಕಾಲೇ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ ,, ॥ ೮ ॥

" ರಂಭೆ! ಕೇಳು. ಶಂಖಚಕ್ರಗದಾಶಾರ್ಙ್ಗಗಳಿಂದೆ ಒಪ್ಪುತ್ತಿ ರುವ ನಾಲ್ಕು ತೋಳುಗಳನ್ನುಳ್ಳ, ಪೀತಾಂಬರವನ್ನುಟ್ಟ, ಕೌಸ್ತುಭ- ವನಮಾಲಾಧರನಾದ, ಪರಾತ್ಪರನಾದ ನಾರಾಯಣನನ್ನು ಯಾವ ನರನಾದರೆ ಜಾಗ್ರದವಸ್ಥೆಯಲ್ಲಿ ಧ್ಯಾನಿಸುವುದಿಲ್ಲವೋ,—ಅಂಥವನ ಜನ್ಮವು ನಿರರ್ಥಕ ವಾದುದು. "

ರಂಭೆ ॥ ಶ್ಲೋ ॥ " ವಿಚಿತ್ರವೇಷಾ ನವಯೌವನಾಢ್ಯಾ ।
ಲವಂಗಕರ್ಪೂರರಸುವಾಸಿತೇಹಾ ।

ನಾಲಿಂಗಿತಾ ಯೇನ ದೃಢಂ ಭುಜಾಭ್ಯಾಂ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ ,, ॥ ೯ ॥

" ಮುನಿಕುಲೋತ್ತಮನೆ ! ಆದಿಸು. ಆಶ್ಚರ್ಯವನ್ನುಂಟುಮಾಡುವ ಚತುರ್ವಿಧಾಲಂಕಾರಗಳಿಂದ (ಗಂಧಪುಷ್ಪಾಂಬರಾಭರಣಗಳಿಂದ) ಕಂಗೊಳಸುವ, (ಲವಂಗ, ಪಚ್ಚಕರ್ಪೂರ ಮೊದಲಾದ) ಸುಗಂಧ ದ್ರವ್ಯಗಳಿಂದ ಸುವಾಸನೆಯುಳ್ಳ ಗಂಧವನ್ನು ತೊಡೆದುಕೊಂಡಿರುವ, ನವಯೌವನವತಿಯಾದ ಕಾಮಿನಿಯನ್ನು ಯಾವನು ತನ್ನ ಎರಡು ಭುಜಗಳಿಂದಲೂ ಗಟ್ಟಿಯಾಗಿ ತಬ್ಬಿಕೊಂಡು ಆನಂದಿಸುವುದಿಲ್ಲವೋ,—ಅವನ ಬಾಳು ಕೇವಲ ನಿರರ್ಥಕವಾದುದು.

ಶುಕ ॥ ಶ್ಲೋ ॥ " ನಾರಾಯಣಃ ಪಂಕಜಲೋಚನಃ ಪ್ರಭುಃ ।
ಕೇಯೂರವಾನ್ ಕುಂಡಲಮಂಡಿತಾನನಃ ।
ಭಕ್ತ್ಯಾ ಸ್ತುತೋ ಯೇನ ಸಮಾಧಿತೋ ನೋ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ ,, ॥ ೧೦ ॥

" ರಂಭೆ ! ಕೇಳು. ತತ್ವಾವಧಾರಣ ಸಮರ್ಥನಾಗಿಯೂ, ಕಮಲಾಕ್ಷನಾಗಿಯೂ, ಚರಾಚರವಸ್ತುಗಳ ನಿಯಾಮಕನಾಗಿಯೂ, ರತ್ನಖಚಿತಕುಂಡಲಗಳಿಂದ ಬಪ್ಪುವನಾಗಿಯೂ, ತೋಳ್ತೊಡುಗೆಗಳಿಂದ ಪರಿಶೋಭಿಸುವನಾಗಿಯೂ ಇರುವ, ಆ ಕ್ಷೀರಸಾಗರ ಶಾಯಿಯಾದ ಶ್ರೀಮನ್ನಾರಾಯಣನನ್ನು ಯಾವನು ಭಕ್ತಿಭಾವದಿಂದ ಏಕಾಗ್ರಚಿತ್ತನಾಗಿ ಧ್ಯಾನಿಸುವುದಿಲ್ಲವೋ,—ಅವನ ಬಾಳು ಕೇವಲ ನಿರರ್ಥಕವಾದುದು.

ರಂಭೆ ॥ ಶ್ಲೋ ॥ " ಪ್ರಿಯಂವದಾ ಚಂಪಕ ಹೇಮವರ್ಣಾ !
ಹಾರಾವಲೀ ಮಂಡಿತ ನಾಭಿದೇಶಾ ।
ಸಂಭೋಗಶೀಲಾ ರಮಿತಾ ನ ಯೇನ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ ,, ॥ ೧೧ ॥

" ಎಲೈ ಮುನಿಯೆ ! ಇಂಪಾಗಿ ಮಾತನಾಡುವವಳಾಗಿಯೂ, ಸಂಪಿಗೆಯ ಬಣ್ಣನಾತಿರುವ ತನುಕಾಂತಿಯನ್ನುಳ್ಳವಳಾಗಿಯೂ, ಹೊಕ್ಕುಳವರೆಗೆ ಜೋಲಾಡುತ್ತಿರುವ ಮುತ್ತಿನ ಸರಗಳನ್ನುಳ್ಳವಳಾಗಿಯೂ, ಸ್ವಭಾ



* ಶುದ್ಧಪತ್ರ:— ೬ ನೇ ಪಙ್ತ್ರಿ, ಆದಿಸು=ಆಲಿಸು,

ವತಃ ಸಂಭೋಗವೆನ್ನು ಪ್ರೀತಿಸುವಳಾಗಿಯೂ ಇರುವ ರಮಣಿಯನ್ನು ಯಾವನು ರಮಿಸದಿರುವನೋ,—ಅವನ ಜನ್ಮದಿಂದ ಈಷತ್ತಾದರೂ ಪ್ರಯೋಜನವಿಲ್ಲ.

ಶುಕ ॥ ಶ್ಲೋ ॥ " ಶ್ರೀವತ್ಸಲಕ್ಷ್ಮಾಂಕಿತಹೃತ್ಪ್ರದೇಶ— ।
ಸ್ತಾರ್ಕ್ಷ್ಯಧ್ವಜಃ ಶಾರ್ಙ್ಗಧರಃ ಪರಾತ್ಮಾ ।
ನ ಸೇವಿತೋ ಯೇನ ನೃಜನ್ಮನಾ ಽ ಪಿ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ ,, ॥೧೨॥

" ಎಲೌ ! ರಂಭೆ ! ' ಜೀವೇ ಜನ್ಮಶತಕೋಟಿಷು ಮಾನವತ್ವಂ ' ಎಂಬಂತೆ, ಉತ್ತಮವಾದ ಮನುಷ್ಯ ಜನ್ಮವನ್ನು ಪಡೆದೂ ಕೂಡ,— ಶ್ರೀವತ್ಸವೆಂಬ ಮಚ್ಚೆಯಿಂದೊಪ್ಪುತ್ತಿರುವ ವಕ್ಷಸ್ಥಲವನ್ನುಳ್ಳವನಾಗಿಯೂ, ವೇದಮಯನಾದ ಗರುಡನನ್ನು ವಾಹನವಾಗಿಯುಳ್ಳವನಾಗಿಯೂ, ಶಾರ್ಙ್ಗವೆಂಬ ಧನುಸ್ಸನ್ನು ಧರಿಸಿದವನಾಗಿಯೂ ಇರುವ ಪರಮಾತ್ಮನನ್ನು ಯಾವ ಪುರುಷನು ಸೇವಿಸದಿರುವನೋ,—ಅವನ ಜನ್ಮವು ವ್ಯರ್ಥವಾದುದು.

ರಂಭೆ ॥ ಶ್ಲೋ ॥ " ಚಲತ್ಕಟೀ ನೂಪುರಮಂಜುಘೋಷಾ ।
ನಾಸಾಗ್ರಮುಕ್ತಾ ನಯನಾಭಿರಾಮಾ ।
ನ ಸೇವಿತಾ ಯೇನ ಭುಜಂಗವೇಣೀ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ ,, ॥೧೩॥

" ಎಲೈ ! ಮುನೀಶ್ವರನೆ ! ಆಲಿಸು. ಬಡವಾದುದರಿಂದ ಬಳುಕುತ್ತಿರುವ ನಡುವನ್ನುಳ್ಳವಳಾಗಿಯೂ, ಇಂಪಾಗಿಧ್ವನಿಕೊಡುವ ಕಾಲ್ಗಡಗಗಳನ್ನಿಟ್ಟವಳಾಗಿಯೂ, ಮೂಗಿನಲ್ಲಿ ಮುತ್ತಿನ ಮೂಗುತಿಯನ್ನಿಟ್ಟವಳಾಗಿಯೂ, ಕಾಳಸರ್ಪದಂತೆ ನೀಳವಾದ ಜಡೆಯನ್ನುಳ್ಳವಳಾಗಿಯೂ, ನೋಡುವುದಕ್ಕೆ ಅತ್ಯಂತ ಅಂದವಾಗಿರುವ ಸುಂದರಿಯನ್ನು ಯಾವ ಪುರುಷನು ಧಾರಾಳವಾಗಿ ಸೇವಿಸದಿರುವನೋ,— ಅವನ ಜನ್ಮವು ವ್ಯರ್ಥವಲ್ಲವೆ ?

ಶುಕ ॥ ಶ್ಲೋ ॥ " ವಿಶ್ವಂಭರೋ ಜ್ಞಾನಮಯಃ ಪರೇಶೋ ।
ಜಗನ್ಮಯೋ ಽ ನಂತಗುಣಪ್ರಕಾಶೀ ॥

ನಾರಾಧಿತೋ ನಾ ಽ ಪಿ ಧೃತೋನ ಯೋಗೇ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ „

" ಎಲೆ ರಂಭೆ ! ಕೇಳು. ಚೇತನಾಚೇತನಾತ್ಮಕವಾದ ಪ್ರಪಂಚವನ್ನು ಪರಿಪಾಲಿಸುವ,—ಜ್ಞಾನಸ್ವರೂಪನಾಗಿಯೂ, ಜಗನ್ಮಯನಾಗಿಯೂ ಅನಂತಕಲ್ಯಾಣಗುಣ ಪರಿಪೂರ್ಣನಾಗಿಯೂ ಇರುವ,—ಪರಮಾತ್ಮನನ್ನು ಯಾವ ಪುರುಷನು ಆರಾಧಿಸುವುದಿಲ್ಲವೋ, ಅಥವಾ ನಿಶ್ಚಲಮನಸ್ಸಿನಿಂದ ಹೃದಯದಲ್ಲಿ ಧಾರಣಮಾಡುವುದಿಲ್ಲವೋ,— ಅವನ ಜನ್ಮದಿಂದೇನು? „

ರಂಭೆ ॥ ಶ್ಲೋ ॥ " ತಾಂಬೂಲರಾಗೈಃ ಕುಸುಮಪ್ರಕರ್ಷೈಃ ।
ಸುಗಂಧತೈಲೇನ ಚ ವಾಸಿತಾಯಾಃ ।
ನೋ- ಮರ್ದಿತೋ ಯೇನ ಕುಚೌ ನಿಶಾಯಾಂ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ „ ॥೧೫॥

" ಮುನಿಯೆ ! ಆಲಿಸು, ಏಲಕ್ಕಿ, ಪಚ್ಚಕರ್ಪೂರ ಮೊದಲಾದುವುಗಳಿಂದೆ ಬೆರಗೂಡಿದ ವರ್ಣವಿಶಿಷ್ಟವಾದ ತಾಂಬೂಲವನ್ನು ಮೆಲ್ಲುತ್ತೆ ಕುಂದಮಂದಾರಚಂಪಕಾದಿ ಅತ್ಯುತ್ತಮವಾದ ಸುಮಸಮುದಾಯವನ್ನು ಮುಡಿದು, ಸುಗಂಧಬಂಧುರವಾದ ತೈಲಗಳನ್ನು ತೊಡೆದುಕೊಂಡು, ಗಂಧವತಿಯೋ ಇವಳೆನಲು, ಮೆರೆಯುತ್ತಿರುವ ಸುಂದರಿಯ ಕುಚಯುಗ್ಮವನ್ನು ಆವ ಪುರುಷನು ನಿಶಾಸಮಯದಲ್ಲಿ ಮರ್ದಿಸುವುದಿಲ್ಲವೋ,— ಅವನ ಹುಟ್ಟಿನಿಂದ ಎಷ್ಟುಮಾತ್ರವಾದರೂ ಪ್ರಯೋಜನವಿಲ್ಲವಲ್ಲವೆ ? „

ಶುಕ ॥ ಶ್ಲೋ ॥ " ಬ್ರಹ್ಮಾ ಽ ದಿದೇವೋ ಽ ಖಿಲವಿಶ್ವದೇವೋ ।
ಮೋಕ್ಷಪ್ರದೋ ಽ ತೀತಗುಣಃ ಪ್ರಶಾಂತಃ ।
ಧೃತೋ ನ ಯೋಗೇನ ಹೃದಿ ಸ್ವಕೀಯೇ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ „

ರಂಭೆ ! ಆಲಿಸು. ಪುರಾಣಪುರುಷನಾಗಿಯೂ, ಸಮಸ್ತ ಲೋಕಗಳಗೂ ಒಡೆಯನಾಗಿಯೂ,- ಪುನರಾವೃತ್ತಿರಹಿತವಾದ ಪದವಿಯನ್ನು ಕೊಟ್ಟು, ಜನನ ಮರಣ ರೂಪವಾದ ಸಂಸಾರ ಬಾಧದಿಂದ, ಬಿಡಿಸುವನಾಗಿಯೂ,- ತ್ರಿಗುಣಾತೀತನಾಗಿಯೂ, ಶಾಂತನಾಗಿಯೂ ಇರುವ ಪರ

ಬ್ರಹ್ಮನು ಯಾವ ನರನ ಹೃದಯದಲ್ಲಿ ಯೋಗಮೂಲವಾಗಿ ಧ್ಯಾನಿಸಲ್ಪ ಡುವುದಿಲ್ಲವೋ,— ಆ ನರನ ಜನ್ಮದಿಂದ ಪ್ರಯೋಜನವಿಲ್ಲವಲ್ಲವೆ? ,,

ರಂಭೆ ॥ ಶ್ಲೋ ॥ " ಕಸ್ತೂರಿಕಾಕುಂಕುಮಚಂದನೈಶ್ಚ ।
ಸುಚರ್ಚಿತಾ ಯಾ ಗುರುಧೂಪಿತಾಂಬರಾ ।
ಉರಸ್ಸ್ಥಲೇ ನೋ ಲುಠಿತಾ ನಿಶಾಯಾಂ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ ,,

" ಮುನಿವರ್ಯನೆ ! ಕೇಳು. ಕಸ್ತೂರಿ ಕುಂಕುಮ ಕೇಸರಿ ಮೊದಲಾದ ಸುಗಂಧ ದ್ರವ್ಯಗಳಿಂದ ಕೂಡಿರುವ ಚಂದನವನ್ನು ಮೈಗೆ ಲೇಪಿಸಿಕೊಂಡು, ಅಗುರು ಚಕ್ಕೆಯ ಹೊಗೆಗೆ ಹಿಡಿದ ದಿವ್ಯವಾದ ಸೀರೆ ಯನ್ನುಟ್ಟ ಸುಂದರಿಯನ್ನು ಆವ ಪುರುಷನು ಪುರುಷಾಯಿತ ಬಂಧದಿಂದ ರಮಿಸದಿರುವನೋ,—ಅವನ ಜನ್ಮವು ನಿರರ್ಥಕವಾದುದು.

ಶುಕ ॥ ಶ್ಲೋ ॥ " ಆನಂದರೂಪೋ ನಿಜಬೋಧರೂಪೋ ।
ದಿವ್ಯಸ್ವರೂಪೋ ಬಹುನಾಮರೂಪಃ ।
ತಪಸ್ಸಮಾಧೌ ಕಲಿತೋ ನ ಯೇನ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ ,

" ಎಲೌ ! ರಂಭೆ ! ದುಃಖರಾಹಿತ್ಯಲಕ್ಷಣವೇ ರೂಪವಾಗಿ ಯುಳ್ಳ, ಸಾಧನಾಪೇಕ್ಷೆಯಿಲ್ಲದೆ ಎಲ್ಲವನ್ನೂ ತಿಳಿದುಕೊಳ್ಳತಕ್ಕ ಆಕಾರ ವನುಳ್ಳ,— ಅಪ್ರಾಕೃತ ವಿಗ್ರಹರ್ನಾಗಿ, ಅನೇಕರಿಂದ ಅನೇಕ ವಿಧವಾದ ಹೆಸರುಗಳನ್ನುಳ್ಳ ರೂಪಗಳಿಂದ ಪೂಜಿಸಲ್ಪಡುತ್ತಲಿರುವ,—ಆ ಪವರಮಾ ತ್ಮನನ್ನು ಯಾವನು ಧರ್ಮಯುಕ್ತವಾದ ಧ್ಯಾನದಲ್ಲಿರಸುವುದಿಲ್ಲವೋ,— ಅವನ ಜನ್ಮವು ಅಸಾರ್ಥಕವಾದುದು. ,,

ರಂಭೆ ॥ ಶ್ಲೋ ॥ " ಕಠೋರಪೀನಸ್ತನಭಾರನಮ್ರಾ ।
ಸುಮಧ್ಯಮಾ ಚಂಚಲಖಂಜನಾಕ್ಷೀ ।
ಹೇಮಂತಕಾಲೇ ರಮಿತಾ ನ ಯೇನ ।
ವೃಥಾ ಗತಾ ತಸ್ಯ ನರಸ್ಯ ಜೀವಿತಂ ,, ॥೧೯॥

* ಶುದ್ಧಪತ್ರ:— ೩ ನೇ ಪಙ್ತಿ ನೆ = ನೈಶ್ಚ ೧೮ ನೇ ರ್ನಾಗಿ=ನಾಗಿ, ೧೯ನೇ ಪವರ=ಪರ, ೨೦ನೇ ರಸು=ರಿಸು

,, ಮುನಿವರ್ಯನೆ ! ಆಲಿಸು. ಗಟ್ಟಿಯಾಗಿಯೂ ಹಿರಿದಾಗಿಯೂ ಇರುವ ಸ್ತನಯುಗ್ಮದ ಭಾರದಿಂದಲೆಂಬಂತೆ, ನಸುಬಾಗಿ ನಡೆಯುತ್ತ,— ಇದೆಯೋ ಇಲ್ಲವೋ ಎಂಬ ಸಂಶಯಕ್ಕೆ ಆಸ್ಪದವಾದ ತೆಳ್ನಡುವಿನಿಂದ ಕಂಗೊಳಿಸುತ್ತ, ಗಿಳಿಹಕ್ಕಿಗಳಂತೆ ಚಂಚಲವಾದ ಕಣ್ಣುಗಳಿಂದ ಪರಿಶೋಭಿಸುತ್ತಲಿರುವ ಯುವತಿಯನ್ನು ಆವ ಪುರುಷನು ಹೇಮಂತ ಋತುವಿನ ಚಳಿಗಾಲದಲ್ಲಿ ಕೂಡದಿರುವನೋ,— ಅವನ ಜೀವನವು ವ್ಯರ್ಥವಾದುದು. ,,

ಕುಶ ॥ ಶ್ಲೋ । " ತಪೋಮಯೋ ಜ್ಞಾನಮಯೋ ವಿಜನ್ಮಾ ।
ವಿದ್ಯಾಮಯೋ ಯೋಗಮಯಃ ಪರಾತ್ಮಾ ।
ಚಿತ್ತೇ ಧೃತೇ ನೋ ತಪಸಿ ಸ್ಥಿತೇನ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ ,, ॥೨೦॥

,, ಎಲೌ ! ರಂಭೆ ! ತಪಸ್ಸ್ವರೂಪನಾಗಿಯೂ, ಜ್ಞಾನಮಯನಾಗಿಯೂ, ಜನ್ಮಾದ್ಯುಪಾಧಿಗಳಿಲ್ಲದವನಾಗಿಯೂ, ಚತುಷ್ಷಷ್ಟಿ ವಿದ್ಯಾತ್ಮಕನಾಗಿಯೂ, ಯೋಗಮಯನಾಗಿಯೂ ಇರುವ ಪರಮಾತ್ಮನನ್ನು ಆವನು ತಪೋನಿಷ್ಠನಾಗಿ ತನ್ನ ಹೃದಯದಲ್ಲಿ ನೆಲೆಗೊಳಿಸುವುದಿಲ್ಲವೋ,-ಅವನ ಜೀವನವು ವ್ಯರ್ಥವಾದುದು. ,,

ರಂಭೆ ॥ ಶ್ಲೋ ॥ " ಸುಲಕ್ಷಣಾ ಮಾನವತೀ ಗುಣಾಢ್ಯಾ ।
ಪ್ರಸನ್ನವಕ್ತ್ರಾ ಮೃದುಭಾಷಿಣೀ ಯಾ ।
ನೋ ಚುಂಬಿತಾ ಯೇನ ಸುನಾಭಿದೇಶೇ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ ,, ॥೭೧॥

ಎಲೈ ; ತಪಸ್ವಿಯೆ ! ಆಲಿಸು. ಒಳ್ಳೆಯ ಗುಣಗಳೂ, ಲಕ್ಷಣಗಳೂ, ಮಾನವೂ, ನಗೆಗೂಡಿದ ಮೊಗವೂ, ಕಿವಿಗಿಂಪಾಗಿರುವ ಮೃದುನುಡಿಗಳೂ ಉಳ್ಳ ನಿತಂಬಿನಿಯು ನಾಭಿಪ್ರದೇಶವನ್ನು ಆವನು ಚುಂಬಿಸದಿರುವನೋ,—ಅವನ ಬಾಳಿನಿಂದ ಎಷ್ಟು ಮಾತ್ರವೂ ಪ್ರಯೋಜನವಿಲ್ಲ. ,,

ಶುಕ ॥ ಶ್ಲೋ ॥ ಪತ್ನ್ಯಾರ್ಜಿತಂ ಸರ್ವಸುಖಂ ವಿನಶ್ವರಂ।
ದುಃಖಪ್ರದಂ ಕಾಮಿನಿ ಭೋಗಸೇವಿತಂ।

ಏವಂ ವಿದಿತ್ವಾ ನ ಧೃತೋ ಹಿ ಯೋಗೋ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ ,, ॥೨೨॥

ಎಲೌ ! ಕಾಮಿನಿ ! ಬರಿದೆಯೇಕೆ ಹೊಗಳಿಕೊಳ್ಳುವೆ ? ಸ್ತ್ರೀದರ್ಶನಾದಿಗಳಿಂದ ಉತ್ಪನ್ನವಾಗುವ ಭೋಗಸಮುದಾಯವು ಮೊಟ್ಟಮೊದಲು ಸುಖರೂಪವಾಗಿ ತೋರಿಬಂದರೂ, ಕೊನೆಗೆ ಅತ್ಯಂತ ದುಃಖಕಾರಿಯಾಗಿರುವುದೆಂದು ದೂರಾಲೋಚನೆಯಿಂದ ತಿಳಿದು, ಯಾವ ಮನುಷ್ಯನು ಅವರಲ್ಲಿ ವಿಮುಖನಾಗಿ, ಪುನರ್ಜನ್ಮಕ್ಕೆಡೆಗೊಡದ ಉತ್ತಮ ಪದವಿಯನ್ನು ಹೊಂದಿಸುವ ಯೋಗವನ್ನು ಅಭ್ಯಾಸ ಮಾಡದಿರುವನೋ,— ಅವನ ಬಾಳಿನಿಂದ ಎಷ್ಟು ಮಾತ್ರವೂ ಪ್ರಯೋಜನವಿಲ್ಲ.

ರಂಭೆ ॥ ಶ್ಲೋ ॥ " ವಿಶಾಲವೇಣೀ ನಯನಾಭಿರಾಮಾ ।
ಕಂದರ್ಪಸಂಪೂರ್ಣನಿಧಾನರೂಪಾ ।
ಭುಕ್ತಾ ನ ಯೇನೈವ ವಸಂತಕಾಲೇ ॥
ವೃಥಾ ಗತಂ ತಸ್ಯ ನರಸ್ಯ ಜೀವಿತಂ ,, ॥೨೩॥

" ಎಲೈ ! ಮುನಿಯೆ ! ಮನ್ಮಥನ ನಿಧಿಯಂತಿರುವ ರೂಪವನ್ನುಳ್ಳವಳಾದುದರಿಂದ,— ಕಣ್ಣುಗಳಿಗೆ ಅತ್ಯಾನಂದವನ್ನು ಉಂಟುಮಾಡುತ್ತಿರುವ, ವಿಶಾಲವಾದ ಹೆರಳಿನಿಂದ ಕಂಗೊಳಿಸುವ ಅಂಗನಾಮಣಿಯನ್ನು ಆವ ನರಪುಂಗವನು ವಸಂತಸಮಯದಲ್ಲಿ ಸಂತಸದಿಂದ ಭೋಗಿಸದಿರುವನೋ,— ಅವನ ಜನ್ಮವು ಜನ್ಮವಲ್ಲ.

ಶುಕ ॥ ಶ್ಲೋ ॥ " ಮಾಯಾಕರಂಡೀ ನರಕಸ್ಯ ಹಂಡೀ ।
ತಪೋ ವಿಖಂಡೀ ಸುಕೃತಸ್ಯ ಭಂಡೀ ।
ನೃಣಾಂ ವಿಖಂಡೀ ಚಿರಸೇವಿತಾ ಚೇ— ।
ದ್ವೃಥಾ ಗತಂ ತಸ್ಯ ನರಸ್ಯ ಜೀವಿತಂ ,, ॥೨೪॥

ಎಲೌ ! ರಂಭೆ ! ಕೇಳು. ಪುರುಷರನ್ನು ವಂಚಿಸುವುದಕ್ಕೆ ಸಾಧನಭೂತಗಳಾದ ಮಾಯಾವಿದ್ಯೆಗಳಿಗೆ ಪಾತ್ರಳಾಗಿಯೂ,— ಸಮಸ್ತ ದುಃಖಗಳಿಗೂ ಹೇತುಭೂತಳಾದುದರಿಂದ, ನರಕಮಾರ್ಗವನ್ನು ತೋರಿ

ಸುವ ಕೆಳದಿಯೂಗಿಯೂ,— ದರ್ಶನಸ್ಪರ್ಶನಮಾತ್ರದಿಂದ ತನುಮನೋಧನಗಳನ್ನು ಸೂರೆಗೆಯ್ವಳಾದುವರಿಂದೆ, ತಪಃಫಲವಿಘ್ನಕಾರಿಣಿಯೆಂದು ಹೇಳಿಸಿಕೊಳ್ಳಲು ಅರ್ಹಳಾಗಿಯೂ,— ಸಮಸ್ತ ಪಾಪಕಾರ್ಯಗಳನ್ನೂ ಅಂಜದೆ ಎಸಗುತ್ತ, ಪುರುಷನನ್ನು ವಶಪಡಿಸಿಕೊಂಡು, ಅವನ ಜನ್ಮಾಂತರಾರ್ಜಿತವಾದ ಸುಕೃತಗಳನ್ನು ವಿನಾಶಪಡಿಸುವಳಾಗಿಯೂ,— ಮನುಷ್ಯರಿಗೆ ಮೃತ್ಯು ದೇವತೆಯಂತೆ ಕೇವಲ ಭೀತಿಪ್ರದೆಯಾಗಿಯೂ,— ಇರುವ ಕಾಮಿನಿಯನ್ನು ಆವನು ಆವಾಗಲೂ ನಚ್ಚಿ ಮೆಚ್ಚಿ ಇಚ್ಛಿಸುತ್ತಿರುವನೋ,— ಅವನ ಜನ್ಮವು ಜನ್ಮವಲ್ಲ.

ರಂಭೆ ॥ ಶ್ಲೋ ॥ " ಸಮಸ್ತಶೃಂಗಾರ ವಿನೋದ ಶೀಲಾ ।
ಲೀಲಾವತೀ ಕೋಕಿಲಕಂಠನಾಲಾ ।
ವಿಲಾಸಿತಾ ನೋ ನವಯೌವನೇನ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ। ॥೨೫॥

" ಎಲೈ ! ಮುನಿಕುಲಮಂಡನ ! ಶೃಂಗಾರ ಭಾವದಿಂದೆ ಉತ್ಪನ್ನಗಳಾದ ವಿನೋದಗಳನ್ನೇ ಸ್ವಭಾವವಾಗಿ ಉಳ್ಳವಳಾದುದರಿಂದಲೇ, ' ಲೀಲಾವತಿ ' ಯೆಂಬ ಹೆಸರಿಗೆ ಯೋಗ್ಯಳಾಗಿಯೂ, ಕೋಗಿಲೆಯಂತೆ ಇಂಪಾದ ಧ್ವನಿಯನ್ನುಳ್ಳ ಕಂಠನಾಲವುಳ್ಳವಳಾಗಿಯೂ, ಒಪ್ಪುತ್ತಿರುವ ವಿಲಾಸಿನಿಯನ್ನು ಯಾರು ತನ್ನ ಯೌವನದಿಂದ ವಿಲಾಸಗೊಳಿಸುವುದಿಲ್ಲವೋ ಅಾತಹನ ಜನ್ಮವು ಜನ್ಮವೆ? "

ಶುಕ ॥ ಶ್ಲೋ ॥ " ಸಮಾಧಿಕನ್ತ್ರೀ ಜನಮೋಹಯಿತ್ರೀ ।
ಧರ್ಮೇ ಕುಮನ್ತ್ರೀ ಕಪಟಸ್ಯ ತನ್ತ್ರೀ ।
ಸತ್ಕರ್ಮಹನ್ತ್ರೀ ಕಲಿತಾ ಚ ಯೇನ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ. " ॥೨೬॥

" ಎಲಾ ! ರಂಭೆ ! ತನ್ನ ಚೇಷ್ಟೆಗಳಿಂದೆ ಸಮಾಧಿಸ್ಥರಾದವರನ್ನೂ ಮೋಹಗೊಳಿಸುತ್ತ, ಧರ್ಮವಿಚಾರದಲ್ಲಿ ದುರಾಲೋಚನೆಯನ್ನು ಹುಟ್ಟಿಸಿ, ಅತಿ ದೀರ್ಘವಾದ ಮೋಸವನ್ನು ಹೃದಯದಲ್ಲಿ ನೆಲೆಗೊಳಿಸಿ, ತಪಃಫಲವನ್ನೂ ಪುಣ್ಯಕರ್ಮಗಳನ್ನೂ ವಿನಾಶಗೊಳಿಸುವ ಸ್ವಭಾವವ

ನ್ನುಳ್ಳ ಅಂಗನೆಯುಲ್ಲಿ ಯಾವನು ಅತಿಶಯುವಾಗಿ ಆಸಕ್ತನಾಗಿರುವನೋ,— ಅವನ ಜನ್ಮವು ಜನ್ಮವೆ ? ,,

ರಂಭೆ ॥ ಶ್ಲೋ. ॥ " ಬಿಲ್ವಸ್ತನೀ ಕೋಮಲಿತಾ ಸುಶೀಲಾ ॥
ಸುಗಂಧಕುಂತಾ ಲಲಿತಾ ಚ ಗೌರಾ ।
ನಾ-ಶ್ಲೇಷಿತಾ ಯೇನ ಚ ಕಂಠದೇಶೇ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ. ,, ॥೨೩॥

" ಮುನಿಕುಲೋತ್ತಂಸ ! ಆಲಿಸು. ಬೆಲ್ಲವತ್ತದ ಕಾಯಂತಿರುವ ಗಟ್ಟಿಯಾದ ಕುಚಗಳನ್ನುಳ್ಳ, ಹೊಂಬಣ್ಣದಿಂದ ರಂಜಿಸುವ ಕೋಮಲ ಶರೀರವನ್ನುಳ್ಳ, ಸ್ವಾಭಾವಿಕವಾದ ಒಳ್ಳೆಯ ನಡತೆಯುನ್ನುಳ್ಳ, ಪರಿಮಳ ತೈಲಗಳಿಂದ ಗಮಗಮಿಸುತ್ತಿರುವ ತಲೆಗೂದಲನ್ನುಳ್ಳ, ಮನೋಹರೆಯಾದ ಸುಂದರಿಯುನ್ನು ಆವ ಪುರುಷನು ಕಂಠಪ್ರದೇಶದಲ್ಲಿ ಆಲಿಂಗನ ಮಾಡಿಕೊಳ್ಳುವುದಿಲ್ಲವೋ,— ಅವನ ಜನ್ಮವು ವ್ಯರ್ಥವಾದುದು.

ಶುಕ ॥ ಶ್ಲೋ ॥ " ಚಿಂತಾವ್ಯಥಾ ದುಃಖಮಯೀ ಸದೋಷಾ ।
ಸಂಸಾರಪಾಶಾ ಜನಮೋಹಕರ್ತ್ರೀ ।
ಸಂತಾಪಕೋಶಾ ಭಜಿತಾ ಚ ಯೇನ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ ,, ॥೨೪॥

" ರಂಭೆ ! ಕೇಳು. ಬಗೆಬಗೆಯಾದ ಚಿಂತೆಗಳಿಗೂ ದುಃಖಗಳಿಗೂ ಆಕರಳಾಗಿ, ಪಾಪಗಳಿಂದ ಕೂಡಿ, ಸಂತಾಪಕ್ಕೆ ಸಿಧಿಯಾಗಿ, ಜನನರೂಪವಾದ ಸಂಸಾರಕ್ಕೇ ಪುನಃ ಪುನಃ ಸೆಳೆದೊಯ್ಯುವ ಪಾಶದಾತೊಪ್ಪಿ ಶೃಂಗಾರ ವಿಲಾಸಗಳಿಂದ ಎಲ್ಲರನ್ನೂ ಮೋಹಗೊಳಿಸಿ ಮೂಢರನ್ನಾಗಿ ಮಾಡಿಬಿಡುವ ಸ್ತ್ರೀಯುನ್ನು ಆವನು ಸೇವಿಸುವನೋ,— ಅವನ ಜನ್ಮವು ವ್ಯರ್ಥವಾದುದು.

ರಂಭೆ ॥ ಶ್ಲೋ ॥ ಆನಂದ- ಕಂದರ್ಪನಿಧಾನರೂಪಾ ।
ಝಣತ್ಕ್ವಣತ್ಕಂಕಣನೂಪುರಾಢ್ಯಾ ।
ನಾ-ಸ್ವಾದಿತಾ ಯೇನ ಸುಧಾಧರಸ್ಥಾ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ ,, ॥೨೫॥

“ ಶುಕಮುನಿಯೆ ! ಆಲಿಸು. ಮನ್ಮಥನ ನಿಧಿಯಾಗಿ, ಝಣತ್ಕಾರದಿಂದೊಪ್ಪುವ ಕೈಗಡಗಗಳನ್ನೂ ಕ್ವಣತ್ಕಾರವನ್ನು ಕೊಡುವ ಕಾಲಂದುಗೆಗಳನ್ನೂ ಧರಿಸಿ, ಅಂದವಾಗಿರುವ ಸುಂದರಿಯ ಚೆಂದುಟಿಯಲ್ಲಿಯ ಅಮೃತವನ್ನು ಆವನು ಅಸ್ವಾದಿಸುವುದಿಲ್ಲವೋ ಅವನ ಬಾಳು ಬಾಳೆ? ”

ಶುಕ ॥ ಶ್ಲೋ ॥ “ ಕಾಪಟ್ಯವೇಷಾ ಜನವಂಚಕಾ ಸಾ ।
ವಿಣ್ಮೂತ್ರದುರ್ಗಂಧಧರೀ ದುರಾಶಾ ।
ಸಂಸೇವಿತಾ ಯೇನ ಸದಾ ಮಲಾಢ್ಯಾ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ ” ॥೨೦॥

“ ರಂಭೆ ! ಕೇಳು. ದಾಂಭಿಕವಾದ ಅಲಂಕಾರಗಳನ್ನು ಧರಿಸಿ, ದುರಾಶೆಯಿಂದ ಜನಗಳನ್ನು ಮೋಸಗೊಳಿಸಿ, ಅತಿ ಪಾಪವನ್ನು ಆಚರಿಸುತ್ತ, ಮಲಮೂತ್ರಾದಿ ದುರ್ಗಂಧಗಳಿಂದ ಕೂಡಿದ ಗುಹ್ಯಾಪ್ರಾಯಗಳಾದ ಮರ್ಮಸ್ಥಳಗಳಿಂದ ಸತ್ಪುರುಷರ ಮನಸ್ಸಿಗೆ ಅಸಮಾಧಾನವನುಂಟುಮಾಡುವ ಹೆಣ್ಣನ್ನು, ಆವ ಪುರುಷನು ಸಂಸೇವಿಸುವನೋ,— ಅವನ ಬಾಳು ಬಾಳೆ? ”

ರಂಭೆ ॥ ಶ್ಲೋ ॥ “ ಚಂದ್ರಾನನಾ ಸುಂದರಗೌರವರ್ಣಾ ।
ವ್ಯಕ್ತಸ್ತನೀ ಭೋಗವಿಲಾಸದಕ್ಷಾ ।
ನಾರೀ-ದೋಲಿತಾ ವೈ ಶಯನೇಷು ಯೇನ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ ” ॥೨೧॥

“ ಎಲೈ ! ಮುನಿಯೆ ! ಆಲಿಸು. ಚಂದ್ರನಂತೆ ಕಾಂತಿವಿಶಿಷ್ಟವಾದ ಮುಖವನ್ನುಳ್ಳವಳಾಗಿಯೂ, ಮನೋಹರವಾದ ಹೊಂಬಣ್ಣದಿಂದ ನೋಟಕರ ಮನಸ್ಸನ್ನು ಸೂರೆಗೊಳ್ಳುವ ಮೈಸಿರಿಯನ್ನುಳ್ಳವಳಾಗಿಯೂ ಆವಿರ್ಭವಿಸುತ್ತಿರುವ ಯೌವನವನ್ನುಳ್ಳವಳಾದುದರಿಂದ ಕಣ್ಗೆಡ್ಡವಾಗುತ್ತಿರುವ ಕುಚಗಳನ್ನುಳ್ಳವಳಾಗಿಯೂ, ಸುಖಸಂದಾಯಕವಾದ ಶೃಂಗಾರ ಚೇಷ್ಟೆಗಳನ್ನು ಪ್ರದರ್ಶಿಸುವುದರಲ್ಲಿ ನಿಪುಣೆಯಾಗಿಯೂ, ಇರುವ ನಾರೀಮಣಿಯನ್ನು ಆವಪುರುಷನು ವಿಚಿತ್ರವಾಗಿ ಕಂಗೊಳಿಸುವ ಹಾಸತೂಲಿಕಾ ತಲ್ಪದಲ್ಲಿ ರಮಿಸಿ, ಆನಂದಿಸುವುದಿಲ್ಲವೋ,—ಅವನ ಜನ್ಮವು ಜನ್ಮವಲ್ಲ. ”

ಶುಕ ॥ ಶ್ಲೋ ॥ " ಉನ್ಮತ್ತವೇಷಾ ಮದಿರಾಸು ಮತ್ತಾ ।
ಪಾಪಪ್ರದಾ ಲೋಕವಿಡಂಬನೀಯಾ ।
ಯೋಗಚ್ಛಲಾ ಯೇನ ವಿಭಾಜಿತಾ ಚ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ ,, ॥೩೦॥

" ಹುಚ್ಚರಂತೆ ಬಗೆಬಗೆಯಾಗಿ ವಿಕಾರವಾಗಿ ಅಲಂಕರಿಸಿಕೊಂಡು ಸ್ಪರ್ಶಾದಿ ಸಂಬಂಧಗಳನ್ನು ಪಡೆದ ಮಾತ್ರಕ್ಕೇ ಅನೇಕ ವಿಧವಾಗಿ ಕಪಟವನ್ನು ತೋರಿ, ಮದ್ಯದಂತೆ ಮದವನ್ನುಂಟುಮಾಡಿ, ಪಾಪಕ್ಕೆ ಗುರಿಮಾಡುವ ಗರ್ಹಣೀಯಳಾದ ಗಣಿಕೆಯನ್ನು ಯಾವನು ನಚ್ಚಿ ಮರುಳಾಗುವನೋ,— ಅವನ ಜನ್ಮವು ಜನ್ಮವಲ್ಲ.

ರಂಭೆ ॥ ಶ್ಲೋ ॥ " ಆನಂದರೂಪಾ ತರುಣೀ ನತಾಂಗೀ ।
ಸದ್ಧರ್ಮ ಸಂಸಾಧನ ಸೃಷ್ಟಿರೂಪಾ ।
ಕಾಮಾರ್ಥದಾ ಯಸ್ಯ ಗೃಹೇ ನ ನಾರೀ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ ,, ॥೩೩॥

" ಮುನಿಯೆ! ಹಾಗೆನ್ನಬೇಡ. ಸುಖವನ್ನುಂಟುಮಾಡುವ ರೂಪೂ, ಯೌವನವೂ, ಬಳುಕುತ್ತಿರುವ ಶರೀರವೂ ಉಂಟಾಗಿದ್ದುಕೊಂಡು, ಧರ್ಮಾರ್ಥಕಾಮಗಳೆಂಬ ತ್ರಿವರ್ಗ ಸಂಪಾದನೆಗೆ ಹೇತುಭೂತಳಾಗಿರುವ ನಾರೀಮಣಿಯು ಆವನ ಮನೆಯಲ್ಲಿಲ್ಲವೋ,— ಅವನ ಜನ್ಮದಿಂದ ಫಲವೇನು?,,

ಶುಕ ॥ ಶ್ಲೋ ॥ " ಅಶೌಚದೇಹಾ ಪತಿತಸ್ವಭಾವಾ ।
ವಪುಃಪ್ರಗಲ್ಭಾ ಬಲಲೋಭಶೀಲಾ ।
ಮೃಷಾ ವದಂತೀ ಕಲಿತಾ ಚ ಯೇನ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ ,, ॥೩೪॥

" ರಂಭೆ ! ಕೇಳು. ಮಲಿನವಾದ ದೇಹವೂ, ದೇಹಕ್ಕೆ ತಕ್ಕ ಪ್ರೌಢತೆಯೂ, ಪಾಪಯುಕ್ತವಾದ ಹೃದಯವೂ, ಅತ್ಯಧಿಕವಾದ ಲೋಭವೂ, ಅಸತ್ಯಭಾಷಣವೂ ಸ್ತ್ರೀಗೆ ಸ್ವಭಾವವಾದುವು. ಇಂತಹ ಸ್ತ್ರೀಯ ಸಂಬಂಧವು ಯಾವ ಪುರುಷನಿಗೆ ಉಂಟಾಗುವುದೋ,— ಅವನ ಜನ್ಮದಿಂದ ಫಲವೇನು ? ,,

ರಂಭೆ ‖ ಶ್ಲೋ ‖ " ಶ್ಯಾಮೋದರೀ ಹಂಸಗತಿಃ ಪ್ರಮತ್ತಾ ।
ಸೌಂದರ್ಯಸೌಭಾಗ್ಯವತೀ ಪ್ರಲೋಲಾ ।
ನಿಷೇವಿತಾ ಯೈರ್ನ ರತಾ ಯಥೇಚ್ಛಂ ।
ವೃಥಾ ಗತಂ ತಸ್ಯ ನರಸ್ಯ ಜೀವಿತಂ „ ‖೩೫‖

" ಮುನಿಪುಂಗವನೆ ! ಆಲಿಸು. ತೆಳುವಾದ ಉದರವೂ, ಹಂಸ ಪಕ್ಷಿಯ ನಡೆಯೂ, ಮದವೇರಿದ ಸ್ವಭಾವವೂ, ಸೌಂದರ್ಯಯುಕ್ತ ವಾದ ಮೈಸ್ಸಿರಿಯೂ, ಉತ್ತಮವಾದ ಅಪೇಕ್ಷೆಯೂ ಉಂಟಾಗಿರುವ ತರುಣಿಯನ್ನು ಯಾವ ಪುರುಷನು ಗಾಢಾಲಿಂಗನಾದಿಗಳಿಂದ ಭೋಗಿಸಿ ಸುಖಿಸದಿರುವನೋ,—ಅವನ ಬಾಳು ನಿರರ್ಥಕವಾದುದು. „

ಶುಕ ‖ ಶ್ಲೋ ‖ " ಸಂಸಾರ ಸದ್ಭಾವನ ಭಕ್ತಿಹೀನಾ ।
ಚಿತ್ತಸ್ಯ ಚೋರಾ ಹೃದಿ ನಿರ್ದಯಾ ಚ ।
ವಿಹಾಯ ಯೋಗಂ ಕಲಿತಾ ನ ಯೇನ.
ವೃಥಾ ಗತಂ ತಸ್ಯ ನರಸ್ಯ ಜೀವಿತಂ „ ‖೩೬‖

" ರಂಭೆ ! ಆಲಿಸು. ಜನನ ಮರಣ ರೂಪವಾಗಿರುವ ಅಪಾರ ವಾದ ಈ ಸಂಸಾರ ಸಮುದ್ರವನ್ನು ಉಲ್ಲಂಘಿಸಲು ಅತ್ಯಾವಶ್ಯಕವಾದ ಸದ್ಭಾವನೆಯನ್ನೂ ಸದ್ಭಕ್ತಿಯನ್ನೂ ಇಲ್ಲದವಳಾಗಿ, ದರ್ಶನಸ್ಪರ್ಶನಗ ಳಿಂದ ತನಗೆ ವಶವರ್ತಿಗಳಾದವರ ಮನಸ್ಸನ್ನು ಕ್ಷಣಮಾತ್ರದಲ್ಲಿ ಅಪಹರಿಸಿ ಬಿಡುವ ದಯಾಹೀನಳಾದ ತರುಣಿಯನ್ನು ತೊರೆದು, ಯಾವನು ಶ್ರೇಷ್ಠ ದವಾದ ಯೋಗಾಭ್ಯಾಸದಲ್ಲಿ ನಿರತನಾಗುವುದಿಲ್ಲವೋ,--ಅವನ ಬಾಳು ನಿರ ರ್ಥಕವಾದುದು. „

ರಂಭೆ ‖ ಶ್ಲೋ ‖ " ಸುಗಂಧೈಸ್ಸಪುಷ್ಪೈಸ್ಸಶಯ್ಯಾ ಸುಕಾಂತಾ ।
ವಸಂತೋ ಋತುಃ ಪೂರ್ಣಿಮಾಪೂರ್ಣಚಂದ್ರಃ ।
ಯದಾ ನಾಸ್ತಿ ಪುಂಸ್ತ್ವಂ ನರಸ್ಯ ಪ್ರಭೂತಂ ‖
ತತಃ ಕಿಂ? ತತಃ ಕಿಂ ? ತತಃ ಕಿಂ ? ತತಃ ಕಿಂ ? „ ‖೩೭‖

ಈ ಪರಿಯಾಗಿ ಅನೇಕ ರೀತಿಗಳಿಂದ ಕಾಮೋದ್ದೀಪಕಗಳಾದ ವಸ್ತುಸಂಚಯಗಳನ್ನು ವ್ಯಾವರ್ಣಿಸಿ, ಅದರಿಂದ ಶುಕಮುನಿಯ ಮನಸ್ಸ

ಚಲಿಸದಿದ್ದುದನ್ನು ತಿಳಿದು, ರಂಭೆಗೆ ಬೇಸರವಾಗಿ, ವ್ಯಾಜಾಂತರದಿಂದ ತಾನನ್ನು ನಿಂದಿಸುತ್ತಾಳೆ:—

" ಶುಕಮುನಿಯೇ ! ಆಲಿಸು. ದಿವ್ಯವಾದ ಗಂಧವೂ, ಪರಿಮಳ ಯುಕ್ತವಾದ ಪುಷ್ಪಗಳೂ, ಮನೋಹರವಾದ ಹಾಸುಗೆಯೂ, ಸೌಂದರ್ಯವತಿಯಾದ ಯುವತಿಯೂ, ಇವೆಲ್ಲವುಗಳ ಅನುಭವಕ್ಕೆ ಅತ್ಯರ್ಹವಾದ ವಸಂತಕಾಲದ ಪೂರ್ಣಚಂದ್ರ ಕಾಂತಿಯಿಂದ ಕಂಗೊಳಸುವ ರಾತ್ರಿಯೂ, ಅನುಕೂಲವಾಗಿದ್ದರೂ,— ಪುರುಷನಿಗೆ ಗಂಡುತನವಿಲ್ಲದಿದ್ದಲ್ಲಿ, ಅವುಗಳಿಂದೇನು ? "

ಶುಕ ॥ ಶ್ಲೋ ॥ " ಸುರೂಪಂ ಶರೀರಂ ನವೀನಂ ಕಲತ್ರಂ ।
ಧನಂ ಮೇರುತುಲ್ಯಂ ವಚಶ್ಚಾರುಚಿತ್ರಂ ।
ಹರೇರಂಘ್ರಿಯುಗ್ಮೇ ಮನಶ್ಚೇದಲಗ್ನಂ ।
ತತಃ ಕಿಂ ? ತತಃ ಕಿಂ ? ತತಃ ಕಿಂ ? ತತಃ ಕಿಂ ? " ॥೩೪॥

ಹಾಗೆ ನಿಂದಿಸಿದರೂ, ಕಂಗೆಡದೆ, ಭಗವಧ್ಯಾನ ತತ್ಪರನಾದ ಮಹಾಮುನಿಯು, ಜನನ ಮರಣ ದುಃಖಪ್ರದಗಳಾದ ಸೌಂದರ್ಯಾದಿಗಳನು. ತಿರಸ್ಕರಿಸುತ್ತಾನೆ:—

ರಂಭೆ ! ಹಾಗೆನ್ನಬೇಡ. ಮನೋಹರವಾದ ರೂಪವೂ, ಸೌಂದರ್ಯವತಿಯಾದ ಯುವತಿಯೂ, ಮೇರು ಪರ್ವತಕ್ಕೆಣೆಯಾದ ಐಶ್ವರ್ಯವೂ, ಸರ್ವಸ್ತುತ್ಯವಾದ ವಾಕ್ಚಾತುರ್ಯವೂ, ಅನುಕೂಲಿಸಿದ್ದರೂ, ಪರಮಾತ್ಮನ ಪಾದಯುಗಳದಲ್ಲಿ ಮನಸ್ಸುದುದು ಲೀನವಾಗದಿದ್ದರೆ, ಯಾವುದರಿಂದ ಏನು ತಾನೇ ಪ್ರಯೋಜನವುಂಟು. "

ಹೀಗೆ, ತನ್ನ ಯಾವತ್ಪ್ರಯತ್ನದಿಂದಲೂ ಶುಕಮುನಿಯು ತನಗೆ ವಶನಾಗದಿದ್ದುದರಿಂದ, ದಗ್ಧಹೃದಯಳಾಗಿ, ಬಾಡಿದ ಮೊಗವನ್ನುಳ್ಳ ರಂಭೆಯು ಹಿಂದಿರುಗಿ,— ತಾನು ಇಂದ್ರನಿಂದ ಅನುಜ್ಞೆಯನ್ನು ಪಡೆದು ಒರುವಾಗ, ತನಗಿದ್ದ ಅತ್ಯುತ್ಸಾಹದ ಸ್ಥಾನದಲ್ಲಿ ಆದೇಶವಾಗಿ ಚಿಂತೆಯು ನಿಲ್ಲಲು,—ಇಂದ್ರನಿಗೆ ಮುಖವನ್ನು ತೋರಿಸುವುದಕ್ಕೂ ನಾಚಿ, ಏಕಾಂ

ತವಾಗಿ ಸ್ವಗೃಹವನ್ನು ಪ್ರವೇಶಿಸಿದಳು. ಇಂದ್ರನು ಈ ವಿಷಯನ್ನು ತಿಳಿದು, ಶುಕಮಹರ್ಷಿಯ ಮನಸ್ಸ್ಥೈರ್ಯಕ್ಕೆ ಅಚ್ಚರಿಗೊಂಡು, ತನ್ನ ಮನಸ್ಸಿನ ಶಂಕೆಯನ್ನುಳಿದು ರಂಭೆಯನ್ನು ಸಮಾಧಾನಗೊಳಿಸಿ ಸುಖವಾಗಿದ್ದನು. ಭಗವಾನ್ ಶುಕಮಹರ್ಷಿಯ ಪ್ರಭಾವವು ಜಗದ್ವಿಖ್ಯಾತವಾಗಿ ಪ್ರಕಾಶಿಸತೊಡಗಿತು. ಇದಲ್ಲವೇ ಮನಸ್ಥೈರ್ಯವು !!! ತತ್ಸತ್.

## —: ಗಾರ್ಗೀಯಾಜ್ಞವಲ್ಕ್ಯಸಂವಾದ :—

ಹಿಂದಣ ಪ್ರಕರಣದಲ್ಲಿ ಸೂಚಿಸಿದ "ಜನಕಮಹಾರಾಜನು" ತನ್ನ ರಾಜಧಾನಿಯಾದ ಮಿಥಿಲಾನಗರದಲ್ಲಿ, ವೇದಾಂತವಿಚಾರವಾದ ಒಂದಾನೊಂದು ಸಭೆಯನ್ನು ಏರ್ಪಡಿಸಿ, ಸಮಸ್ತ ದೇಶಗಳಿಗೂ ಆಹ್ವಾನಪತ್ರಿಕೆಗಳನ್ನು ಕಳುಹಿಸಿದನು. ಆಗ ತತ್ವವಿದ್ಯಾವಿಶಾರದರಾದ "ಮಹಾತ್ಮರನೇಕರು" ಆ ಸಭೆಗೆ ದಯಮಾಡಿಸಿದ್ದರು.

ಬ್ರಹ್ಮರ್ಷಿಗಳು, ರಾಜರ್ಷಿಗಳು ಮುಂತಾದ ಅಖಂಡಪಾಂಡಿತ್ಯಧುರೀಣರಿಂದೊಡಗೂಡಿದ ಆ ಸಭೆಯು ಬ್ರಹ್ಮತೇಜೋಮಯವಾದ ಚತುರ್ಮುಖನ ಸಭೆಯಂತೆ ಅತ್ಯಂತ ಶೋಭಾಯಮಾನವಾಗಿದ್ದಿತು.

ಅಂತಹ ಮಹಾ ಸಭೆಯನ್ನು ನೋಡಿ ಆನಂದ ಪರವಶನಾದ ಜನಕರಾಯನು ಆ ಸಭೆಯಲ್ಲಿ ನೆರೆದಿದ್ದ ಋಷಿಸಮೂದಲ್ಲಿ ಸಂಪೂರ್ಣ ಬ್ರಹ್ಮಜ್ಞಾನಿಗಳ್ಯಾರೆಂಬ ವಿವರವನ್ನು ತಿಳಿಯಲಪೇಕ್ಷಿಸಿದನು. ತಕ್ಷಣವೇ ಅದಕ್ಕೊಂದು ಸಾಧನವನ್ನು ಸಂಕಲ್ಪಿಸಿದನು. ಭಂಗಾರದ ಒಡವೆಗಳಿಂದ ಅಲಂಕರಿಸಲ್ಪಟ್ಟ ಒಂದು ಸಾವಿರಗೋವುಗಳನ್ನು ಬರಮಾಡಿ ಬಾದೆಡೆಯಲ್ಲಿ ಗುಂಪಾಗಿ ನಿಲ್ಲಿಸಿ, ಸಭಾಸದರಾದ ಬ್ರಹ್ಮವೇತ್ತರಿಗಾ ಗೋವುಗಳನ್ನು ತೋರಿಸಿ ಅವರೊಂದಿಗಿಂತೆಂದನು.

ಓ ಪೂಜ್ಯರಾದ ಬ್ರಾಹ್ಮಣರೇ ! ನಿಮ್ಮಲ್ಲಿ ಪರಿಪೂರ್ಣ ಬ್ರಹ್ಮವೇತ್ತರಾದವರು ಈ ಆಕಳುಗಳನ್ನು ಸ್ವೀಕರಿಸಬಹುದು! ಎಂದು ನುಡಿದನು.

ಅಂತಹ ಮಹಾ ಸಭೆಯಲ್ಲಿ " ನಾನು ಬ್ರಹ್ಮಜ್ಞಾನಿ ! " ಎಂದು ಹೇಳತಕ್ಕ ಸಮರ್ಥರ್ಯಾರು ? ಪ್ರತಿಯೊಬ್ಬರೂ ತಮ್ಮ ಬ್ರಹ್ಮಜ್ಞಾನವು ಪರಿಪೂರ್ಣವಾದುದೋ ಅಲ್ಲವೋ ಎಂಬ ಸಂಶಯಕ್ಕೊಳಗಾಗಿ ಕದಲ ಮೆದ

ಲದೆ, ತುಟಿಗಳನ್ನು ಸಹಿತವಾಡಿಸದೆ ಅನಿಮಿಷರಂತೆ ಒಂದೇ ದೃಷ್ಟಿಯುಳ್ಳವರಾಗಿ ನೋಡುತ್ತಿದ್ದರು.

ಆಗಲಾ ಸಭೆಯಲ್ಲೊಂದುಕಡೆ ಕುಳಿತಿದ್ದ "ಯಾಜ್ಞವಲ್ಕ್ಯ" ನೆಂಬ ಬ್ರಹ್ಮವೇತ್ತನು ಮೇಲಕ್ಕೆದ್ದು, ತನ್ನ ದೃಷ್ಟಿಯನ್ನು ಜನಕರಾಯನಕಡೆಗೆ ಸಾರಿಸಿ "ಎಲೈರಾಯನೇ! ನೀನುಹೇಳಿದ ಬ್ರಹ್ಮಜ್ಞಾನಿಯು ನಾನೇ!! ಈ ಗೋವುಗಳು ನನಗೆ ಸೇರತಕ್ಕವುಗಳು!!! ಎಂದು ಗಂಭೀರವಾಗಿ ನುಡಿದನು. ಆತನ ಧೈರ್ಯಕ್ಕೆ ಮೆಚ್ಚಿ, ಋಷಿಗಳನೇಕರು ಸಂತೋಷಪಡುತ್ತಿದ್ದರು. ಮತ್ತೆ ಕೆಲವರು "ಎಲ್ಲರಿಗಿಂತಲೂ ಈತನೇ ಶ್ರೇಷ್ಠನೋ? ಎಂಬ ಅಸೂಯಾ ಸಂಶಯಗಳಿಂದ ಬಾಧಿತರಾಗಿ ಒಳಗೊಳಗೇ ವಿಚಾರಪಡುತ್ತಿದ್ದರು. ಜನಕರಾಯನ ಪುರೋಹಿತರೂ, ಋತ್ವಿಜರೂ ಆದ, ಆಶ್ವಲನು, ಆರ್ತಭಾಗನು, ಭುಜ್ಯುವು, ಉಷಸ್ತನು, ಕಹೋಳನು ಮುಂತಾದ ಪಂಡಿತರು ಕೆಲವರು, ಯಾಜ್ಞವಲ್ಕ್ಯನಪಾಂಡಿತ್ಯವನ್ನು ಪರೀಕ್ಷಿಸಲು ಯತ್ನಿಸಿ ಅನೇಕ ಪ್ರಶ್ನೆಗಳನ್ನು ಹಾಕಿ ಸೋತುಹೋದರು. ಆಗ ಜನಕನಿಂದ ನಿಶ್ಚಯಿಸಲ್ಪಟ್ಟ ಸಾವಿರಗೋವುಗಳೂ ಯಾಜ್ಞವಲ್ಕ್ಯನಿಗೇ ಸೇರಬೇಕಾಯಿತು. ಎಲ್ಲರೂ ವಿಭ್ರಾಂತರಾಗಿ ಯಾಜ್ಞವಲ್ಕ್ಯನನ್ನೇ ನೋಡುತ್ತಿದ್ದರು.

ಆ ಮಹಾ ಸಭೆಯಲ್ಲೊಂದು ಕಡೆ ಕುಳಿತಿದ್ದ "ಗಾರ್ಗಿ" ಎಂಬ ಬ್ರಹ್ಮವಾದಿನಿಯು, ಯಾಜ್ಞವಲ್ಕ್ಯನ ಬ್ರಹ್ಮಜ್ಞಾನವನ್ನು ಪರೀಕ್ಷಿಸಲೆಳಸಿ ಸಭಾರಂಗದಲ್ಲೆದ್ದುನಿಂತು ಈ ಕೆಳಗೆ ವಿವರಿಸುವಂತೆ, ಯಾಜ್ಞವಲ್ಕ್ಯನೊಂದಿಗೆ ವಾದ ಪ್ರತಿವಾದಕ್ಕೆ ತೊಡಗಿದಳು.

ಗಾರ್ಗಿ:—ಎಲೈ ಬ್ರಾಹ್ಮಣೋತ್ತಮನೆ! ಈ ಸಭೆಯಲ್ಲಿರತಕ್ಕ ಎಲ್ಲರಿಗಿಂತಲೂ, ಬ್ರಹ್ಮಜ್ಞಾನದಲ್ಲಿ ನೀನೇ ಶ್ರೇಷ್ಠನೋ?

ಯಾಜ್ಞವಲ್ಕ್ಯ:— (ದೃಢವಾದ ಸ್ವರದಿಂದ) ಅಹುದು!

ಗಾರ್ಗಿ:—ಹಾಗಾದರೆ, ನಾನು ಕೇಳುವ ಪ್ರಶ್ನೆಗಳಗೆಲ್ಲಕ್ಕೂ ಪ್ರತ್ಯುತ್ತರಗಳನ್ನು ಕೊಡಬಲ್ಲೆಯೋ?

ಯಾಜ್ಞ:—ನಿಸ್ಸಂದೇಹವಾಗಿ ಕೊಡಬಲ್ಲೆನು!

ಗಾರ್ಗಿ:—ಹಾಗಾದರೆ ಸರಿ! ಎಲೈ ಬ್ರಹ್ಮರ್ಷಿಯೆ! ಈ ಪೃಥಿವೀ ಸಂಬಂಧವಾದ ಧಾತು ಜಾಲವೆಲ್ಲವೂ ವಸ್ತ್ರಗಳಲ್ಲಿರುವ ದಾರದ ಎಳೆಗಳಂತೆ ಬಾಹ್ಯಾಂತರ್ಭೂತಗಳಾದ ಉದಕಗಳಿಂದ ಎಲ್ಲೆಲ್ಲಿಯೂ ವ್ಯಾಪಿಸಲ್ಪಟ್ಟಿರುತ್ತವೆ. ಅದರಂತೆಯೇ ಉದಕಗಳು ಯಾವುದರಲ್ಲಿ ಅಂತರ್ಭೂತವಾಗಿರುವುವು?

ಯಾಜ್ಞ:—ಓ ಗಾರ್ಗೀ! ಉದಕಗಳು ವಾಯುವಿನಲ್ಲಿರುವುವು!
ಗಾರ್ಗಿ:—ವಾಯುವು ಯಾವುದರಲ್ಲಿರುತ್ತದೆ?
ಯಾಜ್ಞ:—ಗಂಧರ್ವಲೋಕದಲ್ಲಿರುತ್ತದೆ!
ಗಾರ್ಗಿ:—ಗಂಧರ್ವಲೋಕಗಳು ಯಾವುದರಲ್ಲಿರುತ್ತವೆ!
ಯಾಜ್ಞ:—ಆದಿತ್ಯಲೋಕದಲ್ಲಿರುತ್ತವೆ!
ಗಾರ್ಗಿ:—ಆದಿತ್ಯಲೋಕಗಳು ಯಾವುದರಲ್ಲಿರುತ್ತವೆ?
ಯಾಜ್ಞ:—ಚಂದ್ರಲೋಕದಲ್ಲಿರುತ್ತವೆ!
ಗಾರ್ಗಿ:—ಚಂದ್ರಲೋಕಗಳು ಯಾವುದರಲ್ಲಿರುತ್ತವೆ?
ಯಾಜ್ಞ:—ನಕ್ಷತ್ರಲೋಕಗಳಲ್ಲಿರುತ್ತವೆ!
ಗಾರ್ಗಿ:—ನಕ್ಷತ್ರಲೋಕಗಳು ಯಾವುದರಲ್ಲಿರುತ್ತವೆ?
ಯಾಜ್ಞ:—ದೇವಲೋಕಗಳಲ್ಲಿರುತ್ತವೆ!
ಗಾರ್ಗಿ:—ದೇವಲೋಕಗಳು ಯಾವುದರಲ್ಲಿರುತ್ತವೆ?
ಯಾಜ್ಞ:—ಇಂದ್ರಲೋಕಗಳಲ್ಲಿರುತ್ತವೆ!
ಗಾರ್ಗಿ:—ಇಂದ್ರಲೋಕಗಳು ಯಾವುದರಲ್ಲಿರುತ್ತವೆ?
ಯಾಜ್ಞ:—ಪ್ರಜಾಪತಿ ಲೋಕಗಳಲ್ಲಿರುತ್ತವೆ!
ಗಾರ್ಗಿ:—ಪ್ರಜಾಪತಿ ಲೋಕಗಳು ಯಾವುದರಲ್ಲಿರುತ್ತವೆ?
ಯಾಜ್ಞ:—ಬ್ರಹ್ಮ ಲೋಕಗಳಲ್ಲಿರುತ್ತವೆ!
ಗಾರ್ಗಿ:—ಬ್ರಹ್ಮಲೋಕಗಳು ಯಾವುದರಲ್ಲಿರುತ್ತವೆ?

ಯಾಜ್ಞ:—ಓಗಾರ್ಗೀ! ನ್ಯಾಯವನ್ನತಿಕ್ರಮಿಸಿ ಪ್ರಶ್ನೆಮಾಡಬೇಡ ಹಾಗೆ ಮಾಡಿದೆಯಾದರೆ ನಿನ್ನ ತಲೆಹೊಡೆದು ಹೋಗಿ ಹೋಳಾಗುವುದು. ಯಾವ (ಬ್ರಹ್ಮವಿಚಾರವನ್ನು) ಬಹಿರಂಗವಾಗಿ ವಿಚಾರಮಾಡಬಾರದೊ,

ಅಂತಹ ಪರದೇವತೆಯನ್ನು ಕುರಿತು ನ್ಯಾಯವನ್ನತಿಕ್ರಮಿಸಿ ಕೇಳುತ್ತಿರುವೆ. ನೀನೀವಿಧವಾಗಿ ಕೇಳಬೇಡ! ಎಂದುತ್ತರವಿತ್ತನು.

ಆಗಲಾ ಬ್ರಹ್ಮವಾದಿನಿಯು ಸ್ವಲ್ಪಹೊತ್ತು ಸುಮ್ಮನಿದ್ದು ಮತ್ತೊಮ್ಮೆ ಸಭಾಸದರ ಅಪ್ಪಣೆಯನ್ನು ಪಡೆದು, ಪುನಃ ಈ ವಿಧವಾಗಿ ಪ್ರಶ್ನೆ ಮಾಡಲಾರಂಭಿಸಿದಳು.

ಗಾರ್ಗಿ:—ಎಲೈ ಬ್ರಾಹ್ಮಣೋತ್ತಮನಾದ ಯಾಜ್ಞವಲ್ಕ್ಯನೆ! ಬ್ರಹ್ಮಾಂಡಕ್ಕಿಂತಲೂ ಊರ್ಧ್ವಭಾಗದಲ್ಲಿಯೂ, ಅಧೋಭಾಗದಲ್ಲಿಯೂ, ಮಧ್ಯಭಾಗದಲ್ಲಿಯೂ, ಭೂತಭವಿಷ್ಯದ್ವರ್ತಮಾನಗರ್ಭಿತವೂ, ದ್ವಿತ್ವವೂ ಆದ ಈ ಸಮಸ್ತವೂ ಯಾವುದರಲ್ಲಿ ಏಕೀಭವಿಸಿರುವುದೆಂದು ಆಗಮನ್ಯಾಯದಿಂದ ಹೇಳುವರೋ ಅಂತಹಸಮಸ್ತವೂ ವಸ್ತ್ರದಲ್ಲಿರುವ ದಾರದ ಎಳೆಗಳಂತೆ ಯಾವುದರಲ್ಲಿ ಏಕವಾಗಿ ಕಲ್ಪಿಸಲ್ಪಟ್ಟಿರುತ್ತದೆ?

ಯಾಜ್ಞ:—ಓಗಾರ್ಗೀ! ಬ್ರಹ್ಮಾಂಡಕ್ಕಿಂತಲೂ, ಮೇಲ್ಭಾಗದಲ್ಲಿಯೂ, ಕೆಳಭಾಗದಲ್ಲಿಯೂ, ನಡುವೆಯೂ, ಭೂತವೂ, ವರ್ತಮಾನವೂ, ಭವಿಷ್ಯತ್ತೂ, ವ್ಯಾಕೃತವೂ ಆದ ಸೂತ್ರಾತ್ಮಕವಾದ ಜಗತ್ತೆಲ್ಲವೂ ಯಾವುದರಲ್ಲಿ ಏಕವಾಗ ಕಲ್ಪಿಸಲ್ಪಟ್ಟಿದೆಯೆಂದು ಹೇಳುವರೋ ಅಂತಹಸೂತ್ರವು, ಅವ್ಯಾಕೃತಾಕಾಶದಲ್ಲಿ, ಉತ್ಪತ್ತಿ ಸ್ಥಿತಿಲಯ ಕಾಲಗಳಲ್ಲಿ, ವಸ್ತ್ರದಲ್ಲಿನ ದಾರದಎಳೆಗಳಂತೆ ಏಕವಾಗಿ ಕಲ್ಪಿಸಲ್ಪಟ್ಟಿನುತ್ತದೆ!

ಗಾರ್ಗಿ:—ಓ ಯಾಜ್ಞವಲ್ಕ್ಯನೆ! ನೀನು ನನ್ನ ಪ್ರಶ್ನೆಯನ್ನೇ ವಿಶೇಷಪಡಿಸಿ ನನಗೆ ಹೇಳಿದೆಯಷ್ಟೆ! ಆದುದರಿಂದ ನಿನಗೆ ನಮಸ್ಕರಿಸುತ್ತಿರುವೆನು. ಮತ್ತೊಂದು ಪ್ರಶ್ನೆಮಾಡುವುದಕ್ಕೆ ನನ್ನನ್ನು ಧೈರ್ಯವಂತಳನ್ನಾಗಿ ಮಾಡು!

ಯಾಜ್ಞ:—ಗಾರ್ಗೀ! ನೀನು ಕೇಳಬೇಕಾದುದನ್ನೆಲ್ಲಾ ಕೇಳು.

ಗಾರ್ಗಿ:—ಯಾಜ್ಞವಲ್ಕ್ಯನೆ! (ನೀನುಹೇಳಿದ) ಆ ಅವ್ಯಾಕೃತಾಕಾಶವು ಯಾವುದರಲ್ಲಿ ಕಲ್ಪಿಸಲ್ಪಟ್ಟಿರುತ್ತದೆ?

ಯಾಜ್ಞ:—ಗಾರ್ಗೀ! ಅವ್ಯಾಕೃತಾಕಾಶವು ಯಾವುದರಲ್ಲಿ ದಾರದ ಎಳೆಗಳಂತೆ ಕಲ್ಪಿಸಲ್ಪಟ್ಟಿರುವುದೆಂದು ಯಾವುದನ್ನು ನೀನು ಕೇಳಿದೆಯೋ

ಅದು ನಾಶವಿಲ್ಲದ್ದಾದುದರಿಂದ “ ಅಕ್ಷರಸ್ವರೂಪ ” ವೆಂದು ಬ್ರಹ್ಮವೇತ್ತ್ರರು ಬಣ್ಣಿಸುತ್ತಿರುವರು.

ಗಾರ್ಗಿ:—ಯಾಜ್ಞವಲ್ಕ್ಯನೆ! ಆ ಅಕ್ಷರವೆಂಬುದು ಯಾವುದು ?

ಯಾಜ್ಞ:—ಗಾರ್ಗೀ! ಆ ಅಕ್ಷರವು ಸ್ಥೂಲವಲ್ಲ! ಸೂಕ್ಷ್ಮವಲ್ಲ! ಚಿಕ್ಕದಲ್ಲ! ದೊಡ್ಡದಲ್ಲ! ಇಂತು ಪದಾರ್ಥಧರ್ಮಗಳಾದ ಆರುವಿಧಗಳನ್ನೂ ನಿಷೇಧಿಸುವುದರಿಂದ ಅದು ನಾಶವಿಲ್ಲದ ಅಕ್ಷರ ಸ್ವರೂಪವು. ಮತ್ತು ಸ್ನಿಗ್ಧವಲ್ಲ, ಛಾಯೆಯಲ್ಲ, ತಪಸ್ಸಲ್ಲ, ವಾಯುವಲ್ಲ, ಆಕಾಶವಲ್ಲ, ರಸವಲ್ಲ, ಬಹಿರಿಂದ್ರಿಯಗಳುಳ್ಳದ್ದಲ್ಲ, ರಂಧ್ರವಿಲ್ಲ, ಪ್ರಾಣವಿಲ್ಲ, ಪರಿಮಿತಿಯಿಲ್ಲ, ಮುಖವಿಲ್ಲ, ಅದು ಯಾವುದನ್ನೂ ತಿನ್ನುವುದಿಲ್ಲ, ಅದನ್ನು ಯಾವುದೂ ತಿನ್ನುವುದಿಲ್ಲ, ಅಂತಹ ಸರ್ವವಿಶೇಷಣಶೂನ್ಯವಾದ ಅಕ್ಷರದ ಆಜ್ಞೆಯಿಂದಲೇ ಸೂರ್ಯಚಂದ್ರರು ಆಯಾ ಕಾಲದಲ್ಲಿ ತಪ್ಪದೆ ಪ್ರಕಾಶಿಸುತ್ತಿರುವರು. ಅದೇವಿಧವಾಗಿಯೇ ಭೂಮ್ಯಂತರಿಕ್ಷಗಳೂ, ಅಕ್ಷರಪರಬ್ರಹ್ಮದ ಆಜ್ಞೆಯಿಂದಲೇ ನಿಮಿಷಮುಹೂರ್ತ ಅಹೋರಾತ್ರ ಪಕ್ಷಮಾಸಸಂವತ್ಸರಗಳಾದಿಯಾಗಿ ಕಾಲಕ್ರಮಗಳೆಲ್ಲವೂ ತಪ್ಪದೆ ನಡೆಯುತ್ತಿರುವುವು. ಹಿಮಾಲಯ ಮುಂತಾದ ಪರ್ವತಗಳಿಂದ ಪೂರ್ವದಿಕ್ಕಿಗೆ ಪ್ರವಹಿಸುವ ನದಿಗಳು ಪೂರ್ವದಿಕ್ಕಿಗೂ, ಪಶ್ಚಿಮಕ್ಕೆ ಪ್ರವಹಿಸುವುವುಗಳು ಪಶ್ಚಿಮಕ್ಕೂ, ಮತ್ತೂ ಆಯಾ ದಿಕ್ಕುಗಳಿಗೆ ಪ್ರವಹಿಸುವ ನದಿಗಳು ಆಯಾ ದಿಕ್ಕುಗಳಿಗೂ ಆ ಅಕ್ಷರಪರಬ್ರಹ್ಮದ ಆಜ್ಞೆಯಿಂದಲೇ ಪ್ರವಹಿಸುತ್ತಿರುವುವು. ಪ್ರಮಾಣವನ್ನು ಗುರ್ತರಿತಮನುಷ್ಯರು ದಾನಾರ್ಹಗಳಾದ ಸುವರ್ಣ ಮುಂತಾದುವುಗಳನ್ನು ಅಕ್ಷರ ಪರಬ್ರಹ್ಮನ ಆಜ್ಞೆಯಿಂದ ಸ್ತುತಿಸುತ್ತಿರುವರು. ದೇವತೆಗಳು, ಪುರೋಡಾಶಗಳೇ ಮುಂತಾದ ಜೀವನಪದಾರ್ಥಗಳ ನಿಮಿತ್ತವಾಗಿ ಪಿತೃದೇವತೆಗಳ ದ್ವಾರಾ ಯಜಮಾನನ ಹೋಮವನ್ನನುಸರಿಸಿ ಹೊಂದುತ್ತಿರುವರು. ಇಂತು ಅಕ್ಷರಪರಬ್ರಹ್ಮದ ಆಜ್ಞೆಯಿಂದ ಈ ಸೂರ್ಯ ಚಂದ್ರರಾದಿಯಾಗಿ ಇವರೆಲ್ಲರೂ ತಮ್ಮ ತಮ್ಮ ಕೆಲಸಗಳಲ್ಲಿ ನಿಯಮಿತವಾಗಿ ಪ್ರವರ್ತಿಸುತ್ತಿರುವರು. ಓಗಾರ್ಗೀ! ಯಾವನು ಆ ಅಕ್ಷರಪರಬ್ರಹ್ಮವನ್ನರಿಯದೆ ಈ ಲೋಕದಲ್ಲಿ ಹೋಮವನ್ನು ಮಾಡುವನೋ, ಅನೇಕ ವರ್ಷಗಳ ಪರ್ಯಂತರ ತಪಸ್ಸನ್ನು ಮಾಡುವನೋ, ಅಂಥವನ ಆ ಕರ್ಮಫಲವೆಲ್ಲವೂ ನಾಶವಾಗುತ್ತದೆ. ಯಾವ

ನು, ಆ ಅಕ್ಷರಪರಬ್ರಹ್ಮವನ್ನು ತಿಳಿದುಕೊಳ್ಳದೆ ಈ ಲೋಕದಿಂದ ಮರಣ ಹೊಂದಿ ಹೋಗುತ್ತಾನೋ, ಅವನು ನೀಚನಾಗಿ ಜನನಮರಣ ರೂಪ ವಾದ ಸಂಸಾರಕಷ್ಟವನ್ನು ಎಡಬಿಡದೆಹೊಂದುತ್ತಾನೆ. ಯಾವನು ಆ ಅಕ್ಷ ರಪರಬ್ರಹ್ಮವನ್ನುತಿಳಿದು ಈ ಲೋಕದಿಂದ ಮರಣಹೊಂದಿ ಹೋಗುತ್ತಾ ನೋ, ಅವನು ಆ ಅಕ್ಷರಪರಬ್ರಹ್ಮಸ್ವರೂಪಿಯಾದ ಬ್ರಾಹ್ಮಣನಾಗುತ್ತಾನೆ.

ಅಂದರೇ, ಅಕ್ಷರಪರಬ್ರಹ್ಮವಾಗುತ್ತಾನೆ. ಓಗಾರ್ಗೀ ! ಪ್ರಸಿದ್ಧವಾದ ಈ ಅಕ್ಷರಸ್ವರೂಪವು ನೋಟಕ್ಕೆ ವಿಷಯುವಲ್ಲದ ದೃಕ್ಸ್ವರೂಪವಾಗಿಯೂ, ಮನಸ್ಸಿಗೆ ವಿಷಯುವಲ್ಲದ ಧ್ಯಾನರೂಪವಾಗಿಯೂ, ಬುದ್ಧಿಗೆ ವಿಷಯುವಲ್ಲದ ವಿಜ್ಞಾತೃಸ್ವರೂಪವಾಗಿಯೂ ಇರುತ್ತದೆ. ಮತ್ತು ಮಾ ಅಕ್ಷರ ಪರಬ್ರಹ್ಮ ಕ್ಕಿಂತ ಬೇರೆಯಾದ, ದ್ರಷ್ಟವ್ಯ, ಶ್ರೋತವ್ಯ, ಮಂತವ್ಯ, ವಿಜ್ಞಾತವ್ಯವಾ ದ ಪದಾರ್ಥಗಳಾವುವೂ ಇಲ್ಲ. ಓಗಾರ್ಗೀ ! ಅಂತಹ ಅಕ್ಷರಸ್ವರೂಪದಲ್ಲಿ ಯೇ ಅವ್ಯಾಕೃತಾಕಾಶವು ವಸ್ತ್ರದಲ್ಲಿನ ದಾರದ ಎಳೆಗಳಂತೆ ಏಕವಾಗಿ ಕ ಲ್ಪಿಸಲ್ಪಟ್ಟಿರುವುದು !!!

ಇಂತು ಧರ್ಮಸಮ್ಮತವಾದ ಪ್ರತ್ಯುತ್ತರಗಳನ್ನಿತ್ತ ಯಾಜ್ಞವಲ್ಕ್ಯನ ಮಾತುಗಳನ್ನು ಕೇಳಿ, ಪರಮಾನಂದ, ಭರಿತಳಾದ ಗಾರ್ಗಿಯು, ಮಹಾತ್ಮ ನಾದ ಯಾಜ್ಞವಲ್ಕ್ಯನ ಬ್ರಹ್ಮಜ್ಞಾನವನ್ನುಕುರಿತು ಸಭಾಸದರೊಂದಿಗೆ ಇಂ ತೆಂದು ಹೇಳಿದಳು.

ಈ ಸಭೆಯನ್ನಲಂಕರಿಸಿರುವ ಪೂಜ್ಯರಾದ ಬ್ರಾಹ್ಮಣೋತ್ತಮರೆ! ಈ ಯಾಜ್ಞಾವಲ್ಕ್ಯನು ಪರಿಪೂರ್ಣ ಬ್ರಹ್ಮವೇತ್ತನು. ನೀವೆಲ್ಲರೂ ಈ ಮ ಹಾತ್ಮನಿಗೆ ಭಕ್ತಿಪೂರ್ವಕವಾಗಿ ನಮಸ್ಕಾರಗಳನ್ನಾಚರಿಸಿ ಮುಕ್ತರಾಗುವು ದೇ ಶ್ರೇಯಸ್ಕರವೆಂದೆಣಿಸಿರಿ ! ನಿಮ್ಮಲ್ಲಿ ಬ್ರಹ್ಮವಿಚಾರವನ್ನುಕುರಿತು ಈ ಯಾಜ್ಞವಲ್ಕ್ಯನೊಂದಿಗೆ ವಾದಮಾಡಿ ಗೆಲ್ಲತಕ್ಕವರು ಒಬ್ಬರಾದರೂ ಇಲ್ಲ ವೆಂದು ನಾನು ದೃಢವಾಗಿ ಹೇಳಬಲ್ಲೆನು ! ಎಂದು ಗಂಭೀರವಾಗಿ ನುಡಿ ದು, ಯಾಜ್ಞವಲ್ಕ್ಯನಿಗೆ ವಂದನೆಗಳನ್ನಾಚರಿಸಿ ಗಾರ್ಗಿ ಸುಮ್ಮನಾದಳು.

ಆಗಲಾಸಭೆಯಲ್ಲಿದ್ದ ಬ್ರಹ್ಮರ್ಷಿ, ರಾಜರ್ಷಿಗಳೆಲ್ಲರೂ ಏಕಾಭಿಪ್ರಾ ಯದಿಂದ ಗಾರ್ಗಿಯ ಮಾತನ್ನಂಗೀಕರಿಸಿ ಯಾಜ್ಞವಲ್ಕ್ಯನನ್ನು ಭಕ್ತಿಪೂರ್ವ

ಕವಾಗಿ ಪುರಸ್ಕರಿಸಿದರು. ಉಪನಿಷದ್ವಾಕ್ಯವಿಶೋಧನಧನಿಕನೂ, ಸಾರಾ ಸಾರವಿಚಾರ ಧುರೀಣನೂ, ಸತ್ಯವಾಕ್ಯಧುರಂಧರನೂ ಆದ ಜನಕರಾಯನು, ಮಹಾತ್ಮನಾದ ಯಾಜ್ಞವಲ್ಕ್ಯನನ್ನು ವಿವಿಧೋಪಚಾರಗಳಿಂದ ಪೂಜಿಸಿ, ತನ್ನ ವಾಗ್ದಾನದಂತೆ ಸಾವಿರಗೋವುಗಳನ್ನಾತನಿಗಿತ್ತು, ಗೌರವಿಸಿದನು. ತರುವಾಯ ಸಭೆಯಲ್ಲಿದ್ದ ಸಮಸ್ತ ಪಂಡಿತರನ್ನೂ ಸತ್ಕರಿಸಿ ಅವರವರ ಅಭೀಷ್ಟಗಳನಿತ್ತು ಕಳುಹಿಸಿದನು. ಯಾಜ್ಞವಲ್ಕ್ಯನು, ಆ ಗೋವುಗಳಲ್ಲಿ ಅನೇಕವನ್ನು ಅಲ್ಲಿದ್ದ ಬ್ರಾಹ್ಮಣರಿಗೆಕೊಟ್ಟು, ಮಿಕ್ಕವುಗಳನ್ನು ತಾನು ಪರಿಗ್ರಹಿಸಿದನು. ಇಂತು ನಮ್ಮೀ ಭರತಖಂಡದ ಬ್ರಹ್ಮಜ್ಞಾನಿಗಳಲ್ಲಿ ಸ್ತ್ರೀಯರೂ ಅನೇಕವಂದಿ ಇದ್ದರೆಂಬುದು ನಮ್ಮೆಲ್ಲರಿಗೂ ಸಂತೋಷದಾಯಕವಲ್ಲವೆ !!!

## ಪು ರಾ ಣ ಗ ಳು.

ಶ್ಲೋ॥ ಅಷ್ಟಾದಶಪುರಾಣಾನಿ, ಪುರಾಣಜ್ಞಾಃಪ್ರಚಕ್ಷತೇ ॥ [ವಿಷ್ಣುಪುರಾಣ]

(೧) ಬ್ರಾಹ್ಮಪುರಾಣ, (೨) ಪದ್ಮಪುರಾಣ, (೩) ವೈಷ್ಣವಪುರಾಣ, (೪) ಶೈವಪುರಾಣ, (೫) ಭಾಗವತಪುರಾಣ, (೬) ನಾರದೀಯಪುರಾಣ, (೭) ಮಾರ್ಕಂಡೇಯ ಪುರಾಣ, (೮) ಭವಿಷ್ಯೋತ್ತರ ಪುರಾಣ (೯) ಆಗ್ನೇಯಪುರಾಣ, (೧೦) ಬ್ರಹ್ಮವೈವರ್ತಪುರಾಣ, (೧೧) ಲಿಂಗಪುರಾಣ, (೧೨) ವರಾಹಪುರಾಣ, (೧೩) ಸ್ಕಾಂದಪುರಾಣ, (೧೪) ವಾಮನಪುರಾಣ, (೧೫) ಮತ್ಸ್ಯಪುರಾಣ, (೧೬) ಕೂರ್ಮಪುರಾಣ, (೧೭) ಗಾರುಡಪುರಾಣ, (೧೮) ಬ್ರಹ್ಮಾಂಡಪುರಾಣ, ಎಂಬೀ ಹೆಸರುಗಳಿಂದೊಡಗೂಡಿದ ೧೮ ಪುರಾಣಗಳು ಪ್ರಚಾರದಲ್ಲಿರುತ್ತವೆ.

ಶ್ಲೋ॥ ಅಷ್ಟಾದಶಪುರಾಣಾನಾಂ, ಕರ್ತಾಸತ್ಯವತೀಸುತಃ ।
ಇತಿಹಾಸಪುರಾಣಾಭ್ಯಾಂ, ವೇದಾರ್ಥಮುಪಬೃಂಹಯೇತ್ ॥

[ಶ್ರೀ ಮಹಾಭಾರತ]

ಪೂರ್ವೋಕ್ತ ೧೮ ಪುರಾಣಗಳನ್ನು ವಿರಚಿಸಿದವರು ವ್ಯಾಸಮಹರ್ಷಿಗಳು. ಪರಾಶರಮಹರ್ಷಿಗೂ, ಸತ್ಯವತೀದೇವಿ (ಮತ್ಸ್ಯಗಂಧಿ) ಗೂ

ಜನಿಸಿದವರಾದುದರಿಂದ ವ್ಯಾಸಮಹರ್ಷಿಗಳಿಗೆ, ಸಾತ್ಯವತೇಯರೆಂತಲೂ, ಮತ್ತು ಬಾದರಾಯಣರೆಂತಲೂ, ಕೃಷ್ಣದ್ವೈಪಾಯನರೆಂತಲೂ ಅನೇಕ ಹೆಸರುಗಳುಂಟು. ನಾಲ್ಕುವೇದಗಳನ್ನೂ ಪ್ರತ್ಯೇಕವಾಗಿ ವಿಭಜಿಸಿ, ಲೋಕೋಪಕಾರಮಾಡಿದ ಮಹಾನುಭಾವರಾದುದರಿಂದ "ವೇದವ್ಯಾಸ" ರೆಂಬ ಬಿರುದು ನಾಮವುಂಟಾಗಿರುತ್ತದೆ.

ಶ್ಲೋ॥ ಅಚತುರ್ವದನೋಬ್ರಹ್ಮಾ, ದ್ವಿಬಾಹುರಪರೋಹರಿಃ ।
ಅಫಾಲಲೋಚನಶ್ಶಂಭು, ರ್ಭಗವಾನ್ ಬಾದರಾಯಣಃ ॥

"ವ್ಯಾಸಾಯ ವಿಷ್ಣುರೂಪಾಯ, ವ್ಯಾಸರೂಪಾಯವಿಷ್ಣವೇ ।
ನಮೋವೈಬ್ರಹ್ಮನಿಧಯೆ, ವಾಸಿಷ್ಠಾಯ ನಮೋನಮಃ"

ಆಶ್ರಿತಜನರಕ್ಷಾಪರಾಯಣನಾದ ಶ್ರೀಮನ್ನಾರಾಯಣನ "ಅಂಶದಿಂದ" ಪರಾಶರಮಹರ್ಷಿಗೆ ಪುತ್ರರಾಗಿ ಅವತರಿಸಿದ ವೇದವ್ಯಾಸರು, ಅನಂತತತ್ವಾರ್ಥ ಪ್ರತಿಪಾದಕವಾಗಿಯೂ, ಸನಾತನಧರ್ಮಬೋಧಕವಾಗಿಯೂ, ಸಕಲಕಲಿಕಲ್ಮಷಪರಿಹಾರಕವಾಗಿಯೂ, ಇರುವಂತೆ ಪುರಾಣಗಳನ್ನು ವಿರಚಿಸಿದರು.

ಜನನಮರಣಪ್ರವಾಹರೂಪವಾದ ಈ ಸಂಸಾರ ಸಮುದ್ರದಲ್ಲಿ ಮುಳುಗಿ ತೇಲುತ್ತಿರುವ, ಬದ್ಧಸಂಸಾರಿಗಳಾದ ಜನರಿಗೆ, ಪರಮಾತ್ಮನ ಅನಂತಕಲ್ಯಾಣ ಗುಣಗಳನ್ನು ಸುಲಭವಾಗಿ ತಿಳಿಸಲೆಳಸಿ, ಪುರಾಣಗಳನ್ನು (ಗ್ರಂಥರೂಪವಾಗಿ) ವಿರಚಿಸಿ, ತಮ್ಮ ಶಿಷ್ಯರಮೂಲಕವಾಗಿ ಪ್ರಚಾರಗೊಳಿಸಿದರು.

ಶ್ಲೋ॥ ಸರ್ಗೋಸ್ಯಾಥವಿಸರ್ಗಶ್ಚ ವೃತ್ತಿರಕ್ಷಾಂತರಾಣಿಚ ।
ವಂಶೋವಂಶಾನುಚರಿತಂಸಂಸ್ಥಾಹೇತುರಪಾಶ್ರಯಃ, ದಶಭಿರ್ಲಕ್ಷಣೈರ್ಯುಕ್ತಂ ಪುರಾಣಂತದ್ವಿದೋವಿದುಃ ॥

ಅಂದರೇ, (೧) ಸರ್ಗ (೨) ಪ್ರತಿಸರ್ಗ (೩) ವೃತ್ತಿ (೪) ರಕ್ಷಾ (೫) ಮನ್ವಂತರ (೬) ವಂಶ (೭) ವಂಶಾನುಚರಿತ (೮) ಸಂಸ್ಥಾ (೯) ಹೇತುವು (೧೧) ಎಂಬೀ ಹತ್ತು ಲಕ್ಷಣಗಳಿಂದೊಡಗೂಡಿರುವ ಗ್ರಂಥಕ್ಕೆ ಪುರಾಣವೆಂದು ಹೆಸರು.

## ಪುರಾಣ ಸಂಖ್ಯಾವಿಚಾರ.

| ಪುರಾಣದ ಹೆಸರು | | ಉಪದೇಶಕರ ಹೆಸರು | ಶ್ಲೋಕಸಂಖ್ಯೆ | |
|---|---|---|---|---|
| ೧ ಬ್ರಾಹ್ಮ | ಪುರಾಣ— | ಬ್ರಹ್ಮ | ೧೦ | ಸಾವಿರ |
| ೨ ಪಾದ್ಮ | ,, | ಬ್ರಹ್ಮ | ೫೦ | ,, |
| ೩ ವಿಷ್ಣು | ,, | ಪರಾಶರ | ೮ | ,, |
| ೪ ಶೈವವಾಯು | ,, | ವಾಯು | ೨೪ | ,, |
| ೫ ಭಾಗವತ | ,, | ವ್ಯಾಸ & ಶುಕ | ೧೮ | ,, |
| ೬ ನಾರದೀಯ | ,, | ನಾರದ | ೨೫ | ,, |
| ೭ ಮಾರ್ಕಂಡೇಯ | ,, | ಮಾರ್ಕಂಡೇಯ | ೩೨ | ,, |
| ೮ ಭವಿಷ್ಯೋತ್ತರ | ,, | ಶತಾನೀಕ | ೩೫ | ,, |
| ೯ ಆಗ್ನೇಯ | ,, | ಭೃಗು | ೮ | ,, |
| ೧೦ ಬ್ರಹ್ಮವೈವರ್ತ್ತನ | ,, | ವಸಿಷ್ಠ | ೧೨ | ,, |
| ೧೧ ಲಿಂಗಪುರಾಣ | ,, | ನಂದಿಕೇಶ್ವರ | ೧೧ | ,, |
| ೧೨ ವರಾಹ | ,, | ವರಾಹಮೂರ್ತಿ | ೪ | ,, |
| ೧೩ ಸ್ಕಾಂದ | ,, | ಕುಮಾರಸ್ವಾಮಿ | ೧೦೦ | ,, |
| ೧೪ ವಾಮನ | ,, | ಬ್ರಹ್ಮ | ೧೪ | ,, |
| ೧೫ ಮತ್ಸ್ಯ | ,, | ಮತ್ಸ್ಯಮೂರ್ತಿ | ೧೪ | ,, |
| ೧೬ ಕೂರ್ಮ | ,, | ಕೂರ್ಮಮೂರ್ತಿ | ೬ | ,, |
| ೧೭ ಗಾರುಡ | ,, | ವಿಷ್ಣು | ೧೬ | ,, |
| ೧೮ ಬ್ರಹ್ಮಾಂಡ | ,, | ಬ್ರಹ್ಮ | ೧೨೨೧೦ | ,, |

ಈ ಹದಿನೆಂಟು ಪುರಾಗಳಶ್ಲೋಕಸಂಖ್ಯೆಯು, ಒಂದೊಂದು ಪುರಾಣವಲ್ಲಿ ಒಂದೊಂದುವಿಧವಾಗಿ ಕಾಣಬರುತ್ತದೆ. ಅಂದರೇ ಶ್ಲೋಕಸಂಖ್ಯೆಯು ಒಂದರಿಂದ ಮತ್ತೊಂದಕ್ಕೆ ಸ್ವಲ್ಪ ಭೇಧಿಸುತ್ತದೆ. ಆ ವಿವರವನ್ನಿಲ್ಲಿ ಸೂಚಿಸುತ್ತೇನೆ.

| | ಶ್ರೀಮದ್ಭಾಗವತಾನುಸಾರ | ದೇವೀಭಾಗವತಾನುಸಾರ | ಶಿವಪುರಾಣಾನುಸಾರ | ನಾರದೀಯಮತಾನುಸಾರ | ಬ್ರಹ್ಮವೈವರ್ತಮತಾನುಸಾರ | ಮಾತ್ಸ್ಯಮತಾನುಸಾರ |
|---|---|---|---|---|---|---|
| ೧ | ಬ್ರಾಹ್ಮ ೧೦೦೦೦ | ಮಾತ್ಸ್ಯ ೧೮೦೦೦ | ಬ್ರಾಹ್ಮ ೧೦೦೦೦ | ಬ್ರಾಹ್ಮ ೧೦೦೦೦ | ಬ್ರಾಹ್ಮ ೧೦೦೦೦ | ಬ್ರಾಹ್ಮ ೧೩೦೦೦ |
| ೨ | ಪಾದ್ಮ ೫೫೦೦೦ | ಮಾರ್ಕಂಡೇಯ ೯೦೦೦ | ಪಾದ್ಮ ೫೫೦೦೦ | ಪಾದ್ಮ ೫೫೦೦೦ | ಪಾದ್ಮ ೫೯೦೦೦ | ಪಾದ್ಮ ೫೫೦೦೦ |
| ೩ | ವೈಷ್ಣವ ೨೩೦೦೦ | ಭವಿಷ್ಯ ೧೮೫೦೦ | ವೈಷ್ಣವ ೨೩೦೦೦ | ವೈಷ್ಣವ ೨೩೦೦೦ | ವೈಷ್ಣವ ೨೩೦೦೦ | ವೈಷ್ಣವ ೨೩೦೦೦ |
| ೪ | ಶೈವ ೨೪೦೦೦ | ಭಾಗವತ ೧೮೦೦೦ | ಶೈವ, ವಾಯು ೨೪೦೦೦ | ವಾಯುಪುರಾಣ ೨೪೦೦೦ | ಶೈವ ೨೪೦೦೦ | ವಾಯುವೀಯ ೨೪೦೦೦ |
| ೫ | ಭಾಗವತ ೧೮೦೦೦ | ಬ್ರಾಹ್ಮ ೧೦೩೦೦ | ಭವಿಷ್ಯ ೧೮೫೦೦ | ಭಾಗವತ ೧೮೦೦೦ | ಭಾಗವತ ೧೮೦೦೦ | ಭಾಗವತ ೧೮೦೦೦ |
| ೬ | ನಾರದೀಯ ೨೫೦೦೦ | ಬ್ರಹ್ಮಾಂಡ ೧೨೦೦೦ | ಮಾರ್ಕಂಡೇಯ ೯೦೦೦ | ನಾರದೀಯ ೨೫೦೦೦ | ನಾರದೀಯ ೨೫೦೦೦ | ನಾರದೀಯ ೨೫೦೦೦ |
| ೭ | ಮಾರ್ಕಂಡೇಯ ೯೦೦೦ | ಬ್ರಹ್ಮವೈವರ್ತ ೧೮೦೦೦ | ಆಗ್ನೇಯ ೧೬೦೦ ? | ಮಾರ್ಕಂಡೇಯ ೯೦೦೦ | ಮಾರ್ಕಂಡೇಯ ೯೦೦೦ | ಮಾರ್ಕಂಡೇಯ ೯೦೦೦ |
| ೮ | ಆಗ್ನೇಯ ೧೫೪೦೦ | ವಾಮನ ೧೦೦೦೦ | ನಾರದೀಯ ೨೫೦೦ ? | ಆಗ್ನೇಯ ೧೫೦೦೦ | ಆಗ್ನೇಯ ೧೫೪೦೦ | ಆಗ್ನೇಯ ೧೬೦೦೦ |

| | | | | | | |
|---|---|---|---|---|---|---|
| ೯ | ಬ್ರಹ್ಮವೈವರ್ತ ೧೮೦೦೦ | ವಾಯುಪುರಾಣ ೧೦೬೦೦ | ಭಾಗವತ ೧೮೦೦ | ಭವಿಷ್ಯ ೧೪೦೦೦ | ಭವಿಷ್ಯ ೧೪೫೦೦ | ಭವಿಷ್ಯ ೧೮೫೦೦ |
| ೧೦ | ಭವಿಷ್ಯ ೧೮೫೦೦೦ | ವೈಷ್ಣವ ೨೩೦೦೦ | ಬ್ರಹ್ಮವೈವರ್ತ ೧೮೦೦೦ | ಬ್ರಹ್ಮವೈವರ್ತ ೧೮೦೦೦ | ಬ್ರಹ್ಮವೈವರ್ತ ೧೮೦೦೦ | ಬ್ರಹ್ಮವೈವರ್ತ ೧೮೦೦೦ |
| ೧೧ | ಲೈಂಗ ೧೧೦೦೦ | ವಾರಾಹ ೨೪೦೦೦ | ಲೈಂಗ ೧೧೦೦೦ | ಲೈಂಗ ೧೧೦೦೦ | ಲೈಂಗ ೧೧೦೦೦ | ಲೈಂಗ ೧೧೦೦೦ |
| ೧೨ | ವಾರಾಹ ೨೪೦೦ | ಆಗ್ನೇಯ ೧೬೦೦೦ | ವಾರಾಹ ೨೪೦೦೦ | ವಾರಾಹ ೨೪೦೦೦ | ವಾರಾಹ ೨೪೦೦೦ | ವಾರಾಹ ೨೪೦೦೦ |
| ೧೩ | ಸ್ಕಾನ್ದ ೮೧೦೦೦ | ನಾರದೀಯ ೨೫೦೦೦ | ಸ್ಕಾಂದ ೮೪೦೦೦ | ಸ್ಕಾನ್ದ ೮೧೦೦೦ | ಸ್ಕಾನ್ದ ೮೧೦೦೦ | ಸ್ಕಾನ್ದ ೮೧೦೦೦ |
| ೧೪ | ವಾಮನ ೧೦೦೦೦ | ಪಾದ್ಮ ೫೫೦೦೦ | ವಾಮನ ೧೦೦೦೦ | ವಾಮನ ೧೦೦೦೦ | ವಾಮನ ೧೦೦೦೦ | ವಾಮನ ೧೦೦೦೦ |
| ೧೫ | ಕೌರ್ಮ ೧೭೦೦೦ | ಲೈಂಗ ೧೧೦೦೦ | ಕೌರ್ಮ ೧೭೦೦೦ | ಕೌರ್ಮ ೧೭೦೦೦ | ಕೌರ್ಮ ೧೭೦೦೦ | ಕೌರ್ಮ ೧೮೦೦೦ |
| ೧೬ | ಮಾತ್ಸ್ಯ ೧೯೦೦೦ | ಗಾರುಡ ೧೯೦೦೦ | ಮಾತ್ಸ್ಯ ೧೮೦೦೦ | ಮಾತ್ಸ್ಯ ೧೫೦೦೦ | ಮಾತ್ಸ್ಯ ೧೮೦೦೦ | ಮಾತ್ಸ್ಯ ೧೪೦೦೦ |
| ೧೭ | ಗಾರುಡ ೧೯೦೦೦ | ಕೌರ್ಮ ೧೭೦೦೦ | ಗಾರುಡ ೧೯೦೦೦ | ಗಾರುಡ ೧೯೦೦೦ | ಗಾರುಡ ೧೯೦೦೦ | ಗಾರುಡ ೧೮೦೦೦ |
| ೧೮ | ಬ್ರಹ್ಮಾಂಡ ೧೨೦೦೦ | ಸ್ಕಾನ್ದ ೮೧೦೦೦ | ಬ್ರಹ್ಮಾಂಡ ೧೨೨೦೦ | ಬ್ರಹ್ಮಾಂಡ ೧೨೦೦೦ | ಬ್ರಹ್ಮಾಂಡ ೧೨೦೦೦ | ಬ್ರಹ್ಮಾಂಡ ೧೨೨೦೦ |

ಶ್ಲೋ॥ ಪುರಾಣಂ ಸರ್ವಶಾಸ್ತ್ರಾಣಾಂ ।
ಪ್ರಥಮಂ ಬ್ರಹ್ಮಣಾಸ್ಮೃತಂ ॥
ಅನಂತರಂತು ವಕ್ತ್ರೇಭ್ಯೋ ।
ವೇದಾಸ್ತಸ್ಯವಿನಿರ್ಗತಾಃ । [ಮತ್ಸ್ಯಪುರಾಣ]

ಬ್ರಹ್ಮ, ವಿಷ್ಣು, ಮಹೇಶ್ವರರಿಂದಲೂ,ನಾರದಾದಿಮಹರ್ಷಿಗಳಿಂದಲೂ ಜಿಜ್ಞಾಸೆ ಮಾಡಲ್ಪಟ್ಟ, ಮತ್ತು ಸಂವಾದ ರೂಪವಾಗಿ ಪ್ರಸಂಗಿಸಲ್ಪಟ್ಟ, ಹಾಗೆಯೆ ಒಬ್ಬರಿಂದೊಬ್ಬರಿಗೆ ಉಪದೇಶ ಮಾಡಲ್ಪಟ್ಟ, ಮಹದ್ವಿಷಯಗಳನ್ನೆಲ್ಲಾ, ಸಂಪ್ರದಾಯಾನುಸಾರವಾಗಿ ಒಂದೆಡೆಯಲ್ಲಿ ಗ್ರಂಥರೂಪವಾಗಿ ವಿರಚಿಸಿ, ಅವುಗಳನ್ನು ತಮ್ಮ ಶಿಷ್ಯರಾದ ರೋಮಹರ್ಷಣರೆಂಬ ನಾಮಾಂತರವುಳ್ಳ ಸೂತಪುರಾಣಿಕರಿಗೆ ಉಪದೇಶಮಾಡಿ,ಪ್ರಪಂಚದಲ್ಲೆಲ್ಲಾ ಪ್ರಚಾರಗೊಳಿಸಿ ಲೋಕೋಪಕಾರ ಮಾಡಿದ ಭಗವಾನ್ ಶ್ರೀ ವೇದವ್ಯಾಸರ ಮಹಿಮೆಯು ಕೊಂಡಾಡತಕ್ಕುದಲ್ಲವೆ ?

ಇನ್ನು ಪುರಾಣಗಳೆಂದರೇನು ? ಅವುಗಳಲ್ಲಿರತಕ್ಕ ವಿಷಯಗಳಾವುವು ? ಎಂಬ ವಿಚಾರವನ್ನು ಪರಿಶೀಲಿಸಿ ನೋಡೋಣ !



## ಪುರಾಣ ಲಕ್ಷಣ.

ಶ್ಲೋ॥ ಸರ್ಗಶ್ಚ ಪ್ರತಿಸರ್ಗಶ್ಚ ವಂಶಮನ್ವಂತರಾಣಿಚ ॥
ವಂಶಾನುಚರಿತಂಚೇತಿಲಕ್ಷಣಾನಾಂತುಪಂಚಕಮ್ ॥

ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ, ವಂಶಾನುಚರಿತಗಳೆಂಬ ಐದು ಲಕ್ಷಣಗಳಿಂದೊಡಗೂಡಿರುವ ಗ್ರಂಥಕ್ಕೆ ಪುರಾಣವೆಂದು ಹೆಸರು. ಇದಕ್ಕೆ ಮೊದಲು ವಿವರಿಸಿರುವ ಶ್ಲೋಕದಲ್ಲಿಯೂ,ಈ ಶ್ಲೋಕದಲ್ಲಿಯೂ ವಿವರಿಸಲ್ಪಟ್ಟಿರುವ ದಶವಿಧ ಪುರಾಣಲಕ್ಷಣಗಳು ಇಲ್ಲಿ ವಿವರಿಸಲ್ಪಡುತ್ತವೆ

(೧) ಸರ್ಗ:— ಅಂದರೇ ಸರ್ವಪ್ರಪಂಚದ ಸೃಷ್ಟಿವಿಚಾರವನ್ನು ಪರಿಷ್ಕಾರವಾಗಿ ತಿಳಿಸುವಿಕೆ.

(೨) ಪ್ರತಿಸರ್ಗ:— ಸಮಸ್ತ ಪ್ರಪಂಚದ ಪ್ರಳಯ ಲಕ್ಷಣವನ್ನು ತಿಳಿಸುವಿಕೆ.

[೩] ವಂಶ:— ಮರೀಚಿ, ಕಶ್ಯಪ, ಮನು, ಪ್ರಿಯವ್ರತಾದಿಗಳ ವಂಶೋತ್ಪತ್ತಿ, ವಂಶಾಭಿವೃದ್ಧಿ ಮುಂತಾದುವುಗಳನ್ನು ವಿವರಿಸುವಿಕೆ.

[೪] ಮನ್ವಂತರ:— ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸೂರ್ಯಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ರುದ್ರಸಾವರ್ಣಿ, ಧರ್ಮಸಾವರ್ಣಿ, ರೌಚ್ಯ, ಭೌಚ್ಯರೆಂಬ ಹದಿನಾಲ್ಕು ಮಂದಿ ಮನುವುಗಳಲ್ಲಿ ಯಾವಯಾವ ಕಲ್ಪದಲ್ಲಿ ಯಾವ ಯಾವ ಮನುವಿನ ಕಾಲದಲ್ಲಿ ಏನೇನುಕಾರ್ಯಗಳು ಜರುಗಿದವೋ ಆಯಾ ಕಾರ್ಯಗಳ ಪೂರ್ವೋತ್ತರ ವೃತ್ತಾಂತಗಳನ್ನು ತಿಳಿಸುವಿಕೆ.

(೫) ವಂಶಾನುಚರಿತ:— ಸೂರ್ಯವಂಶ ಮತ್ತು ಚಂದ್ರವಂಶಗಳಲ್ಲಿ ಹುಟ್ಟಿ ಪ್ರಖ್ಯಾತರಾದ ಹರಿಶ್ಚಂದ್ರ, ನಲ, ಮಾಂಧಾತ, ಭಗೀರಥ, ಶ್ರೀರಾಮ, ಧರ್ಮರಾಜಾದಿ ಮಹಾರಾಜರ ವೃತಾಂತಗಳನ್ನು ತಿಳಿಸುವಿಕೆ.

(೬) ವೃತ್ತಿ:— ಆಯಾ ಕಾಲದಲ್ಲಿ ಜನರ ವ್ಯಾಪಾರ ಧರ್ಮಗಳು ಯಾವ ಬಗೆಯಲ್ಲಿದ್ದುವೆಂಬ ವಿವರವನ್ನು ತಿಳಿಸುವಿಕೆ.

[೭] ರಕ್ಷಾ:— ಚಕ್ರವರ್ತಿಗಳು, ಮಹಾರಾಜರು ಮುಂತಾದ ಪ್ರಜಾಪಾಲಕರು, ಪ್ರಜೆಗಳನ್ನು ಯಾವ ತೆರನಾಗಿ ಪರಿಪಾಲಿಸುತ್ತಿದ್ದರೆಂಬ ವೃತ್ತಾಂತವನ್ನು ತಿಳಿಸುವಿಕೆ.

[೮] ಸಂಸ್ಥಾ:— ಜನರ ಆಚಾರ ವ್ಯವಹಾರಗಳು, ಸಾಂಘಿಕ ಧರ್ಮಗಳು, ಸಂಸಾರಪದ್ಧತಿಗಳು, ಆಯಾ ಕಾಲದಲ್ಲಿ ಯಾವ ಬಗೆಯಲ್ಲಿದ್ದುವೆಂಬ ವಿವರವನ್ನು ತಿಳಿಸುವಿಕೆ.

[೯] ಹೇತುವು:— ಜನಾಂಗದಲ್ಲುಂಟಾಗತಕ್ಕ ವ್ಯವಹಾರಗಳನ್ನು ವಿಚಾರಿಸಿ ಪರಿಶೀಲಿಸುವುದರಲ್ಲಿ ಯಾವ ಯಾವ ಪದ್ಧತಿಗಳನ್ನು [ಕಾರ್ಯಕಾರಣಗಳನ್ನು] ಅನುಸರಿಸುತ್ತಿದ್ದರೆಂಬುದನ್ನು ತಿಳಿಸುವಿಕೆ.

[೧೦] ಅಪಾಶ್ರಯ:— ಯಾವ ಯಾವ ಮಹಾರಾಜರ ಕಾಲದಲ್ಲಿ ಜನರಿಗೆ ಯಾವ ಬಗೆಯಾದ ಆಶ್ರಯವಿದ್ದಿತೆಂಬುದು. ಅಂದರೆ, ಪಂಡಿತರಿಗೂ, ಅತಿಥಿ ಅಭ್ಯಾಗತಿಗಳಿಗೂ, ಸ್ತ್ರೀಯರಿಗೂ, ಜನಸಮೂಹದಲ್ಲಿ

ಯಾವ ಬಗೆಯಾದ ಗೌರವ ಪುರಸ್ಕಾರಗಳಿದ್ದುವೆಂಬ ವಿವರವನ್ನು ತಿಳಿಸುವಿಕೆ.

ಇಂತು ಹತ್ತು ಲಕ್ಷಣಗಳಿಂದೊಡಗೂಡಿದ ಗ್ರಂಥಗಳಿಗೆ ಪುರಾಣಗಳೆಂದು ಹೆಸರು. ವೇದಗಳನ್ನು ಅಧ್ಯಯನ ಮಾಡುವುದಕ್ಕೆ ಎಲ್ಲರಿಗೂ ಸಾಧ್ಯವಿಲ್ಲವಾಗಿ, ಬಹುಕಾಲ ಗುರುಕುಲವಾಸಮಾಡಿ, ವ್ಯಾಕರಣಾದಿ ಶಬ್ದ ಶಾಸ್ತ್ರಗಳನ್ನು ಚನ್ನಾಗಿ ಕಲಿತಹೊರತು, ವೇದಾಕ್ಷರವನ್ನು ಸಿದ್ಧಿಷ್ಟವಾಗಿ ಉಚ್ಚರಿಸಲಾಗವುದಿಲ್ಲ. ಹಾಗೆ ಬಹುಕಾಲ ವೇದವಿದ್ಯಾಭ್ಯಾಸ ಮಾಡುವುದಕ್ಕೆ ಎಲ್ಲರಿಗೂ ಅವಕಾಶವಿರುವುದಿಲ್ಲ. ಅಂಥವರಿಗೆ "ಧರ್ಮಾರ್ಥಕಾಮಮೋಕ್ಷಗಳೆಂಬ, ಚತುರ್ವಿಧ ಪುರುಷಾರ್ಥಗಳು ಸುಲಭವಾಗಿ ತಿಳಿಯುವುದಕ್ಕಾಗಿ ವೇದವ್ಯಾಸ ಮಹರ್ಷಿಗಳು "ಪುರಾಣಗಳನ್ನು" ವಿರಚಿಸಿದರು.

ಗರುಡ,ಗಂಧರ್ವ, ಕಿನ್ನರ, ಕಿಂಪುರುಷ, ಯಕ್ಷ,ರಾಕ್ಷಸ, ತಾರ್ಕ್ಷ್ಯ ನಾಗ, ನಭಶ್ಚರ, ವೈಮಾನಿಕ, ವೈತಾಳಿಕ, ಸುರ ನರಾದಿಗಳು ಯಾವ ಯಾವ ಸುಕರ್ಮಗಳಿಂದ ಏನೇನು ಸೌಖ್ಯಗಳನ್ನು ಹೊಂದಿದರೆಂಬುದನ್ನೂ ಯಾವ ಯಾವ ದುಷ್ಕರ್ಮಗಳಿಂದ ಏನೇನು ಕಷ್ಟಗಳನ್ನು ಹೊಂದಿದರೆಂಬುದನ್ನೂ, ಸ್ವರ್ಗನರಕಾದಿ ಪುಣ್ಯ ಪಾಪ ಫಲಾನುಭವ ಮಾರ್ಗಗಳನ್ನೂ, ಸಮಸ್ತ ಧರ್ಮಾಧರ್ಮಗಳ ತಾರತಮ್ಯಗಳನ್ನೂ, ತತ್ವಾರ್ಥ ರಹಸ್ಯಗಳನ್ನೂ, ಪುರಾಣಗಳಲ್ಲಿ ಕರತಲಾಮಲಕವಾಗಿ ಶ್ರೀವ್ಯಾಸಮಹರ್ಷಿಗಳು ವಿವರಿಸಿರುತ್ತಾರೆ.



## ಉಪ ಪುರಾಣಗಳು.

ಪೂರ್ವೋಕ್ತ ೧೮ ಪುರಾಣಗಳಿಗೆ ಸಂಬಂಧಿಸಿದ ಉಪ ಪುರಾಣಗಳು ಕೆಲವಿರುತ್ತವೆ. ಅವು ಯಾವೆಂದರೆ;— ಶಂಭುಪುರಾಣ, ಸನತ್ಕುಮಾರ ಪುರಾಣ, ಕಾಳೀಪುರಾಣ, ಉಶನಪುರಾಣ, ಸೌರಪುರಾಣ, ದೂರ್ವಾಸಪುರಾಣ, ನಾರದೀಯಪುರಾಣ, ನಾರಸಿಂಹಪುರಾಣ, ಆಂಗಿರಸಪುರಾಣ, ಭೃಗು, ಮರೀಚ, ಮಾನವ, ವಾಸಿಷ್ಠಾದಿ ೧೮ ಉಪಪುರಾಣಗಳೂ, ಮತ್ತೆ ಕೆಲವು ಸಂಹಿತಾರೂಪವಾದ ಪುರಾಣಗಳೂ ಇರುವುವು.

# ಇ ತಿ ಹಾ ಸ ಗ ಳು.

ರಾಮಾಯಣ, ಮಹಾಭಾರತಗಳೆಂಬ ಸದ್ಗ್ರಂಥಗಳಿಗೆ “ ಇತಿಹಾಸ ” ಗಳೆಂದು ಹೆಸರು.

“ ಬ್ರಾಹ್ಮಣಾನೀತಿಹಾಸಾನ್ ಪುರಾಣಾನಿಕಲ್ಪಾನ್‌ಗಾಥಾನಾರಾಶಂಸೀತಿ ”

ಎಂಬೀವಚನವನ್ನು ಆಧಾರವಾಗಿ ಹೇಳುತ್ತ ಕೆಲವುಮಂದಿ, ಇತಿಹಾಸಗಳಿಗೆ ಬೇರೊಂದು ವಿಧವಾದ ಅರ್ಥವನ್ನು ಮಾಡುತ್ತಾರೆ.—ಹೇಗೆಂದರೆ, ಐತರೇಯಬ್ರಾಹ್ಮಣ, ಶತಪಥಬ್ರಾಹ್ಮಣ, ಸಾಮಬ್ರಾಹ್ಮಣ, ಗೋಪಥಬ್ರಾಹ್ಮಣಗಳೆಂಬ, ಹೆಸರುಗಳಿಂದ ವೇದದಲ್ಲಿ ಅಂತರ್ಭೂತವಾಗಿರುವ ಬ್ರಾಹ್ಮಣಗ್ರಂಥಗಳಿಗೆ, ಇತಿಹಾಸಪುರಾಣಾದಿಗಳೆಂಬ ಹೆಸರುಗಳು ಸಲ್ಲತಕ್ಕದ್ದೆಂದು ವಾದಿಸುತ್ತಾರೆ. ಮತ್ತು, ಇತಿಹಾಸವೆಂದರೇ—ಜನಕ, ಯಾಜ್ಞವಲ್ಕ್ಯಸಂವಾದವೆಂತಲೂ, ಪುರಾಣವೆಂದರೇ ಪ್ರಪಂಚೋತ್ಪತ್ತಿ ಮುಂತಾದ ವರ್ಣನೆಯೆಂತಲೂ, ಕಲ್ಪವೆಂದರೇ ವೇದಶಬ್ದಾರ್ಥನಿರ್ಣಯಾದಿಗಳೆಂತಲೂ, ಗಾಥೆಯೆಂದರೇ ದೃಷ್ಟಾಂತ ದಾರ್ಷ್ಟಾಂತರೂಪಕವಾದ ಅರ್ಥನಿರೂಪಣವೆಂತಲೂ, ನಾರಾಶಂಸಿ ಯೆಂದರೇ ಮನುಷ್ಯರ ಯುಕ್ತಾಯುಕ್ತ ಕರ್ತವ್ಯನಿರೂಪಣವೆಂತಲೂ ಅರ್ಥವನ್ನು ಸೂಚಿಸುತ್ತಾರೆ. ಆದಾಗ್ಯೂ ಸರ್ವಸಮ್ಮತವಾಗಿಯೂ, ಪ್ರಪಂಚದಲ್ಲಿ ಎಲ್ಲೆಲ್ಲಿಯೂ ವ್ಯಾಪ್ತವಾಗಿಯೂ ಇರುವ, ರಾಮಾಯಣ, ಮಹಾಭಾರತ ಹರಿವಂಶಮುಂತಾದುವುಗಳಿಗೇ ಇತಿಹಾಸಗಳೆಂಬಹೆಸರು ನಿರಾಂತಕವಾಗಿ ಸಲ್ಲುತ್ತಿರುವುದರಿಂದ, ಇಲ್ಲಿ ಅವುಗಳನ್ನೇ ಇತಿಹಾಸಗಳೆಂದು ಬಣ್ಣಿಸಲಾಗಿರುತ್ತದೆ.

ಇತಿಹಾಸವೆಂದರೇನು ?—

ಶ್ಲೋ॥ ಧರ್ಮಾರ್ಥಕಾಮಮೋಕ್ಷಾಣಾಮುಪದೇಶಸಮನ್ವಿತಂ ।
ಪೂರ್ವವೃತ್ತಕಥಾಯುಕ್ತಮಿತಿಹಾಸಂಪ್ರಚಕ್ಷತೇ ॥

ಅಂದರೇ ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧಪುರುಷಾರ್ಥಗಳಿಂದಲೂ, ಪೂರ್ವವೃತ್ತಾಂತ ಕಥಾವಿಶೇಷಗಳಿಂದಲೂ, ಧರ್ಮೋಪದೇಶಗಳಿಂದಲೂ ಕೂಡಿರುವ ಗ್ರಂಥಕ್ಕೆ “ ಇತಿಹಾಸ ” ವೆಂದು ಹೆಸರು.

ಇತಿಹಾಸಗಳಲ್ಲಿ ಮೊದಲನೆಯದಾದ ರಾಮಾಯಣವನ್ನು ಕುರಿತು ವಿಚಾರಿಸೋಣ.



ಚಂ॥ ಜಯಜಯರಾಮಚಂದ್ರ ವಿಲಸತ್ಕಮಲಾಸನಕಂಜಭಾಸ್ಕರಾ ।
ಜಯಜಯರಾಘವೇಂದ್ರಮುನಿಚಂದ್ರ ಸಮರ್ಚಿತಪಾದ ಪಂಕಜಾ ॥
ಜಯಜಯಜಾನಕೀರಮಣಸಾರಸನೇತ್ರ ವಿಶಾಲಲೋಚನಾ ।
ಜಯಶಿವ ರಾ ಮ ದಾ ಸ ನು ತ ಸತ್ಕರುಣಾಕರ ಭಕ್ತಪಾಲಕಾ ॥

ಶ್ರೀರಾಮ ಕಥಾಸಂಗ್ರಹಃ— ಬ್ರಹ್ಮನ ವರದಿಂದ ಗರ್ವಿತರಾಗಿ, ಸುರಾಸುರರಾದಿಯರಾಗಿ ಯಾರಿಂದಲೂ ತಮಗೆ ಭೀತಿಯಿಲ್ಲವೆಂಬ ದುರಹಂಕಾರಪೂರಿತರಾಗಿ, ದೇವತೆಗಳನ್ನುಹಿಂಸಿಸುತ್ತಾ, ದೇವತಾ ಸ್ತ್ರೀಯರನ್ನು ಸೆರೆಹಿಡಿಯುತ್ತಾ, ಪರಮಸಾತ್ವಿಕರಾದ ಋಷಿಮುನಿಗಳನ್ನು ಪೀಡಿಸುತ್ತಾ, ಲೋಕಕಂಟಕರಾಗಿ ಚರಿಸುತ್ತಿದ್ದ ರಾವಣ ಕುಂಭಕರ್ಣಾದಿ ದುಷ್ಟರಾಕ್ಷಸರ ಬಾಧೆಗೆ ತಡೆಯಲಾರದೆ, ದೇವೇಂದ್ರಾದಿ ದೇವತೆಗಳು ಭಯಭ್ರಾಂತರಾಗಿ, ಕ್ಷೀರಸಾಗರಕ್ಕೆ ಹೋಗಿ ಮೊರೆಯಿಟ್ಟುಕೊಳ್ಳಲು, ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನು ಕನಿಕರದಿಂದ, ಅವರ ಪ್ರಾರ್ಥನೆಯನ್ನಂಗೀಕರಿಸಿ, ರಘುವಂಶದಲ್ಲಿ ಪ್ರಸಿದ್ಧನಾಗಿದ್ದ ದಶರಥಮಹಾರಾಯನಿಗೆ ಪುತ್ರನಾಗಿ ಅವತರಿಸಿ, ತಮ್ಮನಾದ ಲಕ್ಷ್ಮಣನ ಸಹಿತವಾಗಿ ಬಾಲ್ಯದಲ್ಲಿಯೇ ವಿಶ್ವಾಮಿತ್ರನೊಂದಿಗೆ ಕಾಡಿಗೆ ಹೋಗಿ, ಅರಣ್ಯದಲ್ಲಿ ಋಷಿಗಳ ಯಾಗಯಜ್ಞಗಳನ್ನು ಭಂಗಪಡಿಸುತ್ತಿದ್ದ ತಾಟಕಿ ಯೆಂಬ ದುಷ್ಟ ದನುಜಳನ್ನು ಸಂಹರಿಸಿ, ಮಾರೀಚನನ್ನು ಸಮುದ್ರದಲ್ಲಿ ಕೆಡಹಿ, ಸುಬಾಹುವನ್ನು ಕೊಂದು, ಹದ್ದುಮೀರಿ ಬಂದ ಕ್ಷುದ್ರ ರಕ್ಕಸರ ಸೊಕ್ಕಡಗಿಸಿ, ವಿಶ್ವಾಮಿತ್ರನೊಂದಿಗೆ ಮಿಥಿಲಾಪುರಕ್ಕೆ ಪ್ರಯಾಣಮಾಡಿ, ದಾರಿಯಲ್ಲಿ-ಪಾಷಾಣವಾಗಿ ಬಿದ್ದಿದ್ದ ಅಹಲ್ಯೆಗೆ ತನ್ನಪಾದಧೂಳಿಯನ್ನು ಸೋಕಿಸಿ ಶಾಪವಿಮೋಚನವಂಗೈದು, ಗುಹನ ಸತ್ಕಾರವಂ ಪಡೆದು, ಜನಕನ ಸಭೆಯನ್ನಲಂಕರಿಸಿ, ದುರ್ಭೇದ್ಯವಾದ ಶಿವಧನುಸ್ಸನ್ನು ಲೀಲಾಮಾತ್ರವಾಗಿ ಭಂಗಪಡಿಸಿ, ಲೋಕಪಾವನಜಾತೆಯೂ, ಜಗನ್ಮಾತೆಯೂಆದ ಸೀತಾದೇವಿಯನ್ನು ವರಿಸಿ, ಭಾರ್ಗವರಾಮನ ಗರ್ವವನ್ನುಮುರಿದು, ಸಾಕೇತಪುರಕ್ಕೈತಂದು, ಕೈಕಾದೇವಿಯ ಹಠವನ್ನರಿತು, ಮುನಿವೇಷವನ್ನುಧರಿಸಿ, ಪಿತೃವಾಕ್ಯ ಪರಿಪಾಲನಾರ್ಥವಾಗಿ ಸೀತಾ ಲಕ್ಷ್ಮಣರೊಂದಿಗೆ ಘೋರಾರಣ್ಯಕ್ಕೆ ಹೊರಟು, ಗುಹನ ಪೂಜೆಯನ್ನುಸ್ವೀಕರಿಸಿ, ವಿರಾಧ ಕಬಂಧಾದಿಗಳ ಶಾಪವಿಮೋಚನವಂಗೈದು, ಕಾಕಾಸುರನ ಗರ್ವವನ್ನಡಗಿಸಿ, ಚಿತ್ರಕೂಟವನ್ನು ಪ್ರವೇಶಿಸಿ, ಶೂರ್ಪಣಖಿಯ ಕಿವಿಮೂಗುಗಳನ್ನು ಕತ್ತರಿಸಿ, ಮದೋನ್ಮತ್ತರಾದ ಖರದೂಷಣಾದಿ ಹದಿನಾಲ್ಕು ಸಾವಿರಮಂದಿ ಕಟುಕರಕ್ಕಸರನ್ನು ಸಂಹಾರಮಾಡಿ, ನಿರ್ವ್ಯಾಕ್ರ ಪರಾಕ್ರಮನಾಗಿ, ಮಾಯಾಮೃಗವನ್ನು ಸಂಹ

ರಿಸಿ, ಸೀತಾನ್ವೇಷಣ ಮಾಡುತ್ತಾ, ಲಕ್ಷ್ಮಣನೊಂದಿಗೆ ಕಾಂತಾರದಲ್ಲಿ ಸಂಚರಿಸಿ, ರಾವಣನ ವೃತ್ತಾಂತವನ್ನರುಹಿದ ಜಟಾಯುವಿಗೆ ಸದ್ಗತಿಯನ್ನಿತ್ತು, ಶಬರಿಯೆಂಬ ಭಕ್ತಳು ಕೊಟ್ಟ ಫಲ ತೀರ್ಥಗಳನ್ನು ಪರಮವಿಶ್ವಾಸದಿಂದ ಭುಂಜಿಸಿ, ಆಕೆಯನ್ನಾದರಿಸಿ, ಪಂಪಾಸರೋವರದ ಬಳಿಗೆತೆರಳಿ, ವೀರಾಧಿ ವೀರನಾದ ಹನಮಂತನ ಪರಿಚಯವನ್ನು ಹೊಂದಿ, ಸುಗ್ರೀವನ ಸ್ನೇಹವನ್ನು ಗಳಿಸಿ, ದುಂದುಭಿಯ ಕಳೇಬರವನ್ನು ಪಾದಾಂಗುಷ್ಟದಿಂದ ಬಹು ದೂರಕ್ಕೆಸೆದು, ಸಪ್ತತಾಳಗಳನೊಂದೇ ಬಾಣದಿಂದ ಖಂಡಿಸಿ, ವಾಲಿಯನ್ನೊಂದುಕೋಲಿನಿಂದಲೇ ಕೂಲಿಸಿ, ಸೀತಾನ್ವೇಷಣಾರ್ಥವಾಗಿ ಕಪಿಸೇನೆಗಳನ್ನು ಚತುರ್ದಿಶೆಗಳಿಗೂ ಪ್ರಯಾಣಮಾಡಿಸಿ, ಆಂಜನೇಯನ ಕೈಯಲ್ಲಿ ಮುದ್ರಿಕೆಯನ್ನಿತ್ತು ಕಳುಹಿಸಿ, ಅನುಜನೊಂದಿಗೆ ಋಷ್ಯಮೂಕದಲ್ಲಿ ನಿಂತನು. ಹನುಮಂತನು ಅಪಾರವಾದ ಸಮುದ್ರವನ್ನು ಅವಲೀಲೆಯಾಗಿ ಲಂಘಿಸಿ, ಲಂಕಿಣಿಯನ್ನು ಸಂಹರಿಸಿ, ಲಂಕಾಪಟ್ಟಣವನ್ನೆಲ್ಲಾ ಹುಡುಕಿ, ಅಶೋಕವನದಲ್ಲಿ ಜಗನ್ಮಾತೆಯಾದ ಸೀತೆಯನ್ನು ಸಂದರ್ಶಿಸಿ, ಸಾಷ್ಟಾಂಗ ದಂಡಪ್ರಣಾಮಗಳನ್ನಾಚರಿಸಿ, ರಾಮನ ಕ್ಷೇಮವನ್ನರುಹಿ, ಮುದ್ರಿಕೆಯನ್ನಿತ್ತು, ಚೂಡಾಮಣಿಯನ್ನು ಪರಿಗ್ರಹಿಸಿ, ಆಕೆ ಹೇಳಿದ ಸಂದೇಶವನ್ನು ಕೇಳಿ, ವನವನ್ನು ಧ್ವಂಸಮಾಡಿ, ಅಕ್ಷಕುಮಾರಾದಿ ರಾಕ್ಷಸರನ್ನು ಕೊಂದು, ರಾವಣನ ಗರ್ವವನ್ನು ಭಂಗಪಡಿಸಿ, ಮರಳಿ ತೆರಳಿ, ಸೀತೆ ಇತ್ತ ಚೂಡಾಮಣಿಯನ್ನೂ, ಸಂದೇಶವನ್ನೂ ಶ್ರೀರಾಮನಿಗೆ ಸಮರ್ಪಿಸಿದನು. ಶ್ರೀರಾಮನವುಗಳನ್ನು ಪರಿಗ್ರಹಿಸಿ, ಆನಂದಿಸಿ, ವಿಷಾದಿಸಿ, ಪುನರುತ್ಸಾಹವನ್ನಾಂತು, ವಾನರ ವೀರರನ್ನೆಲ್ಲಾ ಸೇರಿಸಿ, ಸಮುದ್ರದ ಬಳಿಗೆ ಹೋಗಿ, ಸಾಗರನ ಗರ್ವವನ್ನು ಭಂಗಪಡಿಸಿ, ಸೇತುವೆಯನ್ನು ಕಟ್ಟಿಸಿ, ಶರಣಾಗತನಾದ ವಿಭೀಷಣನಿಗೆ ಅಭಯಪ್ರದಾನವನ್ನು ಮಾಡಿ, ಸುವೇಲಾದ್ರಿಯಲ್ಲಿ ಸೈನ್ಯವನ್ನು ಸಿಲ್ಲಿಸಿ, ಲಂಕೆಯನ್ನು ಮುತ್ತಿಗೆ ಹಾಕಿ, ಇಂದ್ರಜಿದ್ರಾವಣಕುಂಭಕರ್ಣಾದಿ ಲೋಕಕಂಟಕರನ್ನು ಸಂಹರಿಸಿ, ಅಗ್ನಿಪೂತೆಯಾದ ಸೀತೆಯನ್ನು ಪರಿಗ್ರಹಿಸಿ, ಮೃತವಾನರರಿಗೆಲ್ಲಾ ಪುನರ್ಜೀವಗಳನ್ನಿತ್ತು, ಸಪರಿವಾರನಾಗಿ, ಪುಷ್ಪಕ ವಿಮಾನವನ್ನಧಿರೋಹಿಸಿ, ಸಾಕೇತ (ಅಯೋಧ್ಯಾ) ಪುರಕ್ಕೈತಂದು, ಭರತನ ವ್ರತವನ್ನು ಸಫಲಗೊಳಿ

ಸಿ, ಶತ್ರುಘ್ನನನ್ನು ಲಾಲಿಸಿ, ಜನನಿಯರನ್ನು ಸತ್ಕರಿಸಿ, ಮುನಿಜನರನ್ನು ಗೌರವಿಸಿ, ಪರಮಾನಂದದಿಂದ ರಾಜ್ಯಾಭಿಷಿಕ್ತನಾಗಿ, ಸಿಂಹಾಸನವನ್ನಧಿಷ್ಠಿಸಿ, ಪ್ರಜಾರಂಜಕನಾಗಿ, ಪರಮ ಧರ್ಮದಿಂದ ರಾಜ್ಯಪರಿಪಾಲನ ಮಾಡಿ, "ರಾಮರಾಜ್ಯ" ವೆಂಬ ಕೀರ್ತಿಯನ್ನು ಪಡೆದು, ಆಶ್ರಿತರಿಗೆಲ್ಲಾ ಸದ್ಗತಿಗಳನ್ನನುಗ್ರಹಿಸಿದ ಜಗದೇಕ ಸಾರ್ವಭೌಮನೂ, ಭಕ್ತವತ್ಸಲನೂ, ಭವಬಂಧಮೋಚನನೂ, ಸಕಲ ಕಲ್ಯಾಣಗುಣಾಭರಣನೂ, ಪತಿತಪಾವನನೂ, ಪ್ರಣತಾರ್ತಿಹರನೂ, ಪರಮಾನಂದ ಪರಿಪೂರ್ಣನೂ ಆದ ಶ್ರೀ ಸೀತಾರಾಮನ ದಿವ್ಯ ಚರಣಾರವಿಂದ ಮಕರಂದವನ್ನು ಪರಮ ತಪೋಧನರಾದ ಯೋಗೀಂದ್ರರು ಸದಾನಂದರಾಗಿ ಪಾನಮಾಡುತ್ತಿರುವಲ್ಲಿ, ಆ ಪರಂಧಾಮನ ಜಗನ್ಮಂಗಳಾಕಾರವನ್ನು ಪಟಗಳಲ್ಲಿಯಾದರೂ ನೋಡಿ ಪೂಜಿಸದವರ ಜನ್ಮಗಳು ವ್ಯರ್ಥವಲ್ಲವೆ? ಸಾಧುಜನರೇ! ಸಾವಧಾನವಾಗಿ ಯೋಚಿಸಿನೋಡಿರಿ!! ಶ್ರೀರಾಮನಾಟಕ ವನ್ನಾಡಿರಿ!!! ಎಂದು ಜ್ಞಾನಿಗಳು ಅಪ್ಪಣೆ ಕೊಡಿಸಿರುತ್ತಾರೆ.



## ರಾಮಾಯಣ ಧರ್ಮನೀತಿ.

ಕಲ್ಪವೃಕ್ಷದಂತೆ ಪ್ರಕಾಶಮಾನವಾಗಿರುವ ಶ್ರೀರಾಮನ ದಿವ್ಯ ಚಾರಿತ್ರವಾದ "ರಾಮಾಯಣ" ವನ್ನು ಪಾರಾಯಣ ಮಾಡುವ ಮಹಾತ್ಮರು "ಸೀತಾರಾಮರ" ಕಥಾಮೃತಪಾನದಿಂದ ನಿರ್ಮಲರಾಗುತ್ತಾರೆ. ಪುರಾಣದಂಪತಿಗಳೂ, ಜಗನ್ಮಂಗಳಕರರೂ, ಪೂಜಾರ್ಹರೂ, ಸರ್ವಸುಲಭರೂ, ಆದ ಶ್ರೀ ಸೀತಾರಾಮರ ಚಾರಿತ್ರವು, ಜ್ಞಾನಿಗಳಿಗೆ ಮಾತ್ರವೇ ಅಲ್ಲದೆ ವಿಷಯಬದ್ಧರಾದ ಸಂಸಾರಿಗಳಿಗೂ ಅಪಾರ ಶುಭಸಂದಾಯಕವಾದುದಾಗಿದೆ.

ಶ್ರೀರಾಮನ ಪಿತೃವಾಕ್ಯಪರಿಪಾಲನವನ್ನು, ಲೋಕಮಾತೆಯಾದ ಸೀತೆಯ ಪಾತಿವ್ರತ್ಯವನ್ನು, ಲಕ್ಷ್ಮಣನ ಭ್ರಾತೃತ್ವವನ್ನು, ಸುಮಿತ್ರೆಯ ಸೌಜನ್ಯತೆಯನ್ನು, ಕೌಸಲ್ಯಾದೇವಿಯ ಪುತ್ರವಾತ್ಸಲ್ಯತೆಯನ್ನು, ದಶರಥ ಮರಣಕ್ಲೇಶವನ್ನು, ಕೈಕೆಯೀರಿದ ಕಾಪಟ್ಯವನ್ನು, ಮಂತ್ರಿಗಳ ತಂತ್ರವನ್ನು, ಗುಹನ ಮಿತ್ರಭಾವವನ್ನು, ಭರತ ಶತ್ರುಘ್ನರ ನಿಸ್ಪೃಹತೆಯನ್ನು,

ಮುನಿಗಳ ಘನತೆಯನ್ನು, ಮುನಿಸತಿಯರ ಘನಸತೀತ್ವವನ್ನು, ರಕ್ಕಸರ ವಕ್ರತೆಯನ್ನು, ಶಬರಿಯ ಪ್ರೇಮವನ್ನು, ಹನುಮಂತನ ಸ್ವಾಮಿ ಭಕ್ತಿಯನ್ನು, ಸುಗ್ರೀವನ ಸಖ್ಯಧರ್ಮವನ್ನು, ವಿಭೀಷಣನ ಶರಣಾಗತ ವೈಭವವನ್ನು, ದುಷ್ಟಶಿಕ್ಷಣವನ್ನು, ಶಿಷ್ಟರಕ್ಷಣವನ್ನು, ಸಹಸ್ರ ಮುಖದಿಂದಭಿವರ್ಣಿಸುತ್ತ, ಲೋಕಕ್ಕೆ ಸಾಂಘಿಕ, ನೈತಿಕ, ಧಾರ್ಮಿಕ ಮಾರ್ಗಗಳನ್ನು ಬೋಧಿಸುತ್ತಿರುವ ಸೀತಾರಾಮರ ಜನ್ಮಂಗಳ ಕಥಾಮೃತಪಾನಮಾಡಿದವರ ಜನ್ಮವು ಸಾರ್ಥಕವಾದುದು. ಸಾಧುಜನರೆ ! ಶ್ರೀರಾಮಮಂತ್ರೋಪಾಸನೆಯಂ ಮಾಡುತ, ಶ್ರೀರಾಮಭಕ್ತರೊಡನೆ ಸೇರಿಯಾಡುತ, ಶ್ರೀರಾಮಕೀರ್ತನೆಗಳಂ ಪಾಡುತ ; ಶ್ರೀರಾಮನನ್ನು ಸರ್ವಭೂತಗಳಲ್ಲಿಯೂ ನೋಡುತ, ಶ್ರೀರಾಮ ತತ್ವಾಮೃತವಂ ಪಾನಮಾಡುತ, ಶ್ರೀ ಕೈವಲ್ಯಪದವಿಯನ್ನು ಸೂರೆಮಾಡುತಲಿರುವ ; ಶ್ರೀರಾಮಭಕ್ತರಭಾಗ್ಯಕ್ಕಿಂತಲೂ, ಉತ್ತಮವಾದ ಸೌಭಾಗ್ಯವು ಮತ್ತಾವುದೂ ಇಲ್ಲವು.



## ಮಂಗಳಗೀತ.

ರಾಗ—ಶಂಕರಾಭರಣ—ಅಟತಾಳ.

ಜಯಮಂಗಳವಾಗಲಿ ! ॥ ಪಲ್ಲವಿ ॥ ಲೋಕಕ್ಕೆಲ್ಲಾ ಶುಭಮಂಗಳವಾಗಲಿ !! ॥ ಅನುಪಲ್ಲವಿ ॥

(೧) ಕಾಮಿತಾರ್ಥಪ್ರದಾಯಕನು ಸುಕ್ಷೇಮವೀಯಲಿ ಸರ್ವಜನರಿಗೆ । ನ್ಯಾಯಮಾರ್ಗದಿಭೂಪತಿಗಳೀಭೂಮಿಯನು ಪರಿಪಾಲಿಸಲಿ ॥ ಬಹುಜಯಮಂಗಳವಾಗಲಿ ॥

(೨) ಭರತಖಗೋಭೂಸುರರಿಗುಂ, ಈ ಧರೆಯೊಳೆಲ್ಲಾ ಜನರಿಗುಂ । ವರಶುಭಗಳು ಸಿದ್ಧಿಸಲಿ ಪರಿಪೂರ್ಣಸುಖಸಂತೋಷವಾಗಲಿ! ॥ಜಯ॥

(೩) ಕಾಲಕಾಲಕೆ ವರ್ಷವಾಗಲಿ ಭೂಮಿಪೈರುಗಳಿಂದ ಮೆರೆಯಲಿ। ದೇಶವೆಲ್ಲ ಸುಭಿಕ್ಷವಾಗಲಿ ಸಜ್ಜನರು ನಿರ್ಭಯದಿಬಾಳಲಿ ! ॥ ಜಯ ॥

(೪) ಪುತ್ರರಾಗಲಿ ಪೌತ್ರರಾಗಲಿ ಶತ್ರು ಋಣರೋಗಗಳುಸೀಗಲಿ । ಧನವಿಹೀನರು ಧನಿಕರಾಗಲಿ ಮುದದಿಶತವರ್ಷಗಳುಬಾಳಲಿ ! ॥ಜಯ॥

ತತ್ಸತ್ !!!

# ಸೂರ್ಯವಂಶವೃಕ್ಷ.

- ಪರಬ್ರಹ್ಮ
  - ಬ್ರಹ್ಮ
    - ಮರೀಚಿ
      - ಕಶ್ಯಪ
        - ಸೂರ್ಯ
          - ವೈವಸ್ವತಮನು
            - ಇಕ್ಷ್ವಾಕು
              - ಕುಕ್ಷಿ
                - ವಿಕುಕ್ಷಿ
                  - ಅಕ್ಷರಾತ್ಮ
                    - ಬಾಣ
                      - ಅನರಣ್ಯ
                        - ಪೃಥು
                          - ತ್ರಿಶಂಕು
                            - ಹರಿಶ್ಚಂದ್ರ
                              - ಮಾಂಧಾತ
                                - ಸಗರ
                                  - ಭಗೀರಥ
                                    - ದಿಲೀಪ
                                      - ರಘು
                                        - ಅಜ
                                          - ದಶರಥ
                                            - ಶ್ರೀರಾಮ
                                            - ಭರತ
                                            - ಲಕ್ಷ್ಮಣ
                                            - ಶತ್ರುಘ್ನ.
              - ನಿಮಿ
                - ವಿದೇಹ
                  - ಧರ್ಮಧ್ವಜ
                    - ಜನಕ
                      - ಜನಕಪುತ್ರಿ, ಸೀತೆ
    - ಪುಲಸ್ತ್ಯ
      - ಅಗಸ್ತ್ಯ
      - ವಿಶ್ರವಸು
        - ವಿಶ್ರವಸುನ ಪ್ರಥಮ ಭಾರ್ಯೆ ಇಲಬಿಲೆಗೆ
          - ಕುಬೇರ
        - ದ್ವಿತೀಯಭಾರ್ಯೆ ಕೈಕಸೆಗೆ
          - ದಶಕಂಠ (ರಾವಣ)
          - ಕುಂಭಕರ್ಣ
          - ವಿಭೀಷಣ
          - ಶೂರ್ಪಣಖಿ
        - ತೃತೀಯ ಭಾರ್ಯೆರಾಕೆಗೆ
          - ಖರದೂಷಣಾದಿಗಳು

—❁—

ಮೇಲೆ ಸೂಚಿಸಿರುವ ವಂಶವೃಕ್ಷದಲ್ಲಿ ಸುಪ್ರಸಿದ್ಧರಾದ ಕೆಲವುಮಂದಿ ರಾಜರ ಹೆಸರುಗಳು ಮಾತ್ರವೇ ವಿವರಿಸಲ್ಪಟ್ಟಿರುತ್ತವೆ. ಸೂರ್ಯವಂಶದಲ್ಲಿ ಹುಟ್ಟಿ ರಾಜ್ಯ ಪರಿಪಾಲನೆಗೈದು ಕೀರ್ತಿಶೇಷರಾದ ಮತ್ತೆ ಕೆಲವು ಮಂದಿ ರಾಜರ ಹೆಸರುಗಳನ್ನು ಇಲ್ಲಿ ಸಂಗ್ರಹಿಸುತ್ತೇನೆ.

ಪರಬ್ರಹ್ಮನಿಗೆ ಬ್ರಹ್ಮನು, ಬ್ರಹ್ಮನಿಗೆ ಮರೀಚಿ, ಮರೀಚಿಗೆ ಕಶ್ಯಪನು, ಕಶ್ಯಪನಿಗೆ ಸೂರ್ಯನು, ಸೂರ್ಯನಿಗೆ ಮನುವು, ಮನುವಿಗೆ ಇಕ್ಷ್ವಾಕು, ಇಕ್ಷ್ವಾಕುವಿಗೆ ಕುಕ್ಷಿ, ಕುಕ್ಷಿಗೆ ವಿಕುಕ್ಷಿ, ವಿಕುಕ್ಷಿಗೆ ಅಕ್ಷರಾತ್ಮನು, ಆತನಿಗೆ ಬಾಣನು, ಬಾಣನಿಗೆ ಅನರಣ್ಯನು, ಅನರಣ್ಯನಿಗೆ ಪೃಥು, ಪೃಥುವಿಗೆ ತ್ರಿಶಂಕುವು, ತ್ರಿಶಂಕುವಿಗೆ ಹರಿಶ್ಚಂದ್ರನು, ಹರಿಶ್ಚಂದ್ರನಿಗೆ ರೋಹಿತನು, ಜನಿಸಿದರು. ತದನಂತರ ಸೂರ್ಯವಂಶದಲ್ಲಿ—ಧುಂಧುಮಾರನು, ಯುವನಾಶ್ವನು, ಸುಸಂಧಿ, ಧ್ರುವಸಂಧಿ, ಅಸಿತ, ಸಗರ, ಅಸಮಂಜಸ, ಅಂಶುಮಂತ, ಭಗೀರಥ, ದಿಲೀಪ, ಕುಕುತ್ಸ, ರಘು, ಮರು, ಅಜರೀಷ, ನಹುಷ, ಯಯಾತಿ, ನಾಭಾಗ, ಅಜ, ದಶರಥ ಮುಂತಾದವರು ಹುಟ್ಟಿದರು. ಇಕ್ಷ್ವಾಕು ಮಹಾರಾಯನ ಸಂತತಿಯಲ್ಲಿ ಸಾಪತ್ನೀಧರ್ಮದಿಂದ ಹುಟ್ಟಿದ ಕೆಲವುಮಂದಿ ರಾಜರ ಹೆಸರುಗಳನ್ನಿಲ್ಲಿ ವಿವರಿಸುತ್ತೇನೆ. ವಿಶಾಲ, ಧೂಮ್ರಾಶ್ವ, ಕುಶಾಶ್ವ, ಸೋಮದತ್ತ, ಸುಮತಿ, ಋತುಪರ್ಣ, ಖಟ್ವಾಂಗ, ಮುಂತಾದವರು ಹುಟ್ಟಿ ಕೆಲಕಾಲ ರಾಜ್ಯಭಾರಮಾಡುತ್ತಿದ್ದರು.

ರಘುವಂಶದಲ್ಲಿ ಹುಟ್ಟಿ ಮಹಾಪರಾಪರಾಕ್ರಮದಿಂದ ಅರವತ್ತು ಸಾವಿರ ವರ್ಷಗಳು ರಾಜ್ಯಭಾರಮಾಡಿದ “ ದಶರಥಮಹಾರಾಯ ” ನಿಗೆ, ವೈಕುಂಠಪತಿಯಾದ ಶ್ರೀಮನ್ನಾರಾಯಣನ ಅವತಾರವಾಗಿ, ಶ್ರೀರಾಮಚಂದ್ರನು ಅವತರಿಸಿದನು. ಶ್ರೀರಾಮನ ಚರಿತ್ರೆಯಾದ “ ರಾಮಾಯಣ ಕಥಾಸಂಗ್ರಹ ” ವನ್ನು ಈ ವರೆಗೆ, ತಿಳಿಸಲಾಯಿತಲ್ಲವೆ !

ನವರಸಾಲಂಕಾರ ಭರಿತವಾದ “ ಶ್ರೀ ರಾಮಾಯಣವನ್ನು ” ಅಧ್ಯಾತ್ಮ ತತ್ವವಿಶಾರದರಾದ ಬ್ರಹ್ಮವೇತ್ತರು ಯಾವ ತೆರನಾಗಿ ತಮ್ಮಲ್ಲಿ ಅನುಸಂಧಿಸಿ, ಅನುಭವಿಸಿ, ಆನಂದಿಸುವರೋ, ಆ ವಿವರವನ್ನಿಲ್ಲಿ ಬಿಕ್ಕಣಿಸುತ್ತೇನೆ.

## ಅಧ್ಯಾತ್ಮ ರಾಮಾಯಣ.

ಆನಂದಪರಿಪೂರ್ಣವಾದ " ಮೋಕ್ಷ " ವೆಂಬ ಅಯೋಧ್ಯಾಪಟ್ಟಣದಲ್ಲಿ ಪರಬ್ರಹ್ಮವೆಂಬ ದಶರಥನಿರುವನು. ಆತನಿಗೆ ಜ್ಞಾನಶಕ್ತಿ, ಇಚ್ಛಾಶಕ್ತಿ, ಕ್ರಿಯಾಶಕ್ತಿಗಳಾದ, ಕೌಸಲ್ಯಾ, ಸುಮಿತ್ರಾ, ಕೈಕಾದೇವಿಯರೆಂಬ ಮೂವರು ಪತ್ನಿಯರು. ಆ ಮೂರು ಮಂದಿಯಲ್ಲಿ ಜ್ಞಾನಶಕ್ತಿಯೆಂಬ ಕೌಸಲ್ಯಾದೇವಿಯ ಗರ್ಭದಲ್ಲಿ ಆತ್ಮನೆಂಬ ಶ್ರೀರಾಮನೂ, ಇಚ್ಛಾಶಕ್ತಿಯೆಂಬ ಸುಮಿತ್ರೆಗೆ ವೈರಾಗ್ಯ ಭಕ್ತಿಗಳೆಂಬ ಲಕ್ಷ್ಮಣ ಶತ್ರುಘ್ನರೂ, ಕ್ರಿಯಾಶಕ್ತಿಯೆಂಬ ಕೈಕೇಗೆ ನಿಸ್ಪೃಹತ್ವವೆಂಬ ಭರತನೂ ಅವತರಿಸಿದರು. ಆತ್ಮನೆಂಬ ಶ್ರೀರಾಮನು ಅವ್ಯಕ್ತವೆಂಬ ಬಾಲ್ಯಾವಸ್ಥೆಯಲ್ಲಿ, ಸ್ವಸ್ವರೂಪವಿಚಾರವೆಂಬ ಜ್ಞಾನವನ್ನುಮರೆತು, ಅಜ್ಞಾನಮಯವಾದ ಜೀವಾತ್ಮನೇ ತಾನೆಂಬ ಭ್ರಾಂತಿಯಿಂದ, ದೇಹೇಂದ್ರಿಯಾದಿ ಪ್ರಪಂಚಾಭಿಮಾನಕ್ಕೆ ಸಿಲುಕಿ, ಶ್ರವಣವೆಂಬ ವಸಿಷ್ಠನ ಉಪದೇಶವನ್ನು ಹೊಂದಿ, ವೈರಾಗ್ಯವೆಂಬ ಲಕ್ಷ್ಮಣನೊಡಗೂಡಿ, ಮನನವೆಂಬ ವಿಶ್ವಾಮಿತ್ರನೊಂದಿಗೆ ಹೊರಟು, ಸಾಧನಸಂಪತ್ತಿಯೆಂಬ ಬಲಾತಿಬಲ ಬಾಣವಿದ್ಯೆಯನ್ನು ಕಲಿತು, ಪಂಚಮಹಾಪಾತಕಗಳೆಂಬ ಪರ್ವತಗಳನ್ನು ದಾಟಿ, ಜ್ಞಾನವೆಂಬ ತೀಕ್ಷ್ಣಬಾಣದಿಂದ ಆವರಣವೆಂಬ ತಾಟಕಿಯನ್ನುಕೊಂದು, ವಿಕಾರವೆಂಬ ಸುಬಾಹು ಮುಂತಾದ ರಾಕ್ಷಸರನ್ನುಸಂಹರಿಸಿ, ಇಚ್ಛೆಯೆಂಬ ಮಾರೀಚನನ್ನು ಸಮುದ್ರದಲ್ಲಿ ಕೆಡಹಿ, ದುರಾಚಾರವೆಂಬ ಶಿಲೆಯನ್ನು ಕಾಲಿನಿಂದ ಒದೆದು ಸದಾಚಾರನೆಂಬ ಅಹಲ್ಯೆಯನ್ನು ಕಟಾಕ್ಷಿಸಿ, ಏಕಾಂತವೆಂಬ ಮಿಥಿಲಾನಗರವನ್ನು ಪ್ರವೇಶಿಸಿ, ಶಾಂತವೆಂಬ ಜನಕರಾಯನನ್ನುಸಂದರ್ಶಿಸಿ, ಅಸೂಯೆಯೆಂಬ ಶಿವಧನುಸ್ಸನ್ನು ಮುರಿದು, ಆನಂದನೆಂಬ ಸೀತೆಯನ್ನು ಕೈಪಿಡಿದು, ಮದವೆಂಬ ಪರಶುರಾಮನನ್ನು ಭಂಗಪಡಿಸಿ, ಮೋಕ್ಷವೆಂಬ ಅಯೋಧ್ಯೆಗೆಬಂದು, ಆತ್ಮ ಸಾಮ್ರಾಜ್ಯವೆಂಬ ಪಟ್ಟಾಭಿಷೇಕವನ್ನು ಹೊಂದುವುದಕ್ಕೆ ಸಿದ್ಧನಾಗಿ, ಕ್ರಿಯಾಶಕ್ತಿಯೆಂಬ ಕೈಕೆ ತಾದೊಡ್ಡಿದ ಚಾಂಚಲ್ಯವೆಂಬ ವಿಘ್ನವು ಸಂಭವಿಸಲಾಗಿ, ಬ್ರಹ್ಮವೆಂಬ ದಶರಥನನ್ನಗಲಿ, ಮೋಕ್ಷವೆಂಬ ಅಯೋಧ್ಯೆಯನ್ನು ಬಿಟ್ಟು, ಆನಂದ ವೈರಾಗ್ಯಗಳೆಂಬ ಸೀತಾಲಕ್ಷ್ಮಣರೊಂದಿಗೆ ಹೊರಟು, ಚಿತ್ತವೆಂಬ ಸರಯೂನದಿಯನ್ನುದಾ

ಟ, ಬುದ್ಧಿಯೆಂಬ ಗುಹನಿಂದ ಸತ್ಕಾರವನ್ನು ಪಡೆದು, ನಿಕ್ಷೇಪನೆಂಬ ಮಹಾರಣ್ಯವನ್ನು ಪ್ರವೇಶಿಸಿ, ತಪಸ್ಸೆಂಬ ಚಿತ್ರಕೂಟದಲ್ಲಿನಿಂತು, ಅಹಂಕಾರನೆಂಬ ವಿರಾಧನನ್ನುಕೊಂದು, ಮನಸ್ಸೆಂಬ ಕಾಕಾಸುರನನ್ನುಹಿಡಿದು, ಸಂಕಲ್ಪನೆಂಬ ಕಣ್ಣನ್ನು ಚುಚ್ಚಿ, ನಿರ್ವಿಕಲ್ಪವೆಂಬ ನೇತ್ರವನ್ನು ದಯಪಾಲಿಸಿ, ವೀರ್ಯವೆಂಬ ಅಗಸ್ತ್ಯನನ್ನಾಶ್ರಯಿಸಿ, ಧೈರ್ಯವೆಂಬ ಅಸ್ತ್ರವನ್ನು ಪರಿಗ್ರಹಿಸಿ, ಕಾಮವೆಂಬ ಶೂರ್ಪಣಖಿಯನ್ನು ವಿರೂಪಗೊಳಿಸಿ, ಆಗಾಮಿಕರ್ಮಗಳೆಂಬ ಖರದೂಷಣಾದಿಗಳನ್ನುಕೊಂದು, ಇಚ್ಛೆಯೆಂಬಮಾರೀಚನ ವಂಚನೆಯಿಂದ, ವೈರಾಗ್ಯವೆಂಬ ಲಕ್ಷ್ಮಣನನ್ನುಬಿಟ್ಟು ಪೋಗಲಾಗಿ, ರಾಜಸವೆಂಬ ರಾವಣಾಸುರನು, ದಂಭನೆಂಬ ಸನ್ಯಾಸಿವೇಷವನ್ನು ಧರಿಸಿಬಂದು, ಆನಂದವೆಂಬ ಸೀತೆಯನ್ನುಸಹರಿಸಿಕೊಂಡು ಪೋಗಲಾಗಿ, ಆತ್ಮನೆಂಬ ರಾಮನು ಇಚ್ಛೆಯೆಂಬ ಮಾರೀಚನನ್ನು ಸಂಹರಿಸಿಬಂದು, ಆನಂದವೆಂಬ ಸೀತೆಯನ್ನುಕಾಣದೆ, ಅಮೋಘವಿಚಾರವೆಂಬ ಚಿಂತೆಗೀಡಾಗಿ, ವಿಕ್ಷೇಪವೆಂಬ ಕೀಕಾರಣ್ಯದಲ್ಲಿ ವೈರಾಗ್ಯವೆಂಬ ಲಕ್ಷ್ಮಣನೊಂದಿಗೆ ಸ್ವೇಚ್ಛೆಯಾಗಿ ಸಂಚರಿಸುತ್ತ ಬಂದು, ವಿವೇಕವೆಂಬ ಜಟಾಯುವಿಗೆ ವಿಮಲತ್ವವೆಂಬ ಸದ್ಗತಿಯನ್ನಿತ್ತು, ಚಿಂತೆಯೆಂಬ ಕಬಂಧನನ್ನು ಸಂಹರಿಸಿ, ಸಂತೋಷವೆಂಬ ಶಬರಿಯನ್ನುಕಂಡು, ಮನೋವಿಕಾಸವೆಂಬ ಪೂಜೆಯನ್ನು ಸ್ವೀಕರಿಸಿ, ನಿಧಿಧ್ಯಾಸವೆಂಬ ಆಂಜನೇಯನೊಂದಿಗೆ ಹಿತಮಿತ್ರತ್ವವನ್ನುಹೊಂದಿ,ಸ್ರೀತಿಬೆಳಸಿ, ಸಪ್ತಬಂಧನಗಳೆಂಬ ತಾಳವೃಕ್ಷಗಳನ್ನುಭೇದಿಸಿ, ಭಯವೆಂಬ ವಾಲಿಯನ್ನು ಸಂಹರಿಸಿ, ನಿರ್ಭಯವೆಂಬ ಸುಗ್ರೀವನೊಂದಿಗೆ ಸ್ನೇಹವನ್ನುಬೆಳಸಿ, ನಿಧಿಧ್ಯಾಸವೆಂಬ ಹನುಮಂತನನ್ನು ಪ್ರೋತ್ಸಾಹಪಡಿಸಲಾಗಿ, ಆತನು ಮೋಹವೆಂಬ ಸಮುದ್ರವನ್ನು ದಾಟಿ, ಲೋಭನೆಂಬ ಲಂಕಿಣಿಯನ್ನು ಕೊಂದು, ದುಸ್ಸಂಕಲ್ಪಗಳೆಂಬ ರಾಕ್ಷಸರನ್ನು ಧ್ವಂಸಮಾಡಿ, ಆನಂದವೆಂಬ ಸೀತೆಯನ್ನುಕಂಡು, ಸಂಕಲ್ಪವೆಂಬ ಅಶೋಕವನವನ್ನು ಮುರಿದು, ಸಂಶಯವೆಂಬ ಅಕ್ಷಕುಮಾರನನ್ನು ಸಂಹರಿಸಿ, ವಿಪರೀತವೆಂಬ ಇಂದ್ರಜಿತುವಿನ ಪ್ರತಾಪವನ್ನು ಧಿಕ್ಕರಿಸಿ, ಭ್ರಮೆಯೆಂಬ ಅಸ್ತ್ರಕ್ಕೆಸಿಲುಕಿ, ಪ್ರಜ್ಞೆಯೆಂಬ ಸಾಧನದಿಂದ ಬಿಡುಗಡೆಹೊಂದಿ, ರಾಜಸವೆಂಬ ರಾವಣನನ್ನು ಹೀಯಾಳಿಸಿ, ಮಾನವೆಂಬ ಮಹಾಗ್ನಿಯಿಂದ ದುಃಖನೆಂಬ ಲಂಕೆಗೆ ಬೆಂಕಿಸೋಕಿ

ಸಿ, ಮೋಹವೆಂಬ ಸಮುದ್ರವನ್ನು ದಾಟಬಂದು, ಅನುಭವನೆಂಬ ಜಾಂ
ಬವಂತನನ್ನೂ, ಯೌವನನೆಂಬ ಅಂಗದನನ್ನೂ ಕೂಡಿ, ಆತ್ಮನೆಂಬರಾಮ
ನಿಗೆ ಆನಂದವೆಂಬ ಸೀತೆಯ ಕುಶಲವಾರ್ತೆಯನ್ನು ತಿಳಿಸಲಾಗಿ, ಅತನು
ನಿರ್ಭಯವೆಂಬ ಸುಗ್ರೀವನನ್ನು ಹುರಿಗೊಳಿಸಿ, ಶೌರ್ಯಸಾಹಸಗಳೆಂಬ ಕಪಿ
ಸೈನ್ಯವನ್ನು ಸಿದ್ಧಪಡಿಸಿ, ಮೋಹವೆಂಬ ಸಮುದ್ರದ ಸೊಕ್ಕಡಗಿಸಿ, ನಿಶ್ಚಲ
ತ್ವವೆಂಬ ಸೇತುವೆಯನ್ನು ಬಂಧಿಸಿ, ಸಾತ್ವಿಕವೆಂಬ ವಿಭೀಷಣನನ್ನುಕಟಾ
ಕ್ಷಿಸಿ, ವಿಪರೀತವೆಂಬ ಇಂದ್ರಜಿತುವನ್ನೆದುರಿಸಿ, ಸಂಶಯವೆಂಬ ನಾಗಪಾಶ
ಕ್ಕೆ ಸಿಲುಕಿ, ಸದ್ವಿಚಾರನೆಂಬ ಗರುತ್ಮಂತನಿಂದ ಬಿಡುಗಡೆಹೊಂದಿ, ವಿಪ
ರೀತವೆಂಬ ಇಂದ್ರಜಿತುವನ್ನು ಕೊಂದು, ತಾಮಸವೆಂಬ ಕುಂಭಕರ್ಣನನ್ನು
ಸಂಹರಿಸಿ, ವಿಭ್ರಾಂತಿಯೆಂಬ ಅಸ್ತ್ರದಿಂದ ವೈರಾಗ್ಯವೆಂಬ ಲಕ್ಷ್ಮಣನು
ಮೂರ್ಛಿತನಾಗಲಾಗಿ, ನಿಧಿಧ್ಯಾಸವೆಂಬ ಹನುಮಂತನನ್ನುಪ್ರೋತ್ಸಾಹಿಸಿ,
ನಿಷ್ಠೆಯೆಂಬ ಸಂಜೀವಪರ್ವತವನ್ನು ತರಿಸಿ, ವೈರಾಗ್ಯವೆಂಬ ಲಕ್ಷ್ಮಣನಿ
ಗೆ, ಸದುಪದೇಶವೆಂಬ ಸಂಜೀವಕರಣಿಯನ್ನಿತ್ತು ಮೂರ್ಛೆಯನ್ನು ಪರಿಹರಿ
ಸಿ, ಸಂಚಿತವೆಂಬ ಮೂಲಬಲವನ್ನು ನಾಶಗೊಳಿಸಿ, ಶೌರ್ಯಸಾಧನೆಗಳೆಂಬ
ಕಪಿಸೈನ್ಯಗಳನ್ನು ಕಟಾಕ್ಷಿಸಿ, ಗಾಂಭೀರ್ಯವೆಂಬ ಕೋದಂಡವನ್ನೇರಿಸಿ,
ಆತ್ಮಜ್ಞಾನವೆಂಬ ದಿವ್ಯಬಾಣವನ್ನನುಸಂಧಿಸಿ, ಅಹಂಕಾರವೆಂಬ ಕಲಶವ
ನ್ನುಛೇದಿಸಿ, ದಶೇಂದ್ರಿಯಗಳೆಂಬ ಹತ್ತುತಲೆಗಳನ್ನು ಕತ್ತರಿಸಿ, ರಾಜಸ
ವೆಂಬ ರಾವಣನನ್ನು ನಿರ್ಮೂಲಮಾಡಿ, ಪರೀಕ್ಷೆಯೆಂಬ ಅಗ್ನಿಗುಂಡದಲ್ಲಿ
ಆನಂದವೆಂಬ ಸೀತೆ, ಅನನ್ಯಭಾವದಿಂದ ದುಮುಕಿ, ಪರಿಶುದ್ಧತೆಯನ್ನು
ನಿರೂಪಿಸಲು, ಆತ್ಮನೆಂಬರಾಮನು, ಆನಂದವೆಂಬ ಸೀತೆಯನ್ನು ಪರಿಗ್ರಹಿ
ಸಿ, ಬ್ರಹ್ಮವೆಂಬ ದಶರಥನನ್ನು ಸಂದರ್ಶಿಸಿ, ಸ್ವಯಂಪ್ರಭಾವವೆಂಬ ಪುಷ್ಪ
ಕವನ್ನೇರಿ, ಮೋಕ್ಷವೆಂಬ ಅಯೋಧ್ಯೆಗೆ ಸೇರಿ, ಆತ್ಮಸಾಮ್ರಾಜ್ಯವೆಂಬ
ಪಟ್ಟಾಭಿಷೇಕವನ್ನು ಹೊಂದಿ, ಬ್ರಹ್ಮವೆಂಬ ದಶರಥನ ಸಿಂಹಾಸನವನ್ನಧಿ
ಷ್ಟಿಸಿ, ಬ್ರಹ್ಮಸಾಕ್ಷಾತ್ಕಾರವೆಂಬ ರಾಜ್ಯಾಧಿಪತ್ಯವನ್ನು ವಹಿಸಿ, ತಾನೇ
ತಾನಾಗಿ ಮೆರೆಯುತ್ತ, ಯೋಗಿಗಳ ಹೃದಯಾರವಿಂದಗಳಲ್ಲಿ ವಿಲಾಸಗೈಯು
ತ್ತಿರುವ ಶ್ರೀರಾಮನ ಚಿದ್ವಿಲಾಸವಾದ ಅಧ್ಯಾತ್ಮರಾಮಾಯಣವಿದು !

## ಶ್ರೀರಾಮಾವತಾರ, ಕಾಲ—ಕಾರ್ಯನಿರ್ಣಯ.

ವಸಂತಗೀತ:—

ಶ್ರೀಮದಯೋಧ್ಯಾನಗರೀದಶರಥ । ರಾಜಗೃಹೇಹರಿಯವತರಲಾ ॥ ಶ್ರೀ ॥
ಕರ್ಕಾಟಕಲಗ್ನಪುನರ್ವಸುನಕ್ಷತ್ರಮೇಷರಾಶಿಗತಖರರಸ್ಮಿ । ಉದಯಗಾ
ಮಿಪೂರ್ಣೇಂದುಮಧ್ಯದಿನ । ಅಸತಾಸಂಕುಲಕುಸುಮಿತಹೋ ॥ ಶ್ರೀ ॥
ಪುಷ್ಪಸಮಯಮಧುಮಾಸಪುಣ್ಯತಮಶುಕ್ಲಪಕ್ಷಯೇತಿಥಿತೇನವಮಿ । ರ
ವಿಮಂಗಳಗುರುಶುಕ್ರಶನೈಶ್ಚರ । ಗ್ರಹಹೋತೇಹೈಉಚ್ಚತಮಿ ॥ ಶ್ರೀ ॥

ಕ್ಷೀರಸಮುದ್ರದಲ್ಲಿ, ಶೇಷಪರ್ಯಂಕದಲ್ಲಿ, ಲಕ್ಷ್ಮೀವಿನೋದಿಯಾಗಿದ್ದ ಶ್ರೀ ಮಹಾವಿಷ್ಣುವಿನ ಬಳಿಗೆ, ಇಂದ್ರಾದಿದೇವತೆಗಳು, ಬ್ರಹ್ಮನ ಸಮೇತರಾಗಿ ತೆರಳಿ, ರಾವಣ ಕುಂಭಕರ್ಣಾದಿ ರಾಕ್ಷಸರ ದುಷ್ಕಾರ್ಯಗಳನ್ನು ಬಿನ್ನವಿಸಲಾಗಿ, ಶ್ರೀಯಃಪತಿಯು, ಭೂಲೋಕದಲ್ಲಿ ಸುಪ್ರಸಿದ್ಧವಾದ ರಘುವಂಶದಲ್ಲಿ, ದಶರಥಮಹಾರಾಯನಿಗೆ ಪುತ್ರನಾಗಿ ಅವತರಿಸುವಂತೆಯೂ, ಲಕ್ಷ್ಮಿಯು ಮಿಥಿಲಾನಗರದಲ್ಲಿ ಜನಕರಾಯನಿಗೆ ಪುತ್ರಿಯಾಗಿ ಅವತರಿಸುವಂತೆಯೂ, ದುರುಳರಾದ ರಕ್ಕಸರ ಸೊಕ್ಕಡಗಿಸಿ, ದುಷ್ಟಶಿಕ್ಷಣ, ಶಿಷ್ಟರಕ್ಷಣ ಮಾಡುವಂತೆಯೂ, ಅಭಯಹಸ್ತವನ್ನಿತ್ತು ದೇವತೆಗಳನ್ನು ಕಳುಹಿಸಿದನು.

ತನ್ನ ವಾಗ್ದಾನದಂತೆ, ಸೃಷ್ಟ್ಯಾದಿ ಇಪ್ಪತ್ತೆಂಟನೆಯ ಮಹಾಯುಗದಲ್ಲಿ, ವೈವಸ್ವತ ಮನ್ವಂತರದಲ್ಲಿ, ತ್ರೇತಾಯುಗದ ಅಂತ್ಯಭಾಗದಲ್ಲಿ, ಅಂದರೆ, ಸೃಷ್ಟ್ಯಾದಿ ೨೧೪೦೮೬೨೧೪೫೨೩ ಕ್ಕೆ ಸರಿಯಾದ, ಸ್ವಭಾನುಸಂವತ್ಸರ ಚೈತ್ರ ಶುದ್ಧ ನವಮಿ ಶನಿವಾರದ ದಿವಸ, ಪುನರ್ವಸೂನಕ್ಷತ್ರದಲ್ಲಿ ಕರ್ಕಾಟಕಲಗ್ನದಲ್ಲಿ ರವಿ, ಮಂಗಳ, ಗುರು, ಶುಕ್ರ, ಶನೈಶ್ಚರರೆಂಬ ಪಂಚಗ್ರಹಗಳು ಉಚ್ಚಸ್ಥಾನಗಳಲ್ಲಿ ಶೋಭಿಸುತ್ತಿರಲು, ಸಕಲಯೋಗೀಂದ್ರಹೃದಯಾರಾಮನಾದ ಶ್ರೀರಾಮನು, ಕೌಸಲ್ಯಾ ದಶರಥರಿಗೆ ಪುತ್ರನಾಗಿ ಅವತರಿಸಿದನು.

ಆಗ ದಶರಥರಾಯನು, ಪುತ್ರೋತ್ಸವ ಸಂತೋಷದಿಂದ ಅನೇಕ ದಾನಧರ್ಮಗಳನ್ನಾಚರಿಸಿ, ವಸಿಷ್ಠಾದಿಮಹರ್ಷಿಗಳಿಂದ, ಇಲ್ಲಿ ವಿವರಿಸಿರುವಂತೆ ಜಾತಕವನ್ನು ಬರೆಯಿಸಿದನು.

## ಶ್ರೀರಾಮಜಾತಕ.

| | | | |
|---|---|---|---|
| ಶು | ರ | | |
| ಬು | ವಾಲ್ಮೀಕಿಮಹರ್ಷಿ ಪ್ರೋಕ್ತ | | ಗು. ಚ. ಲ. |
| ಕು | | | |
| | | ಶ | |

ಅಖಂಡ ಬ್ರಹ್ಮಾಂಡ ಮಂಡಿತೋದರನೂ, ನಿಖಿಲಚರಾಚರ ಸೃಷ್ಟಿವ್ಯಾಪಕನೂ, ಆತ್ಮಾರಾಮನೂ ಆದ ಶ್ರೀರಾಮನಿಗೆ ಲೋಕಮರ್ಯಾದಾರ್ಥವಾಗಿ, ವಸಿಷ್ಠಮಹರ್ಷಿಗಳು ಗುರುವಾಗಿಯೇರ್ಪಟ್ಟು ವಿದ್ಯಾಭ್ಯಾಸಮಾಡಿಸಿದರು. ಶ್ರೀರಾಮ, ಲಕ್ಷ್ಮಣ, ಭರತ, ಶತ್ರುಘ್ನರು ದಿನದಿನ ಪ್ರವರ್ಧಮಾನರಾಗುತ್ತ, ಸಮಸ್ತ ಶಾಸ್ತ್ರಗಳಲ್ಲಿಯೂ ಪ್ರವೀಣರಾದರು.

ಶ್ರೀರಾಮಚಂದ್ರನು ತನ್ನ ಹದಿನಾರನೇವರ್ಷದಲ್ಲಿ, ಲಕ್ಷ್ಮಣಸಹಿತನಾಗಿ ವಿಶ್ವಾಮಿತ್ರನೊಂದಿಗೆ, ಆತನ ಯಜ್ಞರಕ್ಷಣಾರ್ಥವಾಗಿ ಕಾಡಿಗೆ ತೆರಳಿದನು. ತಾಟಕಿ, ಸುಬಾಹು ಮುಂತಾದವರನ್ನು ಕೊಂದು, ಮಾರೀಚನ ಗರ್ವಭಂಗಮಾಡಿ, ವಿಶ್ವಾಮಿತ್ರನೊಡಗೂಡಿ ಮಿಥಿಲೆಗೆ ಪ್ರಯಾಣಬೆಳಸಿ, ದಾರಿಯಲ್ಲಿ ಅಹಲ್ಯೆಗೆ ಶಾಪವಿಮೋಚನವನ್ನನುಗ್ರಹಿಸಿ, ಮಿಥಿಲೆಗೈತಂದು, ಶಿವಧನುರ್ಭಂಗಮಾಡಿ, ಸ್ವಯಂವರದಲ್ಲಿ ಸೀತೆಯನ್ನು ಪರಿಗ್ರಹಿಸಿ, ಪರಶುರಾಮನ ಗರ್ವವನ್ನಡಗಿಸಿ, ಸೀತಾಸಹಿತನಾಗಿ ಅಯೋಧ್ಯೆಯನ್ನು ಪ್ರವೇಶಿಸಿ, ಎಂಟುವರ್ಷಗಳಕಾಲ ಅಯೋಧ್ಯೆಯಲ್ಲಿದ್ದನು. ತರುವಾಯ, ತನ್ನ ಮಲತಾಯಿಯಾದ ಕೈಕೆಯ ಅಪ್ಪಣೆಯಂತೆ, ಸೀತಾಲಕ್ಷ್ಮಣಸಹಿತನಾಗಿ ವನವಾಸಕ್ಕೆ ತೆರಳಿದನು.

ವನವಾಸಕ್ಕೆ ತೆರಳುವಾಗ್ಗೆ, ಶ್ರೀರಾಮನಿಗೆ ಇಪ್ಪತ್ತೈದುವರ್ಷಗಳು. ಸೀತಾದೇವಿಗೆ ಹದಿನೆಂಟುವರ್ಷಗಳು ವಯಸ್ಸಾಗಿದ್ದುವು.

ಶ್ರೀರಾಮನು ಋಷ್ಯಾಶ್ರಮಗಳಲ್ಲಿ ಹತ್ತು ವರ್ಷಗಳು ಕಳೆದನು. ಪಂಚವಟಿಯೊಂದರಲ್ಲಿಯೇ ಮೂರುವರ್ಷಗಳು ಕಳೆದುವು. ಅಂದರೇ ಶ್ರೀರಾಮನ ವನವಾಸದ ಹದಿಮೂರನೇವರ್ಷವು ಪ್ರಾರಂಭವಾಯಿತು. ಹನ್ನೆರಡು ಹದಿಮೂರನೇ ವರ್ಷಗಳ ಸಂಧಿಯಲ್ಲಿ ಅಂದರೇ, ಮಾಘಮಾಸದಲ್ಲಿ ಶೂರ್ಪಣಖಿಯ ಕಿವಿ ಮೂಗುಗಳನ್ನು ಕತ್ತರಿಸಿ ಅವಳನ್ನು ಭಂಗಪಡಿಸಿದನು. ಫಾಲ್ಗುಣಮಾಸದಲ್ಲಿ ಖರದೂಷಣಾದಿ ಹದಿನಾಲ್ಕುಸಾವಿರಮಂದಿ ರಾಕ್ಷಸರನ್ನು ಸಂಹರಿಸಿದನು.

ತದನಂತರ, ಚೈತ್ರಶುಕ್ಲ ಪಂಚಮೀ ಬುಧವಾರದ ದಿವಸ, ಅಗ್ನಿಜಲಬಿಂದು ಸಂಜ್ಞಿಕ ಮುಹೂರ್ತದಲ್ಲಿ ಸೀತಾಪಹರಣವಾಯಿತು. ಅಂದರೆ, ರಾವಣನು ಸೀತೆಯನ್ನು ಲಂಕೆಗೆ ಕೊಂಡೊಯ್ದನು.

ಜಗನ್ಮಾತೆಯಾದ ಸೀತೆಯು ರಾವಣನಿಂದ ಅಪಹರಿಸಲ್ಪಡುವಾಗ್ಗೆ ಆಕೆಗೆ ಇಪ್ಪತ್ತೆಂಟುವರ್ಷಗಳ ವಯಸ್ಸಾಗಿದ್ದಿತು. ಆಗ್ಗೆ ಶ್ರೀರಾಮಚಂದ್ರನಿಗೆ ಮುವ್ವತ್ತೆಂಟುವರ್ಷಗಳ ವಯಸ್ಸಾಗಿದ್ದಿತು.

ತರುವಾಯ ವೈಶಾಖಮಾಸದಲ್ಲಿ ಪಂಪಾದರ್ಶನವಾಯಿತು. ಜ್ಯೇಷ್ಠದಲ್ಲಿ ಹನುಮಂತನ ಮತ್ತು ಸುಗ್ರೀವನ ಪರಿಚಯವಾಯಿತು. ಆಷಾಢದಲ್ಲಿ ವಾಲಿಯವಧೆಯಾಯಿತು. ಶ್ರಾವಣಶುದ್ಧ ತದಿಗೆಯದಿವಸ ಸುಗ್ರೀವನಿಗೆ ವಾನರರಾಜ್ಯ ಪಟ್ಟಾಭಿಷೇಕವಾಯಿತು. ಶ್ರಾವಣಮಾಸದಿಂದ ಕಾರ್ತೀಕಮಾಸದವರಿವಿಗೂ ಶ್ರೀರಾಮನು ಲಕ್ಷ್ಮಣಸಹಿತನಾಗಿ ಮಾಲ್ಯವಂತದಲ್ಲಿ ವಾಸಮಾಡಿದನು. ಮಾರ್ಗಶೀರ್ಷದಲ್ಲಿ ಲಕ್ಷ್ಮಣನು ಕಿಷ್ಕಿಂದೆಗೆ ಪ್ರವೇಶಿಸಿ, ಸುಗ್ರೀವನ ಮತ್ತತೆಯನ್ನು ಪರಿಹರಿಸಿ ಶ್ರೀರಾಮನಬಳಿಗೆ ಕರೆತಂದು ವಾನರವೀರರನ್ನು ಸೀತಾನ್ವೇಷಣಕ್ಕಾಗಿ ಕಳುಹಿಸಿದನು. ಮಾಘಶುದ್ಧ ದ್ವಾದಶಿಯ ದಿವಸ ಮಧ್ಯರಾತ್ರಿಯಲ್ಲಿ ಹನುಮಂತನು ಸೀತಾದೇವಿಯನ್ನು ಸಂದರ್ಶಿಸಿದನು. ತ್ರಯೋದಶಿಯ ದಿವಸ ಹನುಮಂತನು ಲಂಕಾದಹನಮಾಡಿ ಆ ರಾತ್ರಿಯೇ ಹಿಂದಿರುಗಿ, ಸಮುದ್ರವನ್ನು ಲಂಘಿಸಿ, ಜಾಂಬವಾದಿಗಳೊಡಗೂಡಿ ಎಲ್ಲರೂ ಮಧುವನಕ್ಕೆ ತೆರಳಿದರು. ಚತುರ್ದಶಿಯ ದಿವಸ ಮಧುವನ ಭಂಗವಾಯಿತು.

ಮಾಘಶುದ್ಧ ಪೌರ್ಣಮಿಯ ದಿವಸ ಆಂಜನೇಯನು ಶ್ರೀರಾಮನ

ನ್ನು ಸಂದರ್ಶಿಸಿ, ಸೀತಾದೇವಿಯ ಕ್ಷೇಮವಾರ್ತೆಯನ್ನು ತಿಳಿಸಿ, ಚೂಡಾಮಣಿಯನ್ನು ಸಮರ್ಪಿಸಿದನು.

ಮಾಘಬಹುಳ ತದಿಗೆಯ ದಿವಸ ಉತ್ತರಾ ಫಲ್ಗುಣೀನಕ್ಷತ್ರದಲ್ಲಿ ಶ್ರೀರಾಮ, ಲಕ್ಷ್ಮಣ, ಸುಗ್ರೀವ, ಹನುಮಂತ, ಜಾಂಬವಂತ, ಅಂಗದಾದಿಗಳು ವಾನರಸೈನ್ಯಸಮೇತರಾಗಿ ಯುದ್ಧಕ್ಕೆ ಪ್ರಯಾಣಬೆಳಸಿದರು.

ಫಾಲ್ಗುಣಶುದ್ಧ ಪಂಚಮಿಯದಿವಸ ರಾತ್ರಿ, ವಿಭೀಷಣ ಶರಣಾಗತಿಯೂ ಶ್ರೀರಾಮನ ಅಂಗೀಕಾರವೂ ನಡೆದುವು. ಷಷ್ಠಿಯದಿವಸ ರೋಹಿಣೀನಕ್ಷತ್ರದಲ್ಲಿ ಶ್ರೀರಾಮನು ವಿಭೀಷಣನಿಗೆ ಲಂಕಾರಾಜ್ಯ ಪಟ್ಟಾಭಿಷೇಕವಮಾಡಿದನು. ನಂತರ ಮೂರು ರಾತ್ರಿ ದರ್ಭಶಯನವಮಾಡಿದನು. ನಾಲ್ಕನೆಯ ದಿವಸ ಸಮುದ್ರಗರ್ವಭಂಗವಾಯಿತು. ದಶಮಿಯಿಂದ ಚತುರ್ದಶಿಯ ಪರ್ಯಂತರ ಸೇತುಬಂಧನಕಾರ್ಯವು ನಡೆಯಿತು. ಆರಾತ್ರಿಯೇ ಸಮುದ್ರವನ್ನು ದಾಟಿದರು. ಗಾರುಡ ವ್ಯೂಹದಿಂದ ಸೇನೆಯನ್ನು ಸಜ್ಜುಗೊಳಿಸಿ, ಫಾಲ್ಗುಣ ಶುಕ್ಲ ಪೌರ್ಣಮಿಯ ದಿವಸ ಸುವೇಲಾದ್ರಿಯಲ್ಲಿ ಬಿಡಾರವಮಾಡಿದರು.

ಫಾಲ್ಗುಣ ಬಹುಳ ಪಾಡ್ಯಮಿಯಿಂದ ಯುದ್ಧಾರಂಭವಾಯಿತು. ಆರಾತ್ರಿಯಲ್ಲಿಯೇ ಶ್ರೀರಾಮನು ನಾಗಪಾಶ ಬದ್ಧನಾಗಿ ಗರುಡನಿಂದ ಬಿಡುಗಡೆ ಹೊಂದಿದನು. ನಂತರ ಪಂಚಮಿಯವರಿವಿಗೂ, ಅಂಗದ-ಹನುಮದಾದಿಗಳಿಂದ, ಧೂಮ್ರಾಕ್ಷ, ಅಕಂಪನ, ವಜ್ರದಂಷ್ಟ್ರಾದಿಗಳು ವಧಿಸಲ್ಪಟ್ಟರು. ಷಷ್ಠಿಯದಿವಸ ಶ್ರೀರಾಮನು ರಾವಣನ ಮುಕುಟವನ್ನು ಭಂಗಪಡಿಸಿದನು. ಸಪ್ತಮಿಯ ದಿವಸ ಶ್ರೀರಾಮನು ಕುಂಭಕರ್ಣನನ್ನು ವಧಿಸಿದನು. ಅಷ್ಟಮಿಯಿಂದ ದಶಮಿಯವರಿವಿಗೂ ಶ್ರೀರಾಮ, ಲಕ್ಷ್ಮಣ, ಸುಗ್ರೀವ, ಅಂಗದ, ಹನುಮಂತರಿಂದ, ಮಕರಾಕ್ಷ, ಅತಿಕಾಯ, ಕುಂಭ, ನರಾಂತಕ, ನಿಕುಂಭಾದಿಗಳು ವಧಿಸಲ್ಪಟ್ಟರು.

ತ್ರಯೋದಶಿಯ ದಿವಸ ಲಕ್ಷ್ಮಣನು ಇಂದ್ರಜಿತುವನ್ನು ವಧಿಸಿದನು. ಚತುರ್ದಶಿಯ ದಿವಸ ಶ್ರೀರಾಮನು ರಾವಣನ ಮೂಲಬಲವನ್ನು ಸಂಹರಿಸಿದನು.

### ಮೂಲಬಲ ಪ್ರಮಾಣ.

೭,೩೧,೦೦,೦೦೦, ಏಳು ಕೋಟಿ ಮುವ್ವತ್ತೊಂದು ಲಕ್ಷ ರಥ

ಗಳೂ, ೧೩,೧೨,೬,೦೦೦ ಹದಿಮೂರು ಕೋಟಿಯು ಹನ್ನೆರಡು ಲಕ್ಷಗಳ ಆರುಸಾವಿರ ಆನೆಗಳೂ, ೧೫,೨೦, ೦೬,೦೦,೦ ಹದಿನೈದು ಕೋಟಿ ಇಪ್ಪತ್ತು ಲಕ್ಷದ ಆರು ಸಾವಿರದ ಕುದುರೆಯು ಸವಾರರೂ, ೧೪೫,೦೧,೦೦,೦೦೦, ನೂರನಲವತ್ತೈದು ಕೋಟಿ, ಒಂದು ಲಕ್ಷದ ಯುದ್ಧಭಟರೂ, ಒಳಗೊಂಡಿದ್ದ ರಾವಣನ ಮೂಲಬಲವನ್ನು ಶ್ರೀರಾಮನು ನಿರಾಯಾಸವಾಗಿ ಸಂಹರಿಸಿದರು.

ಫಾಲ್ಗುಣ ಬಹುಳ ಅಮಾವಾಸ್ಯೆಯು ದಿವಸ ರೇವತೀ ನಕ್ಷತ್ರದಲ್ಲಿ ಶ್ರೀರಾಮನು ರಾವಣನನ್ನು ಸಂಹರಿಸಿದನು. ಚೈತ್ರ ಶುದ್ಧ ಪಾಡ್ಯಮಿಯು ದಿವಸ ರಾವಣನಿಗೆ ಉತ್ತರ ಕ್ರಿಯೆಗಳಾದುವು.

ಚೈತ್ರ ಶುದ್ಧ ಬಿದಿಗೆಯು ದಿವಸ ವಿಭೀಷಣನನ್ನು ಸಿಂಹಾಸನಾಸೀನನನ್ನಾಗಿಮಾಡಿ ಲಂಕಾರಾಜ್ಯ ಪಟ್ಟಾಭಿಷೇಕ ಮಾಡಲಾಯಿತು. ತದಿಗೆಯು ದಿವಸ ಸೀತಾದೇವಿಯು ಅಗ್ನಿಪೂತೆಯಾಗಿ ಶ್ರೀರಾಮನಿಂದ ಪರಿಗ್ರಹಿಸಲ್ಪಟ್ಟಳು.

ಚೈತ್ರ ಶುದ್ಧ ಚೌತಿಯು ದಿವಸ ಪುಷ್ಪಕವಿಮಾನದಲ್ಲಿ ಶ್ರೀರಾಮನು ಪರಿವಾರ ಸಮೇತನಾಗಿ ಕುಳಿತು, ಅಯೋಧ್ಯೆಯನ್ನು ಕುರಿತು ತೆರಳಿದನು. ಪಂಚಮಿಯು ದಿವಸ ಮೃಗಶಿರಾ ನಕ್ಷತ್ರದಲ್ಲಿ ಭರದ್ವಾಜಾಶ್ರಮವನ್ನು ಸಂದರ್ಶಿಸಿ, ಆದಿವಸವೇ ನಂದಿಗ್ರಾಮವನ್ನು ತಲಪಿ, ಭರತನಿಗೆ ಸಂದರ್ಶನವಿತ್ತನು. ಅಲ್ಲಿ ಜಡೆಗಳನ್ನು ಬಿಡಿಸಿ ಮುನಿವೇಷಗಳನ್ನು ಬಿಟ್ಟು ಸಹಜ ರಾಜಾಲಂಕಾರ ಭೂಷಿತರಾಗಿ, ಸಪ್ತಮಿಯು ದಿವಸ, ಪುನರ್ವಸೂ ನಕ್ಷತ್ರದಲ್ಲಿ ಅಯೋಧ್ಯೆಯನ್ನು ಪ್ರವೇಶಿಸಿದರು.

ಆಗ್ಗೆ, ಶ್ರೀರಾಮಚಂದ್ರನಿಗೆ ಮುವ್ವತ್ತೊಂಬತ್ತು ವರ್ಷಗಳ ವಯಸ್ಸು, ಸೀತಾದೇವಿಗೆ ಮುವ್ವತ್ತುಮೂರು ವರ್ಷಗಳವಯಸ್ಸು.

ಚೈತ್ರ ಶುದ್ಧ ಸಪ್ತಮಿಯು ದಿವಸ, ಪುಷ್ಯಮೀ ನಕ್ಷತ್ರದಲ್ಲಿ ಶ್ರೀ ಸೀತಾರಾಮರಿಗೆ ರಾಜ್ಯಾಭಿಷೇಕವಾಯಿತು! ಶ್ರೀರಾಮನು ಹನ್ನೊಂದು ಸಾವಿರ ವರ್ಷಗಳು ಧರ್ಮದಿಂದ ರಾಜ್ಯ ಪರಿಪಾಲನ ಮಾಡಿದನು.

ಶ್ರೀರಾಮಜಯಂ.

ಪ್ರಥಮಕಳೆ ಸಂಪೂರ್ಣಂ.

**Supplement tO this Issue.**

☞ ದೇಶಾಭಿಮಾನಿಗಳೇ! ದಯವಿಟ್ಟು ಇದನ್ನು ತಮ್ಮ ಬಂಧು ಮಿತ್ರರಲ್ಲೆಲ್ಲಾ ಪ್ರಚುರಗೊಳಿಸಿರಿ !!

# ಆನಂದ ಚಂದ್ರಿಕೆ.

ರಸಭರಿತವಾದ ವಿಷಯಗಳಿಂದೊಡಗೂಡಿದ ಉತ್ತಮವರ್ಗದ
ಸಚಿತ್ರಮಾಸಪತ್ರಿಕೆ.

ಚಂದಾ:—ಒಂದು ವರ್ಷಕ್ಕೆ ರೂ. ೩—೦—೦
ಮಾದರಿ ಪತ್ರಿಕೆ ೧ಕ್ಕೆ ,, ೦—೪—೦

ಈ ಪತ್ರಿಕೆಯಲ್ಲಿರುವ ವಿಷಯಗಳೇನು?

ಈಶ್ವರ ಪ್ರಾರ್ಥನೆಗಳು, ಶ್ಲೋಕಗಳು, ಪದ್ಯಗಳು, ವಚನಗಳು ಮುಂತಾದ ಅನೇಕಸ್ತೋತ್ರಪಾಠಗಳು, ವೇದ, ವೇದಾಂಗ, ವೇದಾಂತ, ಸೂತ್ರಾರ್ಥಗಳು, ಪೂರ್ವಕಾಲದ ಚಕ್ರವರ್ತಿಗಳ, ಮಹಾರಾಜರ, ಮಹಾರಾಣಿಯರ ಪವಿತ್ರ ಚರಿತ್ರೆಗಳು, ಪರಮ ತಪೋಧನರಾದ ಮಹಾಋಷಿಗಳ, ಋಷಿ ಪತ್ನಿಯರ ಪಾವನ ಜೀವನಗಳು,—ಪ್ರಹ್ಲಾದ, ನಾರದ, ಪರಾಶರ, ಧ್ರುವ, ಗಜೇಂದ್ರಾದಿ ಪರಮಭಕ್ತರ ಭಾಗವತ ವೈಭವಗಳು,-ಜ್ಞಾನದೇವ, ನಾಮದೇವ, ತುಕಾರಾಂ, ಮೀರಾಬಾಯಿ, ಜನಾಬಾಯಿ ಮುಂತಾದ ಸಾಧುಜನರ ತತ್ವೋಪದೇಶಗಳು,—ಈ ಕಾಲದ ಸ್ವದೇಶ ವಿದೇಶ ಪರಿಪಾಲಕರಾದ ರಾಜಾಧಿರಾಜರ ಸಂಪದ್ವೈಭವಗಳು.

ದೇಶಬಾಂಧವರೂ, ಧರ್ಮಾತ್ಮರೂ ಆದ ಸುಪ್ರಸಿದ್ಧ ಸ್ತ್ರೀಪುರುಷರ ಚಿತ್ರಪಟಗಳು, ಜೀವನ ಚರಿತ್ರೆಗಳು, ಅವರ ಪರೋಪಕಾರ ಕಾರ್ಯಗಳು, ಸ್ವಾಮಿ ರಾಮಕೃಷ್ಣ ಪರಮಹಂಸ, ವಿವೇಕಾನಂದ, ರಾಮತೀರ್ಥ, ದಯಾನಂದ, ರಾಮಮೋಹನ ಮುಂತಾದ ಮಹಾತ್ಮರ ಜ್ಞಾನೋಪದೇಶಗಳು, ನೀತಿಬೋಧಕ ಕಥೆಗಳು, ನವರಸಾಲಂಕಾರಭರಿತವಾದ ನಾಟಕಗಳು, ಆತ್ಮೋಜ್ಜೀವಕಗಳಾದ ಮತೋಪನ್ಯಾಸಗಳು, ತೀರ್ಥಕ್ಷೇತ್ರ ಪ್ರಭಾವಗಳು, ಗೀತಾರ್ಥರಹಸ್ಯ, ಆನಂದಬೋಧಿನಿ, ಸಂಘಾಭ್ಯುದಯ ಸೂಚಕನ್ಯಾಸಗಳು, ಆಶ್ಚರ್ಯಕರವಾದ ವಿವಿಧ ವಿನೋದಗಳು, ರಸಭರಿ

ತವಾದ ನಾವಲ್ (ಕಾದಂಬರಿ) ಗಳು, ಹಾಸ್ಯರಸ ಪ್ರಸಂಗಗಳು ಸ್ವದೇಶ ವಿದೇಶ ಸಂಗ್ರಹ ವೃತ್ತಾಂತಗಳು, ಹೆಚ್ಚು ಹೇಳಲೇಕೆ ? ಮಾನವ ಜನ್ಮ ಸಾಫಲ್ಯ ಸಾಧನಭೂತವಾದ ಸಮಸ್ತ ವಿಷಯಗಳೂ, ಶಾಸ್ತ್ರೋಕ್ತವಾದ ವ್ಯವಸಾಯ ಪದ್ಧತಿಗಳೂ, ಕೈಗಾರಿಕೆ, ಪಾಕಶಾಸ್ತ್ರ, ಅರ್ಥಶಾಸ್ತ್ರ, ಸಂಗೀತಮುಂತಾದ ಕುಶಲ ವಿದ್ಯೆಗಳೂ, ಗ್ರಂಥವಿಮರ್ಶೆಗಳೂ, ಈ ಪತ್ರಿಕೆಯಲ್ಲಿ ಸಚಿತ್ರವಾಗಿ ಪ್ರಕಟಿಸಲ್ಪಡುತ್ತವೆ.

☞ ವಿದ್ಯಾವಂತರಾದ ಸ್ತ್ರೀ ಪುರುಷರಿಂದ ಬರೆಯಲ್ಪಟ್ಟ ಅಪೂರ್ವ ವಿಷಯಗಳು ಪ್ರತಿ ತಿಂಗಳಲ್ಲೂ ಉತ್ಕೃಷ್ಟವಾದ ಚಿತ್ರಪಠಗಳೊಂದಿಗೆ ಪ್ರಕಟಿಸಲ್ಪಡುವುವು. ಮಾದರಿ ಪತ್ರಿಕೆ ತರಿಸಿ ನೋಡಿರಿ !

---

# ಪುರಂದರದಾಸರ ಚರಿತ್ರೆ.

ಕಾದಂಬರಿಯಂತೆಯೂ, ಹರಿಕಥೆಯಂತೆಯೂ ಓದಿಕೊಳ್ಳುವುದಕ್ಕೂ, ನಾಟಕರೂಪವಾಗಿ, ಷ್ಟೇಜಿನಲ್ಲಿ ಪ್ರದರ್ಶಿಸುವುದಕ್ಕೂ ಅನುಕೂಲವಾಗಿರುವಂತೆ ಉಭಯ ಸೌಕರ್ಯಗಳನ್ನನುಸರಿಸಿ, ಲಲಿತವಾದ ಸುಲಭ ಶೈಲಿಯಲ್ಲಿ ವಿರಚಿಸಲ್ಪಟ್ಟಿದೆ. ಪುರಂದರದಾಸರ ಮತ್ತು ಅವರ ಪತ್ನೀಪುತ್ರರ ಚಿತ್ರಪಠಗಳಿಂದಲೂ, ಅವರ (೧೦೮) ಕೀರ್ತನೆಗಳಿಂದಲೂ ವಿರಾಜಿಸುತ್ತಿದೆ. ಅರ್ಧಾಣೆ ಪೋಸ್ಟೇಜು ಷ್ಟಾಂಪನ್ನು ಕಳುಹಿಸಿದರೆ ವಿಷಯ ಸೂಚಿಕೆ (Contents) ಪತ್ರವನ್ನು ಕಳುಹಿಸುತ್ತೇವೆ:—

ಅಂದವಾದ ಗ್ಲೇಜು ಕಾಗದಗಳ ಮೇಲೆ ಮುದ್ರಿಸಲ್ಪಟ್ಟ ಕ್ಯಾಲಿಕೋ ಬೈಂಡಿನ ಪ್ರತಿ ೧ ಕ್ಕೆ ರೂ. ೨—೦—೦.

ಸಾಧಾರಣ ಕಾಗದಗಳ ಪ್ರತಿಗೆ ರೂ. ೧—೦—೦.

ವಿಳಾಸ:— ಕಾ. ಶಿವರಾಮದಾಸ್, ಎಡಿಟರ್,

"ಆನಂದಚಂದ್ರಿಕೆ" ಬೆಂಗಳೂರು ಸಿಟಿ.

ಆನಂದಚಂದ್ರಿಕಾಗ್ರಂಥಮಾಲಾ॥ ಶ್ರೀರಸ್ತು॥ ಸಪ್ತಮಕುಸುಮ॥

# ಪುರಂದರದಾಸರ ಚರಿತ್ರೆ.

## ವಿಷಯಸೂಚಿಕೆ.

ಪ್ರಥಮಾಂಕ:—ಶ್ರೀ ವೈಕುಂಠ ವರ್ಣನೆ, ಕ್ಷೀರಾಬ್ಧಿಯಲ್ಲಿ ಶ್ರೀಮನ್ನಾರಾಯಣನು ಲಕ್ಷ್ಮೀಸಮೇತನಾಗಿ, ಶೇಷಪರ್ಯಂಕದಲ್ಲಿ ಪವಡಿಸಿರುವಿಕೆ, ನಾರದಾದಿ ಮಹರ್ಷಿಗಳು ಭಗವಂತನ ಸಂದರ್ಶನಾರ್ಥವಾಗಿ ವೈಕುಂಠಕ್ಕೆ ಬರುವಿಕೆ, ನಾರದರು ತಮ್ಮ ವೀಣಾಗಾನದಿಂದ ಲಕ್ಷ್ಮೀನಾರಾಯಣರ ಸ್ತೋತ್ರಮಾಡುವಿಕೆ, ಜಗನ್ಮಾತೆಯಾದ ಶ್ರೀದೇವಿಯು ಮಹರ್ಷಿಗಳ ಕ್ಷೇಮಲಾಭಗಳನ್ನು ವಿಚಾರಿಸುವಿಕೆ, ಭೂಲೋಕದ ಪ್ರಸ್ತಾಪ, ಕಲಿಮಹಾರಾಜನ ಪ್ರತಾಪದಿಂದ ಭೂಲೋಕದಲ್ಲಿ ಅಧರ್ಮವು ಹೆಚ್ಚಿರುವುದನ್ನು ನಾರದರು ಬಣ್ಣಿಸುವಿಕೆ, ಋಷಿಗಳ ಮಂತ್ರಾಲೋಚನೆ, ವೇದವ್ಯಾಸರ ಸೂಚನೆ, ಪುರಂದರಗಡ, ವೆಂಬ ಗ್ರಾಮದಲ್ಲಿ ಲಕ್ಷಾಧಿಕಾರಿಯಾಗಿರುವ ವಾಸುದೇವ ನಾಮಾಂಕಿತ ಬ್ರಾಹ್ಮಣ ಗೃಹಸ್ಥನು, ಪುತ್ರಾರ್ಥಿಯಾಗಿರುವುದರಿಂದ ಆತನಿಗೆ ಜನಿಸತಕ್ಕ ಪುತ್ರನು. ನಾರದಾಂಶಸಂಭವನಾಗಿ, ಕ್ರಿಯಾರೂಪವಾದ ಪ್ರತ್ಯಕ್ಷನಿದರ್ಶನದಿಂದ ಜನರಿಗೆ ಭಕ್ತಿ, ಜ್ಞಾನ, ವೈರಾಗ್ಯಗಳನ್ನುಂಟುಮಾಡಿ, ಧರ್ಮವನ್ನುದ್ಧರಿಸುವಂತೆ ಭಗವಂತನು ಅಪ್ಪಣೆಕೊಡಿಸುವಿಕೆ, ಭಗವದಾಜ್ಞೆಯನ್ನು ಎಲ್ಲರೂ ಶಿರಸಾವಹಿಸುವಿಕೆ ಮುಂತಾದ ವಿಷಯಗಳು.

ದ್ವಿತೀಯಾಂಕ:-ಪಂಢರಪುರ ವರ್ಣನೆ, ಪಾಂಡುರಂಗವಿಟ್ಠಲನ ರಥೋತ್ಸವಕ್ಕಾಗಿ ಪುರಂದರಗಡದಿಂದ ಬಂದ ಶ್ರೀಮಂತರಾದ ವಾಸುದೇವರಾಯರು ತಮ್ಮ ಧರ್ಮಪತ್ನಿ ರಾಧಾಬಾಯಿಯೊಂದಿಗೆ ಪಾಂಡುರಂಗಮೂರ್ತಿಯನ್ನು ಸಂದರ್ಶಿಸುವಿಕೆ, ಬ್ರಹ್ಮೋತ್ಸವದ ವೈಭವ, ಸಾಧುಜನರ ಭಕ್ತಿಯೋಗ. ವಿಟ್ಠಲನಾಮಸಂಕೀರ್ತನ, ರಾಧಾಬಾಯಿಯ ಸ್ವಪ್ನ, ದಂಪತಿಗಳ ಸಂತೋಷ, ಸಫಲಮನೋರಥರಾದ ದಂಪತಿಗಳು ಸ್ವಗ್ರಾಮವಾದ ಪುರಂದರಗಡಕ್ಕೆ ಹಿಂದಿರುಗಿ ಹೋಗುವಿಕೆ ಮುಂತಾದ ವಿಷಯಗಳು.

ತೃತೀಯಾಂಕ:-ಪುರಂದರದಾಸರ ಜನನ, ಕೃಷ್ಣರಾಯರೆಂಬ ನಾಮಕರಣ, ವಿದ್ಯಾಭ್ಯಾಸ, ವಿವಾಹ ಮುಂತಾದ ಶುಭಕಾರ್ಯಗಳು ನಡೆಯುವಿಕೆ, ಕೃಷ್ಣರಾಯರು ಮುತ್ತು ರತ್ನಗಳ ವ್ಯಾಪಾರದಲ್ಲಿ ಕೋಟ್ಯಂತರವಾಗಿ ಧನಾರ್ಜನೆ ಮಾಡುವಿಕೆ, ಮನೆಯಮೇಲೆ ಒಂಬತ್ತು ಚಿನ್ನದ ಕಲಶಗಳನ್ನಿಡಿಸುವಿಕೆ, ತನ್ಮೂಲಕವಾಗಿ ಅವರಿಗೆ "ನವಕೋಟಿ ನಾರಾಯಣ" ನೆಂಬ ಪ್ರಸಿದ್ಧನಾಮ ಉಂಟಾಗುವಿಕೆ, ಅವರ ಧರ್ಮಪತ್ನಿಯಾದ "ಲಕ್ಷ್ಮೀಬಾಯಿ" ಎಂಬ ಪತಿವ್ರತಾಶಿರೋಮಣಿಯು, ತುಳಸೀಪೂಜೆ, ಸುಮಂಗಲೀಸತ್ಕಾರ ಮುಂತಾದ ಸತ್ಕಾರ್ಯಗಳನ್ನಾಚರಿಸುವಿಕೆ, ನವಕೋಟಿನಾರಾಯಣರು ಅತ್ಯಂತ ಲೋಭಗುಣದಿಂದ ಭಿಕ್ಷುಕರಪಾಲಿಗೆ ಗರ್ಭಶತ್ರುವಾಗಿ ಪರಿಣಮಿಸಿ, ಯಾಚಕರನ್ನು ಸ್ವೇಚ್ಛೆಯಾಗಿ ಬೈಯುತ್ತ, ಲುಬ್ಧಾಗ್ರೇಸರ ಚಕ್ರವರ್ತಿಯೆಂಬ ಬಿರುದನ್ನು

ಪಡೆಯುವಿಕೆ, ಅವತಾರದ ಉದ್ದೇಶವನ್ನು ಮರೆತು, ಐಶ್ವರ್ಯಮತ್ತರಾಗಿ
ನವಕೋಟಿನಾರಾಯಣರನ್ನು ಎಚ್ಚರಗೊಳಿಸಲೆಳಸಿ, ಭಗವಂತನು ಬ್ರಾಹ್ಮ
ರೂಪದಿಂದ ಬಂದು, ಬಗೆಬಗೆಯಾಗಿ ಪರೀಕ್ಷಿಸುವಿಕೆ, ಭಾರ್ಯೆಯ ಬ
ತ್ಕಾರದಿಂದ ದಾಸರು ಚಂದ್ರಭಾಗಾನದಿಗೆ ಗ್ರಹಣಸ್ನಾನಕ್ಕೆ ತೆರಳುವಿ
ಭಗವಂತನು ಪುರೋಹಿತ ಬ್ರಾಹ್ಮಣನಾಗಿ ಸಂಕಲ್ಪ ಹೇಳಲು ನದಿಗೆ ಬ
ವಿಕೆ, ನವಕೋಟಿನಾರಾಯಣರು ಪುರೋಹಿತನಿಗೆ ಕೊಡಬೇಕಾದ ಒಂ
ಕಾಸು ದಕ್ಷಿಣೆಯನ್ನು ಮತ್ತೊಂದುಸಾರಿ ಕೊಡುವಂತೆ ಸಾಲ ಹೇಳುವಿ
ಗ್ರಹಣಸ್ನಾನ ಮಾಡಿಕೊಂಡು ಹಿಂದಿರುಗಿ ಊರಿಗೆ ಬರುವಿಕೆ, ಪುತ್ರ
ವಿವಾಹ ನಿಮಿತ್ತವಾಗಿ ಬ್ರಾಹ್ಮಣರೂಪದಿಂದ ಅಂಗಡಿಗೆ ಯಾಚಕಕ್ಕೆ ಬ
ಭಗವಂತನನ್ನು ನವಕೋಟಿನಾರಾಯಣರು ಬೈದುಕಳುಹಿಸುವಿಕೆ, ಅ
ಭಾರ್ಯೆಯು ಯಾಚಕ ಬ್ರಾಹ್ಮಣನಿಗೆ ತನ್ನ ‘ರತ್ನದ ಮೂಗುತಿ’ ಯ
ದಾನವಾಗಿ ಕೊಡುವಿಕೆ, ಬ್ರಾಹ್ಮಣನು ಆ ಮೂಗುತಿಯನ್ನು ಆಕೆಯ ಪತಿ
ಬಳಿಗೇ ವಿಕ್ರಯಕ್ಕೆ ತೋರಿಸುವಿಕೆ, ಆತನದನ್ನು ಪೆಟ್ಟಿಗೆಯಲ್ಲಿಟ್ಟು ಮೊ
ಮಾಡಿ ಬಿರಬಿರನೆ ಮನೆಗೆ ಹೋಗಿ ಭಾರ್ಯೆಯನ್ನು ಆಗ್ರಹದಿಂದ ಕೇಳು
ಆಕೆಯು ಪತಿಯ ಅರ್ಭಟಕ್ಕೆ ಹೆದರಿ, ಬೇರೊಂದುಪಾಯವನ್ನು ಕಾ
ಕೈಯ್ಯಲ್ಲಿದ್ದ ವಜ್ರದುಂಗರ ವನ್ನು ನೀರಿನಲ್ಲಿ ತೇದು ಬಟ್ಟಲಿಗೆ ತುಂ
ಭಗವಂತನನ್ನು ಸ್ಮರಿಸಿ ವಿಷಪಾನಮಾಡತೊಡಗುವಿಕೆ, ಭಗವದನುಗ್ರ
ದಿಂದ ರತ್ನದ ಮೂಗುತಿಯೊಂದು ಮೇಲಿನಿಂದ ಆ ಬಟ್ಟಲಿನಲ್ಲಿ ಬೀ
ವಿಕೆ, ಆಕೆಯದನ್ನು ಪತಿಗೆ ಸಮರ್ಪಿಸುವಿಕೆ, ಆತನು ತಕ್ಷಣದಲ್ಲಿಯೇ ಅ
ಡಿಗೆ ಹೋಗಿ, ಪೆಟ್ಟಿಗೆಯ ಮೊಹರನ್ನು ಒಡೆದು ನೋಡಲಾಗಿ ಮೂಗ
ಮಾಯವಾಗಿರುವಿಕೆ, ಆತನ ಭ್ರಾಂತಿ, ಪುನಃ ಮನೆಗೆ ಬಂದು ಪತ್ನಿಯ
ಕೇಳುವಿಕೆ, ಆಕೆಯು ನಡೆದವೃತ್ತಾಂತವನ್ನು ಸ್ವಲ್ಪವೂ ಮರೆಮಾಚದೆ ಪ
ತಿಳಿಸುವಿಕೆ, ದಾಸರಿಗೆ (ನವಕೋಟಿನಾರಾಯಣರಿಗೆ) ಭಗವಂತನ ಭಕ್ತವ
ಲತೆಯು ದೃಢವಾಗಿ ಮನಸ್ಸಿಗೆ ತಟ್ಟುವಿಕೆ, ಗಾಢ ವೈರಾಗ್ಯ ಉಂಟಾ
ವಿಕೆ, ಸತಿಯ ಭಕ್ತಿಗೆಮೆಚ್ಚಿ ‘ಆದದ್ದೆಲ್ಲಾ ಒಳಿತೇ ಆಯಿತು’ ಎಂಬ ತ
ಪ್ರಾರಂಭ ಕೀರ್ತನೆಯಿಂದ ಆಕೆಯನ್ನು ಹೊಗಳುವಿಕೆ, ತಮ್ಮ ಸರ್ವ
ವನ್ನೂ ದಾನಧರ್ಮಗಳಿಗೆ ವಿನಿಯೋಗಿಸುವಿಕೆ, ತಮ್ಮ ಸುಕುಮಾರಿಯ
ರುಕ್ಮಿಣೀಬಾಯಿ ಎಂಬ ಕನ್ಯೆಯನ್ನು ಯೋಗ್ಯನಾದ ವರನಿಗೆ ಕೊಟ್
ಸಾಲಂಕೃತ ಕನ್ಯಾದಾನಮಾಡಿ, ಆಕೆಯನ್ನು ಪತಿಯೊಂದಿಗೆ ಕೊಟ್ಟು ಕ
ಹಿಸುವಿಕೆ, ಪತ್ನೀಪುತ್ರ ಸಮೇತರಾಗಿ ತೀರ್ಥಯಾತ್ರೆಗೆ ತೆರಳುವಿಕೆ ಮು
ದ ವಿಷಯಗಳು.

ಪಂಚಮಾಂಕ:- ವಿರಕ್ತರಾದ ಈ ದಂಪತಿಗಳು ಅಪ್ರಮೇಯಕ್ಷೇತ್ರ (ಮಳೂರು) ದಾಗ
ನೋಡಲೆಗೆ ಪ್ರಯಾಣಬೆಳೆಸುವಿಕೆ, ಶ್ರೀ ವ್ಯಾಸರಾಯಸ್ವಾಮಿಗಳ ಅ

...ಕ್ಕ ಪಾತ್ರರಾಗಿ "ಪುರಂದರದಾಸ" ರೆಂಬ ತಮ್ಮ ಅಂಕಿತವನ್ನು ಸಾಧು ವೆನಿಸಿ ಆಶೀರ್ವಾದ ಪಡೆಯುವಿಕೆ, ಕನಕದಾಸ ಪುರಂದರದಾಸರ ಮೈತ್ರಿ, ಅಲ್ಲಿಂದ ರಂಗನಗರಕ್ಕೆ ತೆರಳುವಿಕೆ, ರಂಗಧಾಮನ ದರ್ಶನಾರ್ಥವಾಗಿ ಬಂದಿದ್ದ ವಿಟ್ಠಲದಾಸರೆಂಬ ಭಗವದ್ಭಕ್ತರನ್ನು ಆಲಯದೊಳಗೆ ಬರಕೂಡ ದೆಂದು ಅರ್ಚಕರು ಅಡ್ಡಗಟ್ಟುವಿಕೆ, ಮತ್ತು ದೇವರ ಮುಂಭಾಗದಲ್ಲಿ ಪರದೆ ಗಳನ್ನು ಹಾಕಿ ಮರೆಮಾಡುವಿಕೆ, ಅರ್ಚಕರ ಅಜ್ಞೆಗೆ ಬಗೆಯುತ್ತ ಪುರಂ ದರದಾಸರು 'ಉಗಾಭೋಗ' ವೆಂಬ ಕೀರ್ತನೆಯನ್ನು ಹಾಡುವಿಕೆ, ಪರದೆ ಥಟ್ಟನೆ ಮೇಲಕ್ಕೆ ಹಾರಿಹೋಗುವಿಕೆ, ಅರ್ಚಕರ ಕ್ಷಮಾಪಣೆ, ದಾಸರು ಅಲ್ಲಿಂದ ಹೊರಟು ಪಂಡರಪುರಕ್ಕೆ ಬಿಜಯಮಾಡುವಿಕೆ, ಪಾಂಡುರಂಗಕ್ಷೇತ್ರ ವಾದ ಪಂಡರಪುರದಲ್ಲಿ ಕೆಲದಿವಸಗಳು ವಾಸಮಾಡುವಿಕೆ, 'ಪುರಂದರವಿಠಲ' ಎಂಬ ಅಂಕಿತದಿಂದ ಅನೇಕಾನೇಕ ಕೀರ್ತನೆಗಳನ್ನು ಹಾಡುವಿಕೆ, ಅಲ್ಲಿಂದ ಉಡುಪಿಗೆ ಪ್ರಯಾಣಮಾಡುವಿಕೆ, ಉಡುಪಿ ಕೃಷ್ಣನ ಸನ್ನಿಧಿಯಲ್ಲಿ ಪುರಂ ದರದಾಸರೂ ಕನಕದಾಸರೂ ಪುನಃ ಸಂಧಿಸುವಿಕೆ, ಏಕಾದಶೀ ದಿವಸ ಪುರಂ ದರದಾಸರು ಭಗವನ್ನಾಮ ಸಂಕೀರ್ತನೆ ಮಾಡುವಲ್ಲಿ 'ಶ್ರೀ ಕೃಷ್ಣಮೂ ರ್ತಿಯು ಜಗನ್ಮೋಹನಕರವಾದ ಶಿಶು ರೂಪವನ್ನು ಧರಿಸಿ, ದಾಸರ ಬಲ ಭುಜದಮೇಲ್ಭಾಗದಲ್ಲಿ ನಿಂತು ಕೊಳಲೂದುವಿಕೆ, ಈ ವೈಭವವನ್ನು ನೋಡು ತ್ತಲಿದ್ದ ಕನಕದಾಸರು ಆನಂದನರ್ತನ ಮಾಡುವಿಕೆ, "ಶ್ರೀನಿವಾಸಪ್ರಭು" ಎಂಬ ಭಗವದ್ಭಕ್ತರ ಸಹಾಯದಿಂದ ಪುರಂದರದಾಸರು ಭಾಗವತ ಪ್ರಸಂಗ ಮಾಡುವಿಕೆ, ಮಹಾಮಂಗಳವೆಂಬ ಶಾಂತಿಯ ದಿವಸ ನಡೆದ ಫಲಶ್ರುತಿ ಯಲ್ಲಿ ಶ್ರೀಕೃಷ್ಣಮೂರ್ತಿಯು ಬ್ರಹ್ಮಚಾರಿರೂಪವನ್ನು ಧರಿಸಿ 'ಜನ್ಮಾದ್ಯಸ್ಯ' ಎಂಬ ಭಾಗವತದ ಪ್ರಾರಂಭ ಶ್ಲೋಕಕ್ಕೆ ಅದ್ಭುತವಾಗಿ ವ್ಯಾಖ್ಯಾನಮಾಡು ವಿಕೆ, ಬ್ರಹ್ಮಚಾರಿಯ ಮುಖವರ್ಚಸ್ಸನ್ನೂ, ವಾಗ್ವೈಖರಿಯನ್ನೂ ಪರಿ ಕಿಸಿ, ಸಮ್ಮೋಹಿತರಾದ ದಾಸರು ಆ ಬಾಲಕನನ್ನು ಮಾತನಾಡಿಸಬೇಕೆಂದು ಸಮೀಪಕ್ಕೆ ಹೋಗುವಿಕೆ, ಕೂಡಲೇ ಬಾಲಕನು ಅದೃಶ್ಯವಾಗುವಿಕೆ, ದಾಸ ರದನ್ನು ಕಂಡು ಪರಿತಾಪಪಡುತ್ತ "ಓಡಿಬಾರಯ್ಯ ಶ್ರೀವೈಕುಂಠಪತಿಯೆ" ಎಂಬಕೀರ್ತನೆಯನ್ನು ಹಾಡುವಿಕೆ, ಶಾಂತಿಸಮಾರಾಧನೆ, ಅಲ್ಲಿಂದ ಅನೇಕ ಮಂದಿ ಸಾಧುಜನರೊಂದಿಗೆ ದಾಸರು ಕಾಶೀಯಾತ್ರೆ ಮಾಡುವಿಕೆ, ಭಾಗಿ, ರಥಿಯಲ್ಲಿ ಮಿಂದು, ವಿಶ್ವನಾಥನನ್ನು ಸಂದರ್ಶಿಸಿ ಸ್ತೋತ್ರಮಾಡುವಿಕೆ, ಅಲ್ಲಿಂದ ಗೋಕುಲ ಬೃಂದಾವನಕ್ಕೆ ಪೋಗುವಿಕೆ, ಶ್ರೀ ಬಾಲಗೋಪಾಲನ ಲೀಲಾಕ್ಷೇತ್ರವಾದ ಬೃಂದಾವನವನ್ನು ಸಂದರ್ಶಿಸಿ ಯಮುನಾತೀರ್ಥವನ್ನು ಸೇವಿಸಿ ಅಲ್ಲಿಂದ ಹಿಂದಿರುಗಿ ವಿದ್ಯಾನಗರವನ್ನು ಕುರಿತು ಬರುವಿಕೆ, ದಾರಿ ಯಲ್ಲಿ ಚಂದ್ರಶರ್ಮನೆಂಬ ಪಂಡಿತನ ನಾಸ್ತಿಕವಾದವನ್ನು ಪರಿಹರಿಸಿ ಭಗವಂ ತನ ಭಕ್ತವತ್ಸಲತೆಯನ್ನು ನಿರೂಪಿಸುವುದಕ್ಕಾಗಿ ದಾಸರು ಕೃಷ್ಣಸರ್ಪನಹುತ್ತ ದಲ್ಲಿ ಕೈಯಿಡುವಿಕೆ, ಸರ್ಪವು ದಾಸರಕೈಗೆ ಸುತ್ತಿಕೊಂಡು ಹೊರಗೆ ಬರು

ವಿಕೆ, ದಾಸರು ವೃಷ್ಟಾಗವೇಳೆ ಸೋಗೆದಲ್ಲಿ, ಶರಧಿ ಐಶ್ವರ್ಯವುತ್ತ ರಾಗಿ
ಹರಿಯ ನಂಬಿದಭಕ್ತರಿಗೆ ಭಯವಿಲ್ಲವೆನುತೀಉರಗಸನು ಮ...ಸ...ಹ
ಎಂಬ ಕೀರ್ತನೆಯನ್ನು ಹಾಡುವಿಕೆ, ಸರ್ಪವು ತನ್ನ ಹೆಡೆಯನ್ನು ಬಿಚ್ಚಿ
ತ್ತ ಹುತ್ತದೊಳಗೆ ಪ್ರವೇಶಿಸುವಿಕೆ ಮುಂತಾದ ವಿಷಯಗಳು.

ಪಂಚಮಾಂಕ:-ವಿದ್ಯಾನಗರದ ವೈಭವ, ಆನೆಗೊಂದಿಸಂಸ್ಥಾನದ ಅರಸರಾದ ಅಚ್ಯುತರಾಯ
ಪುರಂದರದಾಸರನ್ನು ಭಕ್ತಿವಿಶ್ವಾಸಪೂರ್ವಕವಾಗಿ ಬರಮಾಡಿಕೊಳ್ಳುವಿ
ದಾಸರು ಅಲ್ಲಿ ಕೆಲದಿವಸಗಳಿದ್ದು ಅಲ್ಲಿಂದ ತಿರುಪತಿಗೆ ಪ್ರಯಾಣಬೆಳಸುವಿ
ದಾರಿಯಲ್ಲಿ ಚಂದ್ರಗಿರಿ ಬಳಿಯಲ್ಲಿ ಮೃತನಾದ ಮಹಮ್ಮದೀಯ ಬಾಲಕನನ್
ಬದುಕಿಸಿ ಖುರುಷ್ಕಸರದಾರನಿಗೆ ಪುತ್ರದಾನಮಾಡುವಿಕೆ, ಶ್ರೀ ವೇಂಕಟಾ
ಲಪತಿಯನ್ನು ಸಂದರ್ಶಿಸಿ, ಕೀರ್ತನೆಗಳನ್ನು ಹಾಡುವಿಕೆ, ರಾಮಭಾ
ಎಂಬ ಧನಿಕಳಾದ ವಿತಂತುವು ತನಗೆ ಪ್ರಾಪ್ತವಾಗಿದ್ದ ಕುಷ್ಠವ್ಯಾಧಿಯ ಪ
ಹಾರಕ್ಕಾಗಿ ತಿರುಪತಿಗೆಬಂದು ಸ್ವಾಮಿಸೇವೆ ಮಾಡುತ್ತಿರುವಿಕೆ, ಪುರಂದ
ದಾಸರ ಭುಕ್ತಶೇಷವನ್ನು ಭುಂಜಿಸಿದರೆ ವ್ಯಾಧಿಪರಿಹಾರವಾಗುವುದೆಂ
ದೇವರಾಕೆಯ ಸ್ವಪ್ನದಲ್ಲಿ ಹೇಳುವಿಕೆ, ಆಕೆ ಮಾರನೇದಿವಸ ದಾಸರನ್
ಆಶ್ರಯಿಸಿ ಭುಕ್ತಶೇಷವನ್ನು ಭುಂಜಿಸುತ್ತಲೇ ವ್ಯಾಧಿನಿವಾರಣೆಯಾಗುವಿ
ದಾಸರ ಹಿತೋಪದೇಶದಂತೆ ಆ ವಿತಂತುವು ತನ್ನ ಆಸ್ತಿಯಲ್ಲಿ ವಿಶೇಷಭಾ
ವನ್ನು ಧರ್ಮಕಾರ್ಯಗಳಿಗಾಗಿ ವಿನಿಯೋಗಿಸುವಿಕೆ, ದಾಸರಾಕೆಗೆ ರಾಮತಾ
ಮಂತ್ರವನ್ನು ಉಪದೇಶಮಾಡುವಿಕೆ, ಅಲ್ಲಿಂದ ಪುನಃ ವಿದ್ಯಾನಗರಕ್ಕೆ ಬ
ವಿಕೆ, ಕನಕವಲ್ಲಿಯೆಂಬ ವೇಶ್ಯಾಂಗನೆಯ ವಿಚಾರದಲ್ಲಿ ದಾಸರ ಪ್ರಭಾವ
ನಿಷ್ಕಳಂಕವಾಗಿ ಪ್ರಕಾಶವಾಗುವಿಕೆ, ಪುರಂದರದಾಸರು ತಮ್ಮ ಸತೀಸ
ರಿಗೆ ಹಿತೋಪದೇಶ ಮಾಡುವಿಕೆ, ಪುತ್ರರಿಗೆ, ಅಭಿನವ ಪುರಂದರವಿಠಲ ಜ
ರ್ಧನಪುರಂದರವಿಠಲ, ವರದಪುರಂದರವಿಠಲ, ಗುರುಪುರಂದರವಿಠಲ, ಎ
ಅಂಕಿತಗಳನ್ನು ಕೊಡುವಿಕೆ, ತಮ್ಮ ಶಿಷ್ಯರಲ್ಲಿ ಅಗ್ರಗಣ್ಯರಾದ ವಿಜ
ದಾಸರಿಗೆ ಪರಮಾರ್ಥರಹಸ್ಯಗಳನ್ನು ತಿಳಿಸಿ, ಅವರನ್ನು ತಮ್ಮ ಪಟ್ಟಶಿ
ರನ್ನಾಗಿ ನಿಯಮಿಸುವಿಕೆ, ಐದುಲಕ್ಷ ಕೀರ್ತನೆಗಳನ್ನು ಶ್ರೀಹರಿಗೆ ಸ
ರ್ಪಿಸಿ ಮಂಗಳ ಹಾಡುವಿಕೆ, ಭಗವನ್ನಾಮಸಂಕೀರ್ತನ ಪ್ರಭಾವವನ
ಸರ್ವತ್ರ ವ್ಯಾಪ್ತಿಗೊಳಿಸಿ ಪರಂಧಾಮನ ದಿವ್ಯಸಾನ್ನಿಧ್ಯಕ್ಕೆ ತೆರಳುವಿಕೆ ಮ
ತಾದ ವಿಷಯಗಳು.

☞ ಈ ಗ್ರಂಥದಲ್ಲಿ ಶ್ರೀಪುರಂದರದಾಸರ ಮತ್ತು ಅವರ ಪತ್ನೀಪುತ್ರರ ಚಿತ್ರ
ಮುಖಪತ್ರದಲ್ಲಿ ಶ್ರೀಮುರಳೀಕೃಷ್ಣನ ಚಿತ್ರಪಟವೂ ಮತ್ತು ಪುರಂದರದಾಸರ ಜಗ
ವಾದ ಕೀರ್ತನೆಗಳಲ್ಲಿ ನೂರೆಂಟು ಕೀರ್ತನೆಗಳೂ ಮುದ್ರಿಸಲ್ಪಟ್ಟಿರುತ್ತವೆ. ಕರುಣಾ
ದ್ರನಾದ ಭಗವಂತನ ಕಲ್ಯಾಣಗುಣಗಳನ್ನು ಸಮಂಜಸವಾಗಿ ಬೋಧಿಸತಕ್ಕ ಈ ಗ್ರಂಥ
ಹರಿಕಥೆಯಂತೆಯೂ ಕಾದಂಬರಿಯಂತೆಯೂ ಓದುವುದಕ್ಕೂ ನಾಟಕರೂಪವಾಗಿ
ಸುವುದಕ್ಕೂ ಅನುಕೂಲವಾಗಿರುವಂತೆ ಉಭಯ ಸೌಕರ್ಯಗಳನ್ನನುಸರಿಸಿ ಸುಲಭವಾದ
ಶೈಲಿಯಲ್ಲಿ ವಿರಚಿಸಲ್ಪಟ್ಟಿರುತ್ತೆ. ಮನೋಹರವಾದ ಚಿತ್ರಪಟಗಳಿಂದ ಕಂಗೊಳಿಸ
ಈ ಗ್ರಂಥದ ಬೆಲೆ, ಅಂದವಾದ ಗ್ಲೇಜುಕಾಗದಗಳಮೇಲೆ ಮುದ್ರಿಸಲ್ಪಟ್ಟ ಕ್ಯಾಲಿಕೊ
ನಪ್ರತಿ ೧ ಕ್ಕೆ ರೂ. ೨-೦-೦ ಸಾಧಾರಣ ಕಾಗದಗಳ ಪ್ರತಿ ೧ ಕ್ಕೆ ರೂ. ೧-

☞ ಶಾ. ಶಿವರಾಮದಾಸ್, ಎಡಿಟರ್, ಆನಂದಚಂದ್ರಿಕೆ, ಬೆಂಗಳೂರು

